



ಓಂ

ಶಿಹಪೂರ ಅನವಾರ ಮಠದ

# ಶ್ರೀ ಚರಬಸವೇಶ್ವರ







# ಪುರಾಣವು.





ಕಿಂಕೆ ರೂ. ೩-೮-೦






॥ ಲಿಂಗಮಧ್ಯೆ ಜಗತ್ಸರ್ವಂ ॥

ಶಹಪೂರ ಆನವಾರ ಮಠದ

ಶ್ರೀ ಚರಬಸವೇಶ್ವರ

# ಪುರಾಣವು.



ಇದು ಜೋತಿಪುರ ಯಾನೆ ಜೋಗಿಹಳ್ಳಿ ಮಂಗಾಪುರ ಮೇಗೇರಿಮಠದ
ಚಂದ್ರಶೇಖರ ಕವಿಗಳಿಂದ
ವಿರಚಿತವಾದುದು.

★

ಪ್ರಕಾಶಕರು:
ಶಿವಕಥಾಭೂಷಣ ಬಂದಯ್ಯ ಮಾಷ್ಟರ್ ಬಿಜಾಪೂರ.
ಸಂಗೀತ ರತ್ನ, ಪಂಚಾಕ್ಷರ ಗವಾಯಿಗಳು.
ಬಿಲ್ಲಂ ಕೊಂಡಿ ಹಿರೇಮಠ, ಶಹಪೂರ.

★

( ಪ್ರಥಮ ಮುದ್ರಣ ೧೦೦೦ ಪ್ರತಿಗಳು )

ಬೆಲೆ ೩॥ ರೂ. :: ಶಕೆ ೧೮೭೨.

ಮುದ್ರಕರು:
ಶ್ರೀ ಶಂಕರಾನಂದ ಮುದ್ರಣಾಲಯ
ಯಾದಗಿರಿ.



~~1982~~

## ಪ್ರಕಾಶಕರ ಪ್ರೇಮದ ಅರಿಕೆ.

---

ಪುರಾಣ ಪ್ರಕಾಶಕ್ಕಾಗಿ ಧನಸಹಾಯ ಮಾಡಿದ ಅನಂತ ಗ್ರಾಮಗಳ ಧರ್ಮಾಭಿಮಾನಿಗಳಿಗೂ ಹಾಗೂ ಪ್ರೆಸ್ಸಿನ ಮಾಲಕರಿಗೂ ಶಿವಶರಣರಾದ ಬಸವಯ್ಯ ತಾತನವರು ನಿರಂತರವಲ್ಲಿ ಸುಖ-ಸಂಪತ್ತುಗಳನ್ನು ಕೊಟ್ಟು ಚಿರಕಾಲ ಕಾಪಾಡಲೆಂದು ಹಾರೈಸುತ್ತೇವೆ.

— ಪ್ರಕಾಶಕರು.



---

ದೊರೆಯುವ ವಿಳಾಸ:-

ಬಂದಯ್ಯ ಮಾಷ್ಟರ್ ಮುಕ್ಕಾಂ ಬಿಜಾಸ್ಪೂರ.
ಪೋಷ್ಟ ತಾಲೂಕ ಸುರಪುರ ಜಿ॥ ಗುಲಬರ್ಗಾ.
ಸಂಗೀತ ರತ್ನ, ಪಂಚಾಕ್ಷರ ಗವಾಯಿಗಳು
ಮು॥ ಪೋಷ್ಟ- ಶಹಪೂರ. ಜಿ॥ ಗುಲಬರ್ಗಾ.

॥ ಓಂ ॥



ಮಹಾಶಿವಶರಣರಾದ

★ ಶ್ರೀ ಚರಬಸವತಾತನವರು ★

ಶಿಹಪೂರ.

# ಅರ್ಪಣ.

ಶ್ರೀ ಪರಮ ತಪಸ್ವಿಗಳೂ, ಮಹಾಮಹಿಮರೂ
ಶಿವಪೂಜಾ ಧುರಂಧರರೂ,
ವೈರಾಗ್ಯ ಮೂರ್ತಿಗಳೂ ಆದ







ಮುಗುಳನಾಗಾವಿ ಕಟ್ಟಿಮನಿ ಹಿರೇಮಠದ
ಸ್ಥಿರಚರಪಟ್ಟಾಧ್ಯಕ್ಷರಾದ ಪರಮಪೂಜ್ಯ ಲಿಂಗೈಕ್ಯ ಶ್ರೀ. ಷ|| ಬ್ರ||
ಸಿದ್ಧಲಿಂಗಶಿವಾಚಾರ್ಯರ
ದಿವ್ಯ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ
ಈ ಗ್ರಂಥ ಕುಸುಮವನ್ನು
ಸಮರ್ಪಿಸುತ್ತೇವೆ.

— ಪ್ರಕಾಶಕರು.

ಓಂ

ದಾಸೋಹ ಮೂರ್ತಿಗಳೂ ಲಿಂಗಪೂಜಾನಿಷ್ಠರೂ
ಶರಣ ಸಂತಾನರೂ ಆದ,



## ಶ್ರೀ ಪೂಜ್ಯ ದೊಡ್ಡಪ್ಪ ಅಪ್ಪಾ

ಉರ್ಫ: ಶ್ರೀ ಶರಣಬಸವೇಶ್ವರ ಸಂಸ್ಥಾನ ಗುಲಬರ್ಗಾ ಇವರು
ಶ್ರೀ ಚರಬಸವೇಶ್ವರ ಪುರಾಣ ಪ್ರಕಟನೆಗೆ
ಉದಾರಾಶ್ರಯವಿತ್ತಿದ್ದಾರೆ.
ಇವರಿಗೆ ನಮ್ಮ ಹೃತ್ಪೂರ್ವಕ ಅಭಿವಂದನೆಗಳು.

—ಪ್ರಕಾಶಕರು

—:( ಸಿರಿಗನ್ನಡಂ ಗೆಲ್ಗೆ ):—

# ಮುನ್ನುಡಿ

ಶ್ರೀ ವೇದಮೂರ್ತಿಗಳಾದ ಮಂಗಾಪುರ ಮೇಗೇರಿ ಮಠದ ವಿದ್ವಾನ್, ಪಂಡಿತ ಚಂದ್ರಶೇಖರಶಾಸ್ತ್ರಿಗಳವರು ವಿರಚಿಸಿದ ಈ ಚರಬಸವೇಶ್ವರ ಪುರಾಣಕ್ಕೆ ಮುನ್ನುಡಿಯನ್ನು ಬರೆಯುವ ಪ್ರಸಂಗ ಬಂದುದಕ್ಕೆ ತುಂಬಾ ಸಂತೋಷವಾಗುತ್ತದೆ.

ಈ ಗ್ರಂಥಕರ್ತರು ಬಳ್ಳಾರಿ ಜಿಲ್ಲಾ ಕೂಡ್ಲಿಗಿ ತಾಲೂಕು ಮಂಗಾಪುರದ ಸುಪ್ರತಿಷ್ಠಿತ ಗುರುವರ್ಗದ ಮನೆತನದ ವಂಶಕ್ಕೆ ಸೇರಿದವರು ಮತ್ತು ಆಚಾರಶೀಲ ಮನೆತನದವರು ಇವರು ಬಾಲ್ಯದಿಂದಲೂ ಬಹು ಶ್ರಮವಹಿಸಿ, ವಿಘ್ನ ಪರಂಪರೆಗಳನ್ನೆಲ್ಲ ದಾಂಟಿ ಚೆನ್ನಾಗಿ ವಿದ್ಯಾಭ್ಯಾಸವನ್ನು ಮಾಡಿ ಮಾತೃಭಾಷೆಯಾದ ಕನ್ನಡದಲ್ಲಿಯೂ, ದೇವಭಾಷೆಯಾದ ಸಂಸ್ಕೃತವಲ್ಲಿಯೂ ಘನವಾದ ಪಾಂಡಿತ್ಯವನ್ನು ಪಡೆದು, ಉಭಯ ಕವಿತಾ ವಿಶಾರದರಾಗಿರುವುದಲ್ಲದೆ, ರಾಷ್ಟ್ರಭಾಷೆಯಾದ ಹಿಂದಿ, ಅಂತರ್ರಾಷ್ಟ್ರಭಾಷೆಯಾದ ಇಂಗ್ಲೀಷ್, ಪ್ರಾಕೃತ, ಪಾಲಿ, ಉರ್ದು, ಬ್ರಾಹ್ಮಿ, ಮುಂತಾದ ಭಾಷೆಗಳಲ್ಲಿಯೂ ಚೆನ್ನಾಗಿ ಪರಿಣತರಾಗಿರುವರು. ಜ್ಯೋತಿಷ್ಯ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಿರುವರು. ಈ ಜಗತ್ತಿನಲ್ಲಿ ಸಾಧಾರಣವಾಗಿ ಒಬ್ಬೊಬ್ಬರಿಗೆ ಒಂದೊಂದು ಕಲೆಯಲ್ಲಿ ಮಾತ್ರ ಬುದ್ಧಿಶಕ್ತಿ ಇರುವುದುಂಟು. ಈ ಮಹಾಶಯರಿಗಾದರೋ ವಕ್ತೃತ್ವಕಲೆ, ಲೇಖನಕಲೆ, ಕವಿತಾಕಲೆ ಈ ಮೂರು ಕಲೆಗಳಲ್ಲಿಯೂ ಅಸಾಧಾರಣವಾದ ಪ್ರತಿಭಾಶಕ್ತಿಯು ಒಡಮೂಡಿರುವುದೊಂದು

ಅಪೂರ್ವವಾದ ವಿಷಯುವು. ಇವರ ಭಾಷಣವಾದರೊ ಅನೇಕ ಭಾಷೆಗಳಮೇಲಿನ ಪ್ರಭುತ್ವದಿಂದಲೂ, ಸುಂದರವಾದ ಭಾಷಾಶೈಲಿಯಿಂದಲೂ, ಉಚ್ಚ ಭಾವನೆಗಳಿಂದ ಯುಕ್ತವಾದ ಕಲ್ಪನಾ ನೈಪುಣ್ಯದಿಂದಲೂ, ವೀರಾವೇಶದಿಂದಲೂ, ಸಮುದ್ರದಂತೆ ಬಹು ಗಂಭೀರವೂ, ಆಳವೂ, ಸ್ಫೂರ್ತಿದಾಯಕವೂ, ಅಸ್ಖಲಿತವೂ, ಪಂಡಿತ ಪಾಮರ ಭೋಗ್ಯಯೋಗ್ಯವೂ, ಸರ್ವಜನಾಕರ್ಷಣೀಯುವೂ, ಆದುಮೆಂದು ನನ್ನ ಸ್ವಂತ ಅನುಭವದ ಮಾತು. ಇವರ ಕವಿತ್ವದ ಶಕ್ತಿಯಂತೂ ಅಪಾರವಾದುದು. ಇವರು ವರಕವಿಗಳು. ಇವರ ಕವಿತಾ ಸರಣಿಯು ಪರಮೋತ್ಕೃಷ್ಟವಾಗಿಯೂ, ಹೃದಯಂಗಮವಾಗಿಯೂ ಗಂಗಾಪ್ರವಾಹದಂತೆ ಯಾವ ಅಡೆತಡೆಗಳಿಲ್ಲದೆ ನಿರರ್ಗಳವಾಗಿ ಪ್ರವಹಿಸುವುದಾಗಿರುತ್ತದೆ. ಇವರು ತಮ್ಮ ಅಮೋಘವಾದ ಕವಿತಾಪ್ರಭೆಯಿಂದ ಅನೇಕ ಸಭೆ, ಸಮ್ಮೇಲನಗಳಲ್ಲಿ ಕವಿರತ್ನ, ಕವಿರಾಜ, ಕವಿಭೂಷಣ, ಕವಿ ಕಂಠೀರವ ಇತ್ಯಾದಿ ಬಿರುದುಗಳನ್ನು ಪಡೆದವರಾಗಿರುತ್ತಾರೆ. ಇವರು ಬಹು ಕುಶಲರು, ಚಾಣಾಕ್ಷರು, ಲೋಕ ವ್ಯವಹಾರದಲ್ಲಿ ನಿಪುಣರು, ನಡೆದಂತೆ ನುಡಿದು ನುಡಿದಂತೆ ನಡೆಯುವವರು, ಸತ್ಯ ಸದಾಚಾರ ನಿಷ್ಠರು, ಬಹು ಮಿತಭಾಷಿಗಳು, ಘನವಿನಯರು, ತಮ್ಮ ಬುದ್ಧಿ ಸಾಮರ್ಥ್ಯವನ್ನು ಪ್ರಯತ್ನ ಪೂರ್ವಕವಾಗಿ ಕಾರ್ಯ ಮಾಡಿ ತೋರಿಸುವರೇ ಹೊರತು ಸುಮ್ಮನೆ ಬಾಯಿಮಾತಿನಿಂದ ತಮ್ಮ ಪೌರುಷವನ್ನು ಎಂದೂ ಹೊಗಳಿಕೊಳ್ಳತಕ್ಕವರಲ್ಲ. ಇವರು ತಮ್ಮ ಆತ್ಮಸ್ತುತಿಮಾಡಿಕೊಳ್ಳುವದೆಂದರೆ ಮಹಾಪಾಪವೆಂದು ತಿಳಿದಿರುವರು. ಒಟ್ಟಿನಲ್ಲಿ ಶ್ರೀ ಶಾಸ್ತ್ರಿಗಳವರು ವಿದ್ಯಾ, ವಿನಯ, ಪಾಂಡಿತ್ಯಗಳ ಪ್ರಭೆಯಿಂದ ಬೆಳಗುವವರು, ಕನ್ನಡ ನಾಡಿನ ಹಿರಿಯ ಪಂಡಿತರೂ, ಮಹಾ ಕವೀಶ್ವರರೂ, ಮಹಾ ಮೇಧಾವಿಗಳೂ ಆಗಿ ಶ್ರೇಷ್ಠವಾದ ಸದ್ಗುಣ ಸಮೂಹದಿಂದ ಆದರ್ಶ ವ್ಯಕ್ತಿಗಳ ಮಾಲಿಕೆಯುಲ್ಲಿ ಸೇರತಕ್ಕವರಾಗಿರುತ್ತಾರೆ.

ಇವರು ದೇವದತ್ತವಾದ ಕವಿತಾಶಕ್ತಿಯಿಂದ ಈಗಾಗಲೆ ಖಟ್ವಾಂಗೇಶ್ವರ ಪುರಾಣ, ಗುರುನಂಜೇಶ್ವರ ಕಾವ್ಯ, ಮಹಾಶಿವಶರಣ ದೇವರದಾಸಿಮಯ್ಯ ಪುರಾಣ ಶಿವಲೀಲಾಮೃತ ಮಹಾಪುರಾಣ, ದೇವರಸೂಗೂರು ವೀರೇಶ್ವರ [ಸೂಗೂರೇಶ್ವರ] ಪುರಾಣ, ಸದ್ಗುರು ವಿಜಯರುದ್ರದೇವ ಪುರಾಣ, ಖಟ್ವಾಂಗೇಶ್ವರ ಚಂಪು ಮುಂತಾದ ಪುರಾಣಗಳನ್ನೂ ಸಾಹಿತ್ಯ, ವೇದಾಂತ, ಜ್ಯೋತಿಷ್ಯ, ಧಾರ್ಮಿಕ, ನೈತಿಕ, ಸಾಮಾಜಿಕ ಗ್ರಂಥಗಳನ್ನೂ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬಹು ಮನೋಹರವಾಗಿ ವಿರಚಿಸಿರುತ್ತಾರೆ. ಇದುವರೆಗೂ ಇವರು ಬರೆದಿರುವ ಗ್ರಂಥಗಳನ್ನೆಲ್ಲ ಪ್ರಿಂಟುಮಾಡಿ ಪ್ರಚುರ ಪಡಿಸಲಿಕ್ಕೆ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳು ಬೇಕಾಗುತ್ತವೆ. ವೈದಿಕ ವರ್ಗದ ಶಾಸ್ತ್ರಿಗಳವರಿಂದ ಇಷ್ಟು ರೂಪಾಯಿಗಳನ್ನು ವೆಚ್ಚಮಾಡಿ ಪ್ರಿಂಟುಮಾಡಿಸುವುದು ದುಸ್ಸಾಧ್ಯವಾದ ಮಾತು. ಆದುದ

ರಿಂದ ಸಮಾಜಾಭಿಮಾನಿಗಳಾಗಲಿ, ಕರ್ಣಾಟಕಾಭಿಮಾನಿಗಳಾಗಲಿ ಮುಂದೆ ಬಂದು ಪ್ರಿಂಟುಮಾಡಿಸಿ ಪ್ರಚುರಪಡಿಸಿದರೆ ಎಷ್ಟೋ ಉಪಯೋಗವಾಗುತ್ತದೆ. ಇನ್ನೂ ಇವರ ಜೀವಮಾನದಲ್ಲಿ ಎಷ್ಟು ಪುರಾಣಗಳು, ಎಷ್ಟು ಗ್ರಂಥಗಳು ಇವ ರಿಂದ ಉತ್ಪನ್ನವಾಗುವವೊ ಏನೋ. ಈಗಾಗಲೆ ಇವರ ಅತ್ಯದ್ಭುತ ಕವಿತಾಶಕ್ತಿ ಯನ್ನು ಕಂಡು ಎಷ್ಟೋ ಜನಗಳು ಕಲಿಯುಗದ ವೇದವ್ಯಾಸರೆಂತಲೂ, ನವಯು ಗದ ಕವಿ ಕಾಳಿದಾಸರೆಂತಲೂ ಕರೆಯಲಿಕ್ಕೆ ಹತ್ತಿರುತ್ತಾರೆ. ಇವರು ಇನ್ನೂ ಉತ್ಕೃಷ್ಟವಾದ ಪುರಾಣಗಳನ್ನೂ, ಗ್ರಂಥಗಳನ್ನೂ ಬರೆದು ವೇದವ್ಯಾಸ, ಕಾಳಿದಾಸರೇ ಯಾಕಾಗಬಾರದು ?

ಇವರು ಇಂತಹ ಪ್ರತಿಭಾಶಾಲಿ ಕವಿಗಳಾಗಿರುವುದನ್ನು ಕಂಡು ನಾನು ಮತ್ತು ಕಾವ್ಯತೀರ್ಥ ಗುರುಸಿದ್ಧಶಾಸ್ತ್ರಿಗಳು ಈಗ ಸ್ವಲ್ಪ ದಿವಸಗಳ ಹಿಂದೆ ಆಗಿಹೋದ ಮಹಾಮಹಿಮರಲ್ಲೊಬ್ಬರಾದ ಶಹಪುರದ ಶ್ರೀ ಚರಬಸವಾರ್ಯರ ಚರಿತ್ರೆಯನ್ನು ಪುರಾಣ ರೂಪದಲ್ಲಿ, ಸರಳಶೈಲಿಯಲ್ಲಿ ಬರೆಯಬೇಕೆಂದು ಆಗ್ರಹದ ವಿನಂತಿಮಾಡಿಕೊಂಡಿದ್ದರಿಂದ ನಮ್ಮ ವಿನಂತಿಯನ್ನು ಅಂಗೀಕರಿಸಿ ಚರಬಸವ ಯೋಗಿಗಳ ಸಂಪೂರ್ಣ ಚರಿತ್ರೆಯನ್ನೂ, ಅವರು ಮಾಡಿದ ಪವಾಡಗಳನ್ನೂ ಸರಳ ಶೈಲಿಯಲ್ಲಿ ಮನೋರಂಜಕವಾಗುವಂತೆ, ಸಾಮಾನ್ಯ ಜನಸಮೂಹಕ್ಕೂ ಬೋಧಪ್ರದವಾಗುವಂತೆ ಪ್ರಸ್ತುತ ಪುರಾಣದಲ್ಲಿ ಹೃದಯಂಗಮವಾಗಿ ಚಿತ್ರಿಸಿ ಓದುಗರ ಕೈಗೆ ನೀಡಿದ್ದಾರೆ.

ಈ ಪುರಾಣದಲ್ಲಿ ಮಹಾಕಾವ್ಯದ ಮುಖ್ಯ ಗುಣಗಳೆಲ್ಲ ಅಡಕವಾಗಿದ್ದು, ಪೂರ್ವ ಕವಿಗಳ ಪದ್ಧತಿಯಂತೆ ವರ್ಣನೆಯು ರೀತಿ, ಭಾಷಾಲಾಲಿತ್ಯ ಮುಂತಾದ ವುಗಳಿರುವವಲ್ಲದೆ, ಈಗಿನ ಕಾಲದ ಓದುಗರಿಗೆ ಅನುಕೂಲವಾಗುವಂತೆ ದ್ರಾಕ್ಷಾಪಾಕವೆನಿಸಿ. ಶಬ್ದಾರ್ಥಾಲಂಕಾರಗಳಿಂದ ಸರಳಭಾಷಾಶೈಲಿಯಲ್ಲಿ ಅಲಂಕಾರಿಕವಾಗಿ ಸುಂದರವಾಗಿ ಗ್ರಂಥವನ್ನು ರಚಿಸಿದ್ದಾರೆ.

ಇನ್ನೊಂದು ವಿಶೇಷವೇನೆಂದರೆ ಶ್ರೀ ಚರಬಸವಯೋಗಿಗಳು ಎಲ್ಲೆಲ್ಲಿ ತಮ್ಮ ಪವಾಡಗಳನ್ನು ತೋರ್ಪಡಿಸಿರುತ್ತಾರೆಯೋ ಅಲ್ಲಲ್ಲಿ ಭಕ್ತರ ಬಯಕೆಯಂತೆ ಅಷ್ಟಾವರಣ' ಪಂಚಾಚಾರ, ಷಟ್‌ಸ್ಥಳ, ವೀರಶೈವ ನಿತ್ಯಾಚರಣೆ, ವೀರಶೈವ ಮತ ಸರ್ವೋತ್ಕೃಷ್ಟತೆ, ಲಿಂಗಾಂಗ ಸಾಮರಸ್ಯ ಮುಂತಾದ ವೀರಶೈವ ತತ್ವಗಳ ಸಾರ ಸಂಗ್ರಹವನ್ನೂ ಮತ್ತು ಭಕ್ತಿ ಯೋಗ, ವಚನಶಾಸ್ತ್ರದ ಮಹತ್ವ, ಗೃಹಸ್ಥಾಶ್ರಮ ಧರ್ಮ, ಬ್ರಹ್ಮಚರ್ಯಾಶ್ರಮ ಧರ್ಮ, ಮಾನವ ಧರ್ಮ, ಸ್ತ್ರೀಧರ್ಮ, ಸತ್ಯ, ಅಹಿಂಸೆ, ಪ್ರೇಮ, ನಾಗರೀಕತೆಯ ನಿಜಾರ್ಥ, ಸಮತಾವಾದದ ನಿಜತತ್ವ

ಇತ್ಯಾದಿ ವಿಷಯಗಳನ್ನು ಬೋಧಿಸಿರುವುದೊಂದು ಈ ಪುರಾಣದ ವೈಶಿಷ್ಟ್ಯ. ಕವಿಗಳು ಅಲ್ಲಲ್ಲಿ ಜನಸಾಮಾನ್ಯರು ತಿಳಿದುಕೊಳ್ಳಬಹುದಾದ ಸದಾಚಾರ, ಪರೋಪಕಾರ, ದಾನ, ಧರ್ಮ ಮುಂತಾದ ಅನೇಕ ಸದುಪದೇಶಗಳನ್ನು ತುಂಬಿ, ಆಧುನಿಕ ಕವಿಗಳಿಗೂ, ರಸಿಕ ಜನರಿಗೂ, ಮನೋಹ್ಲಾದಕರವಾಗುವಂತೆ ತಮ್ಮ ಕಾವ್ಯವಾಹಿನಿಯನ್ನು ಪುರಾತನ, ನೂತನ ಸಂಗಮವಾಗಿ ಹರಿಸಿರುವುದರಿಂದ ಈ ಪುರಾಣವನ್ನು ' ಮಾದರಿ ಪುರಾಣ, ವೆಂದು ಹೇಳಲಿಕ್ಕೆ ನನಗೆ ಅತ್ಯಂತ ಆನಂದವೆನಿಸುತ್ತದೆ. ವಿದ್ಯಾನಿಧಿಗಳಾದ ಈ ಕವಿಗಳು ಸರಸ ಮಾಧುರ್ಯ ನೂತನ ಯುಕ್ತಿಗಳನ್ನು ಹೊರಪಡಿಸುವ ನವೀನ ಕಾವ್ಯಗಳನ್ನು ನಿರ್ಮಿಸುವ ನೂತನ ಬ್ರಹ್ಮರು. ಇವರು ಈ ಮೊದಲೆ ಬರೆದಿರುವ ಶಿವಶರಣ ದೇವರದಾಸಿಮಯ್ಯ ಪುರಾಣ, ಶಿವಲೀಲಾಮೃತ ಮಹಾಪುರಾಣ, ದೇವರಸೂಗೂರು ವೀರೇಶ್ವರ ಪುರಾಣ, ಖಟ್ವಾಂಗೇಶ್ವರ ಚಂಪು ಮೊದಲಾದ ಗ್ರಂಥಗಳನ್ನು ನೋಡಿದರೆ ಇವರ ಪಾಂಡಿತ್ಯದ ಪ್ರಭಾವವು ಸರ್ವರಿಗೂ ವಿದಿತವಾಗುತ್ತದೆ. ಇವರು ಕಾವ್ಯಗಳನ್ನು ಸುಲಭಶೈಲಿಯಲ್ಲಿ ಬರೆಯಲು ಎಷ್ಟು ನಿಪುಣರೋ ಅಷ್ಟೇ ಉಕ್ಕಿನ ಕಡಲೆಯಂತೆ ಕಠಿಣ ಶೈಲಿಯಲ್ಲಿಯೂ ಕೂಡ ಬರೆಯಲು ನಿಪುಣರಾಗಿರುವರು. ಇವರ ಈ ಪುರಾಣವು ಕುಮಾರ ವ್ಯಾಸನ ಮಹಾಭಾರತದಂತೆ ಹೈಸ್ಕೂಲ್ ತರಗತಿಗೆ ಪಠ್ಯಪುಸ್ತಕವಾಗಿಡಲು ಯೋಗ್ಯವಾಗಿರುತ್ತದೆ.

ಇಂದಿನ ಪ್ರಗತಿ ಪ್ರಪಂಚದಲ್ಲಿ ಪುರಾಣ ಕಾವ್ಯಗಳಿಗೆ ಪುರಸ್ಕಾರ ಕಡಿಮೆಯೆಂದು ಕೆಲವರು ನಿರುತ್ಸಾಹದ ಮಾತುಗಳನ್ನಾಡಿಕೊಳ್ಳುವದುಂಟು. ಭಾರತದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲರಂಥ ಪ್ರಪಂಚ ನಾಯಕರೇ ಪ್ರಾಚೀನ ಪೌರಾಣಿಕ ಸಾಹಿತ್ಯದ ಮಹತ್ವವನ್ನು ಒಪ್ಪಿರುವಾಗ ನಿರುತ್ಸಾಹದ ಮಾತಿನ್ನೇಕೆ ? " ಭಾರತದ ಪೌರಾಣಿಕ ಸಾಹಿತ್ಯವು ಸಮೃದ್ಧವಾಗಿದೆ. ವೈವಿಧ್ಯಪೂರ್ಣವಿದೆ. ಸುಂದರವೂ ಅರ್ಥಪೂರ್ಣವೂ ಆಗಿದೆ. ಎಂದಿನಂತೆ ಇಂದೂ ಈ ಮಾದರಿಯ ಸಾಹಿತ್ಯದ ಅವಶ್ಯಕತೆ ಇದ್ದೇ ಇದೆ. ಇದೂ ಒಂದು ಲೋಕ ಶಿಕ್ಷಣ ಮತ್ತು ಸಂಸ್ಕೃತಿ ಪ್ರಸರಣದ ಸಾಧನವು " ಎಂದು ಚೆನ್ನಾಗಿ ಸಮರ್ಥನೆ ಮಾಡಿದ್ದಾರೆ. ಇದರಮೇಲಿಂದ ಪುರಾಣ ಕಾವ್ಯಗಳು ಲೋಕಶಿಕ್ಷಣ, ಸಂಸ್ಕೃತಿ ಪ್ರಸರಣದ ಸಾಧನೆಗೆ ಎಷ್ಟು ಉಪಯುಕ್ತಗಳಾಗಿರುತ್ತವೆಂಬುದು ಪ್ರತಿಯೊಬ್ಬರಿಗೂ ಚೆನ್ನಾಗಿ ವ್ಯಕ್ತವಾಗದೆ ಇರದು.

ಈ ಪುರಾಣವಲ್ಲಿ ಚಿತ್ರಿತವಾಗಿರುವ ವಿಷಯಗಳು ಅತ್ಯುಕ್ತಿ ಅತಿಶಯೋಕ್ತಿಗಳಾಗಿರದೆ ನಿಜವಾದವುಗಳಾಗಿರುತ್ತವೆ. ಯಾಕಂದರೆ ಈ ಪುರಾಣ ಪುರುಷರು

ಈಗ ಸ್ವಲ್ಪ ದಿವಸಗಳ ಹಿಂದೆಯೇ ಆಗಿ ಹೋದವರಾಗಿರುತ್ತಾರೆ. ಇವರು ಒಳ್ಳೇ ಮಹಿಮಾಶಾಲಿಗಳೂ, ಭಕ್ತೋದ್ಧಾರ ಧುರೀಣರೂ ಆಗಿದ್ದಾರೆ- ಇಂಥಾ ನಾಸ್ತಿಕ್ಯ ಕಾಲದಲ್ಲಿಯೂ ಘನತರವಾದ ಪವಾಡಗಳನ್ನು ಮಾಡಿ ಆಧ್ಯಾತ್ಮಿಕ ಜೀವನವು ನಂದಿಹೋಗದೆ ಇನ್ನೂ ಜೀವಂತವಾಗಿರುವಂತೆ ಮಾಡಿದ್ದಾರೆ. ಈ ಮಹಾಮಹಿಮರ ಭಕ್ತಿಭರಿತವಾದ ಚರಿತ್ರೆಯು ಓದುಗರನ್ನು ತಲೆದೂಗಿಸದೆ ಬಿಡುವುದಿಲ್ಲ.

ಇಂತಹ ಮಹಾಮಹಿಮರಾದ ಶ್ರೀ ಚರಬಸವಯೋಗಿಗಳ ಪುರಾಣದ ಸವಿಯನ್ನು ಸಹೃದಯರಾದ ಓದುಗರು, ಶ್ರೀ ಚರಬಸವಾರ್ಯರ ಅನುಯಾಯಿಗಳು, ವೀರಶೈವಾಭಿಮಾನಿಗಳು ಸವಿದು ಇದರಲ್ಲಿರುವ ಕೆಲವಂಶಗಳನ್ನಾದರೂ ಆಚರಣೆಯಲ್ಲಿ ತರಲು ಪ್ರಯತ್ನಿಸಿದರೆ ಗ್ರಂಥಕರ್ತೃಗಳ ಶ್ರಮವು ಸಾರ್ಥಕವಾದಂತಾಗುತ್ತದೆ. ಬಹಳ ಹೇಳುವದೇನು ಈ ಪುರಾಣವನ್ನು ಸಂಗ್ರಹಿಸಿಕೊಳ್ಳುವುದು ಪ್ರತಿಯೊಬ್ಬ ವೀರಶೈವನ ಮತ್ತು ಕನ್ನಡಿಗನ ಕರ್ತವ್ಯವಾಗಿರುತ್ತದೆ.

ಮಹಾ ಕವಿಗಳಾದ ಪಂಡಿತ ಚಂದ್ರಶೇಖರಶಾಸ್ತ್ರಿಗಳ ಇನ್ನಿತರ ಗ್ರಂಥಗಳೂ ಬೆಳಕಿಗೆ ಬಂದು ವಾಗ್ದೇವಿಗೆ ಅಲಂಕಾರವಾಗಲೆಂದೂ, ಇನ್ನೂ ಇಂತಹ ನೂತನ ಕೃತಿರತ್ನಗಳನ್ನು ರಚಿಸಲು ಶ್ರೀ ಚರಬಸವೇಶ್ವರನು ಇವರಿಗೆ ದೀರ್ಘಾಯುಷ್ಯವನ್ನೂ, ಅನುಕೂಲತೆಗಳನ್ನೂ ದಯಪಾಲಿಸಲೆಂದು ಹಾರೈಸುತ್ತೇನೆ.



ಯಾದಗಿರಿ.

ತಾ. ೧೦—೬—೧೯೫೧

★



ಬೇಗವಾಟ ಮಠೀಯ
ವಿದ್ವಾನ್ ವೀರೇಶ್ವರಶಾಸ್ತ್ರಿಗಳು,
ಶಂಕರ ಸಂಸ್ಕೃತ ಕಾಲೇಜ್ ಪಂಡಿತರು,
ಅಮರವಾಣಿ ಪತ್ರಿಕೆಯ ಮುಖ್ಯ ಸಂಪಾದಕರು.

# ಪ್ರಸ್ತಾವನೆ

ಇಚ್ಛಾಮಾತ್ರದಿಂದಲೇ ಚರಾಚರಾತ್ಮಕವಾದ ಸೃಷ್ಟಿಯಂ ಕಲ್ಪಿಸಿ, ಬಹು ಮಮಕಾರದೊಡನೆ ಅದನ್ನು ಪಾಲಿಸಿ, ಲಯಮಂ ಗೈಯುವದಕ್ಕೋಸ್ಕರ ಅಚಿಂತ್ಯವಾದ ಅನೇಕ ವಿಧ ಆಟಗಳನ್ನಾಡುವದರಲ್ಲಿ ರಮಣನಾಗಿದ್ದು, ವಾತಾಂಬು ಪರ್ಣಾಶನರಾಗಿ, ತಪವನ್ನಾಚರಿಸುವ ಕಾರ್ಯದೋಳ್ ಅನಂತ ಯುಗಗಳನ್ನು ವ್ಯಯಮಾಡಿನಂಥ ತಪೋಧನರ ಕಣ್ಣುಗಳ ಮುಂದೆ ಸುಳಿಯದೇ ಭಕ್ತಾಭಿಮಾನಿಯೆಂಬ ಬಿರುದನ್ನು ಧಾರಣೆ ಮಾಡಿಹ, ಶ್ರೀಮತ್ಪರಮ ಮಂಗಲಮೂರ್ತಿಯಾದ, ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ, ಸಮಸ್ತ ಜಗದಾಧಾರನಾದ ಪರಶಿವನು, ಪ್ರಾಣಿಕೋಟಿಗಳಿಗೆ ಐಹಿಕಾಮುಷ್ಮಿಕ ಭೋಗಗಳನ್ನುಣಬಡಿಸುತ್ತ, ಅವರ ಪರಿಪಕ್ವದಶೆಯಲ್ಲಿ ಸರ್ವೋತ್ಕೃಷ್ಟವಾದ ಮಾನವ ಜನ್ಮವನ್ನು ಕೊಟ್ಟು, ಮನುಷ್ಯ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಲುದ್ಯುಕ್ತರಾದ ಮುಮುಕ್ಷುಗಳಿಗೆ ಜ್ಞಾನಕ್ರಿಯಾಮಾರ್ಗಗಳಿಂದ ಉದ್ಧರಿಸಿ, ನಿತ್ಯಾನಂದ ಸುಖದಲ್ಲಿರಿಸುತ್ತಿರುವನೆಂಬುದು ನಿಗಮಾಗಮಗಳ ಸಿದ್ಧಾಂತವಿರುತ್ತದೆ.

ಜಗದೀಶ್ವರನು ಈ ಬ್ರಹ್ಮಾಂಡದಲ್ಲಿ ಶಿವಧರ್ಮಗ್ಲಾನಿಯುಂಟಾದಾಗ ತನ್ನ ಪ್ರಮಥರ ಅವತಾರವನ್ನು ಮಾಡಿಸಿ, ನೀತಿ, ಭಕ್ತಿ, ಜ್ಞಾನ, ವೈರಾಗ್ಯಗಳ ಮೂಲಕ ಲೋಕವನ್ನು ಉದ್ಧಾರಗೊಳಿಸುವನು. ಶಿವಾಂಶ ಸಂಭೂತರಾದ ಮಹಾಪುರುಷರು ಈ ಜಗತ್ತಿನಲ್ಲಿ ಅವತರಿಸಿ, ಲೋಕೋದ್ಧಾರ ಕಾರ್ಯಗಳನ್ನು ಮಾಡಿದ ಚರಿತ್ರೆಗಳು ಅನಂತವಾಗಿರುತ್ತವೆ. ಅಂತಹ ಮಹಾಪುರುಷರ ಚರಿತ್ರೆಗಳನ್ನೇ ಸಾಮಾನ್ಯ ಜನರಿಗೆ ಮನೋರಂಜಕವಾಗುವ, ಬೋಧಪ್ರದವಾಗುವ ರೀತಿಯಲ್ಲಿ, ಕಾವ್ಯರೂಪವಾಗಿ ಕವಿಗಳು ವರ್ಣಿಸಿ ಬರೆಯುವುದು ಕನ್ನಡ ಸಾಹಿತ್ಯದಲ್ಲಿ ನಿರಂತರವೂ, ಸ್ಫುಟವಾಗಿ ಕಂಗೊಳಿಸುತ್ತದೆ.

ಇದೇ ಸ್ತುತ್ಯ ಪರಂಪರೆಯನ್ನನುಸರಿಸಿ ನಾನು ಇದುವರೆಗೂ ಸುಲೇಪೇಟೆ

ಖಟ್ವಾಂಗೇಶ್ವರ ಪುರಾಣ, ಭರತನೂರು ಗುರುನಂಜೇಶ್ವರ ಕಾವ್ಯ, ದೇವರಸೂಗೂರು ವೀರೇಶ್ವರ [ ಸೂಗೂರೇಶ್ವರ ] ಪುರಾಣ, ಮಹಾಶಿವಶರಣ ದೇವರ ದಾಸಿಮಯ್ಯ ಪುರಾಣ, ಜಾನೇಕಲ್ಲು ಸದ್ಗುರು ವಿಜಯ:ರುದ್ರದೇವ ಪುರಾಣ, ಖಟ್ವಾಂಗೇಶ ಚಂಪು ಮೊದಲಾದ ಪುರಾಣಗಳನ್ನೂ, ಇವೂ ಅಲ್ಲದೆ ಶಿವಪಂಚಾಕ್ಷರಿ ಮಹಾತ್ಮ್ಯ ಪ್ರಕಾಶಿಕೆ, ಶಿವಪಂಚಾಕ್ಷರಿ ತಾರಾವಾಲಿಕಸ್ತವ, ಭಕ್ತಿಯೋಗ ಪ್ರದೀಪಿಕೆ, ಧರ್ಮ ತತ್ವಚಿಂತಾಮಣಿ, ವಾಗ್‌ಬ್ರಹ್ಮತ್ವ ನಿರಸನ ಹರಮಹಿಮಾಶತಕ, ಭ್ರಮೋಚ್ಚಾ ಟನ ನಾಟಕ, ನೀತಿ ಮುಕ್ತಾವಲಿ, ಜೋತಿಷ್ಯ ಕಲಾನಿಧಿ, ಜೋತಿಷ್ಯ ತತ್ವವಿವೇಕ, ವೇದಾಂತ ತತ್ವಾರ್ಥ ಚಂದ್ರಿಕೆ, ವೀರಶೈವ ನಿಜಧರ್ಮ ದರ್ಪಣ, ವಚನವಾಙ್ಮಯ ಪ್ರಭಾವ, ಮಾನವರೆಲ್ಲರೂ ಪರಮಾತ್ಮನ ಪ್ರೇಮದ ಪುತ್ರರು, ಕವಿತಾ ಕಲೆ ಮುಂತಾದ ಗದ್ಯ ಪದ್ಯಾತ್ಮಕವಾದ ಗ್ರಂಥಗಳನ್ನೂ ಬರೆದಿದ್ದೇನೆ. ಯುದ್ಧಪರಿಸ್ಥಿತಿಯ ಮೂಲಕ ಕಾಗದದ ಬೆಲೆಯು ಮಿತಿಮೀರಿ ಏರಿದ್ದರ ಪರಿಣಾಮವಾಗಿ, ಇವುಗಳಲ್ಲಿ ಯಾವೂ ಇನ್ನೂ ಅಚ್ಚಿನ ಮನೆಯನ್ನೇ ಕಂಡಿರುವದಿಲ್ಲ. ಇನ್ನುಮೇಲೇನಾದರೂ ಸಾವಕಾಶವಾಗಿ ಒಂದೊಂದು ಪ್ರಿಂಟಾಗಿ ಪ್ರಚಾರದಲ್ಲಿ ಬರಬಹುದೆಂಬ ಭರವಸೆಯಿದೆ.

ಇತ್ತೀಚಿಗೆ ನನ್ನ ಚಿರಪರಿಚಿತರೂ, ಪರಮಮಿತ್ರರೂ, ಯಾದಗಿರಿ ಶಂಕರಾನಂದ ಪ್ರಿಂಟಿಂಗ್ ಪ್ರೆಸ್ಸಿನ ಒಡೆಯರೂ, ಅಮರವಾಣಿ ಪತ್ರಿಕೆಯ ಉಪಸಂಪಾದಕರೂ ಆದ ಗೋಡ್ಯಾಳ ಮಠದ ಕಾವ್ಯತೀರ್ಥ ಪಂಡಿತ ಗುರುಸಿದ್ಧಶಾಸ್ತ್ರಿಗಳವರು ಮತ್ತು ಯಾದಗಿರಿ ಶಂಕರ ಸಂಸ್ಕೃತ ಕಾಲೇಜಿನ ಪಂಡಿತರೂ, ಅಮರವಾಣಿ ಪತ್ರಿಕೆಯ ಮುಖ್ಯ ಸಂಪಾದಕರೂ ಆದ ಬ್ಯಾಗವಾಟ ಮಠದ ವಿದ್ವಾನ್ ವೀರೇಶ್ವರ ಶಾಸ್ತ್ರಿಗಳವರು ನನ್ನಿಂದ ವಿರಚಿತವಾದ ಕೆಲವು ಪುರಾಣಗಳನ್ನು ನೋಡಿ ಅತ್ಯಂತ ಹರ್ಷಗೊಂಡು ಒಳ್ಳೇ ಮಹಿಮಾಶಾಲಿಗಳೂ, ಭಕ್ತೋದ್ಧಾರ ಧುರೀಣರೂ, ಇತ್ತೀಚಿನ ಶಿವಶರಣರಲ್ಲೊಬ್ಬರೂ ಆದ ಶಹಪೂರ ಅನವಾರ ಮಠದ ಶ್ರೀ ಚರಬಸವಾರ್ಯರ ಚರಿತ್ರೆಯನ್ನು ಪುರಾಣ ರೂಪವಾಗಿ ಬಹು ಸರಳಶೈಲಿಯಲ್ಲಿ ಅಂದರೆ ಬಹುಜನರು ಮಾತನಾಡುವ ರೂಢಿಯ ಶಬ್ದಗಳಿಂದಲೇ ಓದಿದ ಕೂಡಲೇ ಪಂಡಿತ-ಪಾಮರರಿಗೂ ಅರ್ಥವಾಗುವದಾಗೆ ರಚಿಸಿ ಕೀರ್ತಿಕಾಯರಾಗಬೇಕೆಂದು ಅಗ್ರಹದ ವಿನಂತಿ ಮಾಡಿಕೊಂಡರು ನಾನು ಈ ಉಭಯ ಪಂಡಿತರ ಅಭಿಪ್ರಾಯದ ಮೇರಿಗೆ ಇಂತಹ ಮಹಾಮಹಿಮರ ಸೇವೆಮಾಡಿ ಈ ಜಡ ಶರೀರವನ್ನು ಸಾರ್ಥಕಗೊಳಿಸಿಕೊಳ್ಳುವದು ಶ್ರೇಯಸ್ಕರವೆಂದು ಭಾವಿಸಿ, ಈಗಿನ ಕಾಲದ ಓದುಗರಿಗೆ ಅನುಕೂಲವಾಗುವಂತೆ ಸರಳವಾದ ಭಾಷಾಶೈಲಿಯಲ್ಲಿಯೇ ಪುರಾಣವನ್ನು ಬರೆಯಲು ಸಿದ್ಧನಾದೆನೆಂದು ತಿಳಿಸಲು ಪರಮಾನಂದವಾಗುತ್ತದೆ.

ಇನ್ನು ಕಥಾನಾಯಕರ ಜೀವನ ಚರಿತ್ರೆಯ ಕೆಲವು ಆವಶ್ಯಕವಾದ ವಿಷಯಗಳನ್ನು ವಾಚಕರ ಅವಗಾಹನೆಗೆ ತರಲು ಇಚ್ಛಿಸುತ್ತೇನೆ. ನಿಜಾಂ ಕರ್ನಾಟಕಕ್ಕೊಳಪಟ್ಟ ಕಲಬುರ್ಗಿ ಜಿಲ್ಲಾ ಶಹಪೂರ ತಾಲೂಕು 'ಅನವಾರ, ಎಂಬ ಹೆಸರುಳ್ಳ ಗ್ರಾಮದಲ್ಲಿ ವೀರಶೈವರ ಆಚಾರ ವಿಚಾರಕ್ಕಾಗಿ ಒಂದು ಮಠವಿರುವುದು. ಆ ಮಠದಲ್ಲಿ ಶೀಲವಂತಯ್ಯ, ಅವ್ವಮ್ಮ ಎಂಬ ಗುರು ಲಿಂಗ ಜಂಗಮ ಪ್ರೇಮಿಗಳಾದ ವೀರ ಮಾಹೇಶ್ವರ ದಂಪತಿಗಳು ವಾಸಮಾಡಿಕೊಂಡಿದ್ದರು. ಅವರ ಗರ್ಭದಲ್ಲಿ ಶಾಲಿವಾಹನ ಶಕ ೧೭೪೪ ರಲ್ಲಿ ಕಥಾನಾಯಕರು ಜನ್ಮಿಸಿದರು. ಇವರ ಬಾಲ ಸ್ವಭಾವವು ವಿಲಕ್ಷಣವಾಗಿದ್ದಿತು. ಬಾಲ್ಯದಲ್ಲಿ ವಿದ್ಯಾಭ್ಯಾಸವನ್ನು ಮಾಡಿ, ಮಾಹೇಶ್ವರ ದೀಕ್ಷೆಯನ್ನು ಪಡೆದು, ಸದಾಚಾರ ಸಂಪನ್ನರಾಗಿದ್ದರು. ತಕ್ಕಮಟ್ಟಿಗೆ ವಿದ್ಯೆಯನ್ನು ಕಲಿತಿದ್ದರೂ ಬರುಬರುತ್ತ ಶಿವಶರಣರ ವಚನಶಾಸ್ತ್ರದಲ್ಲಿಯೂ, ಶಿವಾನುಭವ ವಿದ್ಯೆಯಲ್ಲಿಯೂ, ವೀರಶೈವ ಮತತತ್ವ ಸಿದ್ಧಾಂತದಲ್ಲಿಯೂ ಅಗಾಧವಾದ ಪಾಂಡಿತ್ಯವನ್ನು ಸಂಪಾದಿಸಿದ್ದರು. ತಂದೆತಾಯಿಗಳು ಅವರಿಗೆ ಯೌವ್ವನ ಪ್ರಾಪ್ತವಾದಕೂಡಲೆ ಲಗ್ನವನ್ನು ಮಾಡಿದರು. ಲಗ್ನವಾದ ಕೆಲವು ದಿವಸಗಳಲ್ಲಿಯೇ ತಂದೆತಾಯಿಗಳ ವಿಯೋಗವಾಯಿತು. ಆಗ ಕಥಾನಾಯಕರಾದ ಚರಬಸವಾರ್ಯರ ತಲೆಯಮೇಲೆಯೇ ಸಂಸಾರದ ಭಾರವೆಲ್ಲ ಬಿದ್ದಿತು. ಇವರು ಸಂಸಾರದಲ್ಲಿ ಸಂಘಟಿತರಾದರೂ ಕಮಲದ ದಳವು ನೀರಿನಲ್ಲಿದ್ದಾಗ್ಯು ಅದು ನೀರನ್ನು ಹೇಗೆ ಅಂಟಿಸಿಕೊಂಡಿರುವುದಿಲ್ಲವೋ ಅದರಂತೆ ಸಂಸಾರದಿಂದ ನಿರ್ಲಿಪ್ತರಾಗಿದ್ದರು. ಮಾತುಮಾತಿಗೂ ಶಿವಶರಣರ ವಚನಗಳೇ ಅವರ ಬಾಯಿಯಲ್ಲಿ ಹೊರಡುತ್ತಿದ್ದವು. ವೀರ ಮಾಹೇಶ್ವರರ ಗರ್ಭದಲ್ಲಿ ಉದಯಿಸಿ ಮಠಾಧಿಕಾರಿಗಳಾಗಿದ್ದರೂ, ಅವರು ತಮ್ಮ ಜನ್ಮದಲ್ಲಿ ಒಂದುಸಾರಿಯಾದರೂ ಭಿಕ್ಷವನ್ನು ಬೇಡಿರಲಿಲ್ಲ. "ಧರೆಯೊಳು ಯಾಚನೆಗಿಂತಲೂ ಲಘುತರಮುಂಟೆ" ಎಂಬ ನಿಜಗುಣಶಿವಯೋಗಿಗಳ ವಾಕ್ಯದಂತೆ ಭಿಕ್ಷೆ ಬೇಡುವದು ಕೀಳುತನವೆಂದು ಭಾವಿಸುತ್ತಿದ್ದರು. ಮತ್ತು "ಕಂಡಕಂಡವರಿಗೆ ಕೈಯೊಡ್ಡಿ ಬೇಡುವವರನು ದೇವನೊಲ್ಲ" ಎಂಬ ಶಿವಶರಣರ ವಾಕ್ಯವನ್ನರಿತು ಯಾವುದಾದರೂ ಒಂದು ಕಾಯಕವನ್ನು ಕೈಕೊಂಡು, ಧನವನ್ನು ಸಂಪಾದಿಸಿ ಅದನ್ನು ಯಾವಾಗಲೂ ಗುರು ಲಿಂಗ ಜಂಗಮದ ತೃಪ್ತಿಯ ದಾಸೋಹಕ್ಕಾಗಿಯೇ ವಿನಿಯೋಗಿಸಬೇಕೆಂದು ದೃಢಸಂಕಲ್ಪಮಾಡಿಕೊಂಡರು. ಆ ಬಳಿಕ ಮಹಾಶಿವಶರಣ ದೇವರದಾಸಿಮಯ್ಯನವರಂತೆ ಜವಳಿ ವ್ಯಾಪಾರವನ್ನು ಕೈಕೊಂಡು ಕಾರ್ಯ ಪ್ರವೃತ್ತರಾದರು. ಕೆಲವು ದಿನಗಳಲ್ಲಿ ಇವರ ಸತ್ಯನೇಮದ ವ್ಯಾಪಾರವು ಜಗತ್ತಿನಲ್ಲಿ ವಿಶೇಷವಾಗಿ ಹಬ್ಬಿತು. ವ್ಯಾಪಾರವು ಭರದಿಂದ ಸಾಗಿತು. ಧನಸಂಚಯವು ಅಪಾರವಾಗಹತ್ತಿತು. ಇವರು ಸಂಗ್ರಹಿಸಿದ ಧನವನ್ನು ಪೆಟ್ಟಿಗೆಯಲ್ಲಾಗಲಿ, ಟ್ರೆಜರಿಯಲ್ಲಾಗಲಿ ಹಾಕದೆ, ನಿರಂತರವೂ ದಾಸೋಹ ಕಾರ್ಯಕ್ಕಾಗಿಯೇ ವಿನಿಯೋಗಿಸು

ಓಂ

ಗ್ರಂಥಕರ್ತರು



ಮಂಗಾಪುರ ಮೇಗೇರಿಮಠದ ಕವೀಂದ್ರ

**ಚಂದ್ರಶೇಖರಶಾಸ್ತ್ರಿಗಳು**

( ಪತ್ರಿಸ್ವಾಮಿಗಳು )

ಜೋತಿಪುರ ಯಾನೆ ಜೋಗಿಹಳ್ಳಿ.



ತ್ತಿದ್ದರು. ಇವರು ಎಡೆಬಿಡದೆ ನಡೆಸುತ್ತಿದ್ದ ದಾಸೋಹ ಕಾರ್ಯಕ್ಕೆ ಜವಳಿ ವ್ಯಾಪಾರ ಒಂದೇ ಮುಖ್ಯ ಸಾಧನ ಉದ್ಯೋಗವಾಗಿತ್ತು.

ಚರಬಸವಾರ್ಯರ ಭಕ್ತಿಯಾದರೋ ವರ್ಣಿಸಲಸದಳವಾದುದು. ಗುರುಲಿಂಗಜಂಗಮರ ಸೇವೆಗಾಗಿ ತಮ್ಮ ಅಂಗವನ್ನು ನಿರಂತರ ಸವಿಸಹತ್ತಿದರು. ಉಚ್ಚ ನೀಚವೆನ್ನದೆ, ಧನಿಕ ದರಿದ್ರರೆನ್ನದೆ ಬಂದವರಿಗೆಲ್ಲ ಒಂದೇ ವಿಧವಾಗಿ ಉಪಚರಿಸಿ ತಮ್ಮ ಘನವಾದ ಭಕ್ತಿಯ ಬೆಳಕನ್ನು ಹರಡಿದರು. ಪತಿಯ ದಾಸೋಹ ಕಾರ್ಯದಲ್ಲಿ ಸತಿಯಾದ ಸೂಗವ್ವನವರು ಪತಿಯ ನೆರಳಿನಂತೆ ಅನುಕರಿಸುತ್ತಿದ್ದರು. ಇವರಿಗೆ ಮಹಲಿಂಗಯ್ಯ, ರಾಚೋಟಯ್ಯ ಎಂಬ ಈರ್ವರು ತಮ್ಮಂದಿರು, ಗುರುಬಸವಯ್ಯನೆಂಬ ಓರ್ವ ಪುತ್ರನು ಇದ್ದನು. ಮಹಲಿಂಗಯ್ಯನು ಅಣ್ಣನ ಆಜ್ಞೆಯನ್ನು ಎಂದೂ ಮೀರುತ್ತಿರಲಿಲ್ಲ. ರಾಚೋಟಯ್ಯನು ಮಾತ್ರ ಲೌಕಿಕ ವರ್ಗಕ್ಕೆ ಸೇರಿದವನಾದ್ದರಿಂದ, ಅಣ್ಣನವರು ಕೈಕೊಂಡಿರುವ ದಾಸೋಹವಾಗಲಿ, ಭಕ್ತಿಯಾಗಲಿ ಸರಿಬೀಳಲಿಲ್ಲ. ಇದೆಲ್ಲ ನಮ್ಮ ಸಂಸಾರಕ್ಕೆ ತೊಂದರೆಯೆಂದು ಭಾವಿಸಿ, ಚರಬಸವದೇವನನ್ನು ಮಠದ ಆಸ್ತಿಯಲ್ಲಿ ಸರಿಯಾಗಿ ಪಾಲುಕೊಡಬೇಕೆಂದು ಕೇಳಿಕೊಂಡನು. ಆಗ ಅವರು ನಮಗೆ ಈ ಮಠವೂ ಬೇಡ, ಭಾಗವೂ ಬೇಡ ನೀವೇ ಸುಖವಾಗಿ ಸಂಸಾರಮಾಡಿಕೊಂಡು ಇರಬೇಕೆಂದು ಹೇಳಿ ಹರಸಿ ಆಸ್ತಿಯನ್ನೆಲ್ಲ ಬಿಟ್ಟು ಧರ್ಮಪತ್ನಿ, ಪುತ್ರಾದಿಗಳೊಡನೆ ಶಹಪುರಕ್ಕೆ ಆಗಮಿಸಿದರು. ಶಹಪುರದ ಶಿವಭಕ್ತರು ಇವರ ಭಕ್ತಿಯನ್ನೂ, ತ್ಯಾಗವನ್ನೂ ಕೊಂಡಾಡಿ ಇರಲಿಕ್ಕೆ ಆಶ್ರಯವನ್ನು ಕೊಟ್ಟು ಮಠವನ್ನು ಕಟ್ಟಿಸಿಕೊಟ್ಟರು. ಈ ಮಠದಲ್ಲಿಯೇ ಜವಳಿ ವ್ಯಾಪಾರದಿಂದುಂಟಾದ ಲಾಭದಿಂದ ದಾಸೋಹದ ಕಾರ್ಯವನ್ನು ನಿರ್ವಿಘ್ನವಾಗಿ ಸಾಗಿಸಿದರು. ಇವರ ನಿರ್ವಂಚನ ದಾಸೋಹದಿಂದಲೂ, ಭಕ್ತಿಯ ಪ್ರಭಾವದಿಂದಲೂ ಮಾಡಿದ ಮಹತ್ವಗಳು ಅನಂತವಾಗಿರುತ್ತವೆ ಇವರ ಚರಿತ್ರೆಯಲ್ಲಿ ಪ್ರತಿಯೊಂದು ವಿಷಯಗಳು ಮಹತ್ವದವಾಗಿದ್ದರೂ, ಪುರಾಣ ಶ್ರವಣಕ್ಕಾಗಿ ಕಟ್ಟಿದ ಮಂಟಪಕ್ಕೆ ಹತ್ತಿದ ಬೆಂಕಿಯನ್ನು ಶಾಂತಮಾಡಿದ ಮಹಿಮೆ, ಫೌಜದಾರನಿಗೆ ತೋರಿಸಿದ ಶೀರೆಯ ಮಹಿಮೆ, ಗೂಟಕ್ಕೆ ತಗಲು ಹಾಕಿದ ಒಂದೇ ಜೋಳಿಗೆಯಲ್ಲಿಯೇ ಮನಸ್ಸಿನಲ್ಲಿ ಇಚ್ಛಿಸಿದ ಸರ್ವ ಪದಾರ್ಥಗಳು ಯಥೇಷ್ಟವಾಗಿ ತಕ್ಷಣವೇ ದೊರಕುವ ಮಹಿಮೆ, ಕೌಲಗಿ ಎಂಬ ಗ್ರಾಮದಲ್ಲಿ ತೋರಿದ ಹರಿವಾಣಗಳ ಮಹಿಮೆ, ಕೊಡಚಿಗಿಯಲ್ಲಿ ತೋರಿದ ನೀರಿನ ಮಹಿಮೆ, ಬಳಬಟ್ಟಿಯಲ್ಲಿ ತೋರಿದ ಹಮ್ಮಿಣಿಯ ಭವಿಷ್ಯ ಸೂಚನಮಹಿಮೆ, ದೇವರ ಸೂಗೂರು ಸಾಕ್ಷಾತ್ ವೀರಭದ್ರೇಶ್ವರನೇ (ಸೂಗೂರೇಶ್ವರನೇ) ಜಂಗಮ ವೇಷವನ್ನು ಧರಿಸಿ ಜಗದ್ಗುರು ಶ್ರೀ ರೇವಣಸಿದ್ಧ ಪುರಾಣದ ಸಮಾಪ್ತಿ ಸಮಾರಾಧನೆಯ ಕಾರ್ಯಕ್ಕೆ ಸಕಲ ಸಾಹಿತ್ಯವನ್ನು ವದಗಿಸಿಕೊಟ್ಟ ಅತ್ಯದ್ಭುತ

ಮಹಿಮೆ, ಮಿತ ಪ್ರಸಾದದಿಂದ ಅಮಿತ ಜನ ತೃಪ್ತಿಪಡಿಸುವ ಮಹಿಮೆ, ನಿರ್ವಂಜನ ದಾನ, ಇಂತಹ ಕೆಲವು ಸಂಗತಿಗಳು ಅತಿಮಹತ್ವವುಳ್ಳವುಗಳಾಗಿರುತ್ತವೆ ಈ ಪುರಾಣವನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡರೆ ಮಾತ್ರ ಆತನ ಪವಾಡಗಳ ಮತ್ತು ಆಚಾರ ವಿಚಾರಗಳ, ಉಪದೇಶಗಳ ಘನತೆಯು ಗೊತ್ತಾಗಿ ಸಂತೋಷ ಸಾಗರದಲ್ಲಿ ಲೋಲಾಡುವುದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲ. ಚರಬಸವದೇವನು ಬೋಧಿಸುವ ಅಮೌಲ್ಯವಾದ ತತ್ವ ವಿಚಾರಗಳಂತೂ ಅವಶ್ಯವಾಗಿ ಪ್ರತಿಯೋರ್ವ ಮಾನವನೂ ಓದಿ ತಿಳಿದುಕೊಳ್ಳತಕ್ಕವುಗಳಾಗಿರುತ್ತವೆ.

ಈ ಮಹಾಮೂರ್ತಿಗಳು ಲಿಂಗಶರೀರ ಬಿಡುವ ಕಾಲದಲ್ಲಿ ನೂರು ವರ್ಷಗಳು ತುಂಬಲಿಕ್ಕೆ ಬಂದಿದ್ದರೂ ಇಪ್ಪತ್ತೈದು ವರ್ಷಗಳ ನವತರುಣನಂತೆ ಅತ್ಯಂತ ಉತ್ಸುಕತೆಯಿಂದ ಉದ್ಯೋಗವನ್ನು ಮಾಡುತ್ತಿದ್ದರು. ಇವರು ಶಾಲಿವಾಹನ ಶಕೆ ೧೮೪೪ ನೆ ಫಾಲ್ಗುಣ ಬ|| ೩೦ ಶುಕ್ರವಾರ ಸಾಯಂಕಾಲದಲ್ಲಿ ಸ್ಥೂಲಶರೀರವನ್ನು ಬಿಟ್ಟು ಲಿಂಗದಲ್ಲಿ ಬೆರೆದರು. ಇವರು ಲಿಂಗೈಕ್ಯರಾಗಿ ಇಲ್ಲಿಗೆ ಇಪ್ಪತ್ತಾರು ವರ್ಷಗಳಾಗುತ್ತ ಬಂದವು. ಇವರ ಸಮಾಧಿಯು ಮಹಿಮೆಯು ಪ್ರಭಾವವೂ ಅತಿಶಯವಾಗಿ ಹರಡಿರುತ್ತದೆ. ಈ ಆಧುನಿಕ ವಾತಾವರಣದಲ್ಲಿ ಐಹಿಕ ಸುಖಾಪೇಕ್ಷೆಯು, ಜನಗಳ ಚಿತ್ತಭೂಮಿಕೆಯಲ್ಲಿ ಆಧಿಪತ್ಯ ಮಾಡುತ್ತಿದ್ದರೂ, ಅದರ ಪ್ರಭಾವಕ್ಕೆ ಒಳಗಾಗದೆ, ಗೃಹಸ್ಥಾಶ್ರಮಿಗಳಾಗಿಯೂ ಕೂಡ ಅಘಟನಾಘಟನವಾದ ಪವಾಡಗಳನ್ನು ತೋರಿದ ಚರಬಸವೇಶ್ವರರಂತಹ ಭಕ್ತಿ, ಜ್ಞಾನ, ವೈರಾಗ್ಯಪರರಾದ ಮಹಾವಿಭೂತಿಗಳು ಹಿಂದಿನ ಶತಮಾನಗಳಲ್ಲಿಯೂ ಅಪರೂಪವೆಂದರೆ ಅತಿಶಯೋಕ್ತಿಯಾಗಲಾರದು. ನಾಸ್ತಿಕ್ಯ ಬುದ್ಧಿಯಿಂದ ಪವಾಡಗಳನ್ನು ನಂಬದೆ, ಹಿಂದಿನ ಮಹಾ ಮಹಾ ಪುರುಷರ ಮಹಿಮೆಗಳನ್ನೆಲ್ಲ ಕಲ್ಪನಾ ಕಥೆಯೆಂದು ಭಾವಿಸಿರ್ದ ಕೆಲವು ನಿರೀಶ್ವರ ವಾದಿಗಳು ಈ ಮಹಾ ಮಹಿಮನ ಪವಾಡಗಳನ್ನು ಪ್ರತ್ಯಕ್ಷ ಕಣ್ಣಾರೆ ಕಂಡು ಅತ್ಯಂತ ಚಕಿತರಾಗಿ ಆಸ್ತಿಕ್ಯದತ್ತ ಮನವನ್ನು ತಿರುಗಿಸಿದುದು ಸ್ತೋತ್ರಾರ್ಹವಾಗಿರುತ್ತದೆ. ಈ ಮಹಾತ್ಮರ ಪುರಾಣದಲ್ಲಿ ೧೩೦೦ ಭಾಮಿನೀ ಷಟ್ಪದಿ ಪದ್ಯಗಳು, ಇಪ್ಪತ್ತೊಂದು ಸಂಧಿಗಳು ಸುಸಂಘಟಿತಗಳಾಗಿ ಓದುಗರಿಗನಾಯಾಸವಾಗಿ ಆನಂದ ಪ್ರದಗಳಾಗಿರುತ್ತವೆ. ಈ ಪುರಾಣದಲ್ಲಿ ವರ್ಣನೆಗೆ ಅಷ್ಟು ಮಹತ್ವವನ್ನು ಕೊಡದೆ, ಪ್ರತಿಯೊಬ್ಬರಿಗೂ ಉಪಯೋಗವಾಗುವ ತತ್ತ್ವೋಪದೇಶದ ಕಡೆಗೆ ಹೆಚ್ಚು ಮಹತ್ವವನ್ನು ಕೊಡಲಾಗಿದೆ. ಕಾಲಕ್ಕೆ ತಕ್ಕಂತೆ ಸರಳ ಶೈಲಿಯಲ್ಲಿಯೇ ರಚಿಸಲಾಗಿದೆ. ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಕೆಲವು ಕ್ಲಿಷ್ಟ ಶಬ್ದಗಳು ಬಂದಿರುತ್ತವೆ.

ಈ ಪುರಾಣವನ್ನು ಬರೆಯುವ ಕಾಲಕ್ಕೆ ನನಗೆ ಕೆಲವು ಸೂಚನೆಗಳನ್ನಿತ್ತ

ರಾಯಚೂರು ವೀರಶೈವ ಬೋರ್ಡಿಂಗಿನ ಸಂಚಾಲಕರೂ, ಅಲ್ಲಿಯ ಹೆಡ್ಮಾಸ್ಟರ್ ಹೈಸ್ಕೂಲಿನ ಕನ್ನಡ ಪಂಡಿತರೂ, ಅಮರವಾಣಿ ಪತ್ರಿಕೆಯ ಪ್ರಕಾಶಕರೂ ಆದ ದಿನ್ನಿ ಮಹಾಧ್ಯಕ್ಷ ಸೂಗವೀರ ಶಾಸ್ತ್ರಿಗಳವರಿಗೆ ನನ್ನ ಸಾದರದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಮತ್ತು ಚರಬಸವಾರ್ಯರ ಕೆಲವು ಪವಾಡಗಳ ವಿಷಯಗಳನ್ನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ದೊರಕಿಸಿಕೊಟ್ಟ ಗುರುಲಿಂಗಜಂಗಮ ಸೇವಾ ಸಕ್ತರಾದ ಶ್ರೀಮಾನ್ ಯರಮರ್ಸ ಸಿದ್ಧರಾಮಪ್ಪನವರು ಹೈಕೋರ್ಟ ವಕೀಲ ರಾಯಚೂರು ಇವರ ಉಪಕಾರವನ್ನು ನಾನು ಇಲ್ಲಿ ಸ್ಮರಿಸದೆ ಇರಲಾರೆನು. ಕಾವ್ಯತೀರ್ಥ ಪಂಡಿತ ಗುರುಸಿದ್ಧಶಾಸ್ತ್ರಿಗಳವರು ಭಕ್ತಿಯಿಂದ ಬರೆಯಿಸಿದ ಈ ಪುರಾಣವನ್ನು ಹರಗುರುಚರ ಚರಣಸೇವಾಸಕ್ತರಾದ ಶಹಪೂರ ಬಿಲ್ಲಂಕೊಂಡಿ ಮಠದ, ಗಾನಕಲಾನಿಧಿ, ಸಂಗೀತರತ್ನ ಇತ್ಯಾದಿ ಬಿರುದಾಂಕಿತರಾದ ಪಂಚಾಕ್ಷರಿ ಗವಾಯಿಗಳು ಮತ್ತು ಕೀರ್ತನಾಲಂಕಾರ, ಶಿವಕಥಾಭೂಷಣ ಎಂಬ ಪ್ರಶಸ್ತಿ ಯನ್ನು ಪಡೆದ ಬಂದಯ್ಯ ಮಾಸ್ಟರ್ ಬಿಜಾಪೂರ ಈ ಉಭಯರು ಭಕ್ತಮ- ನೋಭೀಷ್ಟದಾತನಾದ ಶ್ರೀ ಚರಬಸವೇಶ್ವರನಲ್ಲಿ ಭಕ್ತಿಯನ್ನು ವಹಿಸಿ, ಶ್ರದ್ಧೆ ಯಿಂದ ಧನ ಸಂಗ್ರಹಿಸಿ, ಜಾಗ್ರತೆ ಪ್ರಿಂಟುಮಾಡಿಸಿ ಜಗತ್ತಿನಲ್ಲಿ ಪ್ರಕಾಶಪಡಿಸಿದ ಮಹತ್ವ ಕಾರ್ಯಕ್ಕೋಸ್ಕರ ನಾನು ತುಂಬಾ ಖುಷಿಯಾಗಿದ್ದು ಇವರ ಆಭಾರ ವನ್ನು ಮನ್ನಿಸುತ್ತೇನೆ. ಪುರಾಣದ ಮುದ್ರಣಕ್ಕೆ ಧನಸಹಾಯಮಾಡಿದ ಮಹನೀ ಯರುಗಳಿಗೆಲ್ಲ ನನ್ನ ಅಭಿವಂದನೆಗಳು. ಹಾಗೂ ಶ್ರೀ ಚರಬಸವೇಶ್ವರನು ಈ ಎಲ್ಲ ರಿಗೂ ಇಷ್ಟಾರ್ಥ ಸಿದ್ಧಿಯನ್ನುಂಟುಮಾಡಲಿ.

—:( ಸರ್ವೇಜನಾಸ್ಸುಖಿನೋಭವಂತು ):—



| | |
|---|---|
| ಜ್ಯೋತಿಪುರಯಾನೆ | ಮಂಗಾಪೂರ ಮೇಗೇರಿ ಮಠದ, |
| ಜೋಗಿಹಳ್ಳಿ. | ವಿದ್ವಾನ್, ಚಂದ್ರಶೇಖರಶಾಸ್ತ್ರಿಗಳು |
| ತಾ॥ ೧೦-೨-೧೯೫೦ ಇ | ಕವಿರತ್ನ, ಕವಿಕಂಠೀರವ, ಮು॥ ರಾಯಚೂರು. |

### ಈ ಪುರಾಣದ ಬಗ್ಗೆ

## ಪಂಡಿತರ ಅಭಿಪ್ರಾಯಗಳು.



ಪ್ರಿಯ ಮಿತ್ರರಾದ ಮಂಗಾಪುರ ಮೇಗೇರಿ ಮಠದ ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳಿಂದ ವಿರಚಿತವಾದ ಶ್ರೀ ಚರಬಸವೇಶ್ವರ ಪುರಾಣವನ್ನು ಅಲ್ಲಲ್ಲಿ ಓದಿ ನೋಡಿದೆನು. ಗ್ರಂಥವು ಸರಸವಾಗಿಯೂ, ಭಕ್ತಿಪ್ರದವಾಗಿಯೂ, ನೀತಿ ಮಾರ್ಗ ಪ್ರೇರಕವಾಗಿಯೂ ಇದೆ. "ನಾಋಷಿಃ ಕುರುತೇ ಕಾವ್ಯಂ" ಅಂದರೆ ಋಷಿಯ ಅಂಶವಿಲ್ಲದವನು ಕಾವ್ಯವನ್ನು ಬರೆಯಲಾರನು ಎಂಬ ಮಾತನ್ನು ಲಕ್ಷಿಸದೆ, ಕಾವ್ಯಯೋಗ ಸಿದ್ಧಿಯಿಲ್ಲದೆ, ಸಂಸ್ಕೃತಿಯ ಗೋಣ್ಮುರಿದು, ತಿಚಕಿ ತಿಣಕಿ ತುಣುಕು ವಚನದ ಎರಡು ಪದ್ಯಗಳನ್ನು ಬರೆದು ಕವಿಗಳೆಂದು ಹೇಳಿಕೊಳ್ಳುತ್ತಾ ಮೆರೆಯುವ ಈಗಿನ ಕಾಲದಲ್ಲಿ, ಇಷ್ಟು ಮಾಧುರ್ಯವಾದ ಉದ್ಗ್ರಂಥವನ್ನು ಬರೆದು ಕೃತಕೃತ್ಯರಾದ ಶಾಸ್ತ್ರಿಗಳು ಸ್ತುತಿಯೋಗ್ಯರೆನ್ನುವುದರಲ್ಲಿ ಯಾವ ಸಂಶಯವೇ ಇಲ್ಲ.

ಕೃತಿಯು ವೀರಶೈವ ಶರಣರೊಬ್ಬರದಾಗಿ, ಕೃತಿಕರ್ತರೂ ವೀರಶೈವರಾದುದರಿಂದ ವೀರಶೈವ ಮತಪ್ರಕ್ರಿಯೆಯು ಅನಿವಾರ್ಯವಾಗಿ ಪ್ರತಿಪಾದಿತವಾಗಿದೆ. ಆದರೂ ಸರ್ವರಿಗೂ ಸೊಗಸೆನಿಸುವ ಕಾವ್ಯದ ತನಿಸೊಬಗು ನಡುನಡುವೆ ಬಹು ಮನೋಹರವಾಗಿ ಶೋಭಿಸದೆ ಇರದು.

ಷಟ್ಪದಿ ಕಾವ್ಯವಾದ ಈ ಗ್ರಂಥವನ್ನು ಉಪ್ಪಕ್ಕೆ ಬರೆಯುವೆ ಪಾದದ ಕೆಳಗೆ ಪಾದವನ್ನು ಬರೆಯುವುದು ವಿಹಿತವೆಂದು ನನ್ನ ಮತ. ತಪೋಸಿಧಿಗಳ ತವರ್ಮನೆಯೆನಿಸಿ, ಯೋಗ ಭೂಯಿಷ್ಠವಾದ ಕರ್ನಾಟಕ ನಾಡಿನ ಅನೇಕ ಮಹಾ ಮಹಾ ಪುರುಷರ ದಿವ್ಯ ಚರಿತ್ರೆಗಳು ಇದರಂತೆಯೇ ಉಭಯ ಕವಿತಾವಿಶಾರದರಾದ ಶ್ರೀ ಶಾಸ್ತ್ರಿಗಳವರಿಂದ ರಚಿಸಲ್ಪಟ್ಟು ಕನ್ನಡ ನುಡಿಯ ಸೇವೆಯು ನಿರಂತರ ಸಾಗಲೆಂದು ನಮ್ಮ ನಮ್ರ ಹಾರೈಕೆಗಳು.

—

ಹೈದರಾಬಾದ.
ತಾ. ೭-೩-೧೯೫೦.

ಎಫ್. ಜಿ. ಮಠದ ವಿದ್ವಾನ್, B. O. L.
ಕನ್ನಡ ಲೆಕ್ಚರರ್, ನಿಜಾಂ ಕಾಲೇಜ್,
ಹೈದರಾಬಾದ-ದಕ್ಖನ.

............

## ೨

ಜೋತಿಪುರವಾಸಿ, ಮಂಗಾಪುರ ಮೋಗೇರಿ ಮಠದ, ವಿದ್ವಾನ್, ಕವಿರತ್ನ, ಪಂಡಿತ, ಚಂದ್ರಶೇಖರಶಾಸ್ತ್ರಿಗಳವರಿಂದ ವಿರಚಿತವಾದ ಶಹಪೂರ ಆನವಾರ ಮಠದ ಮಹಾಮಹಿಮ ಶ್ರೀ ಚರಬಸವಾರ್ಯರ ಪುರಾಣದ ಪ್ರಿಂಟಾದ ಕೆಲವು ಭಾಗಗಳನ್ನು ನಮ್ಮ ಚಿರಂಜೀವಿ ಬಿಲ್ಲಂ ಕೊಂಡಿ ಹಿಕೀಮಠದ ಸಂಗೀತಸಾಗರ ಪಂಚಾಕ್ಷರಗವಾಯಿಗಳು ನಮಗೆ ತಂದು ತೋರಿಸಿದರು. ಗಂಹಾರದ ಮುಕ್ಕಾಮಿನಲ್ಲಿ ಅದನ್ನು ಚನ್ನಾಗಿ ಪರಿಶೋಧಿಸಲಾಗಿ, ಇವರ ಕವಿತ್ವದ ಸರಣಿಯು ಪೂರ್ವಕಾಲದಲ್ಲಿ ಗತಿಸಿಹೋದ ಪಂಪ, ರನ್ನ, ಪೊನ್ನ, ಷಡಕ್ಷರಕವಿ, ಹರಿಹರ, ರಾಘವಾಂಕ, ಕುಮಾರ ವ್ಯಾಸರೇ ಮೊದಲಾದ ಮಹಾಮಹಾ ಕವಿಗಳ ಕವಿತ್ವವನ್ನೇ ಸರಿಹೋಲುವದರಿಂದ, ಇವರಿಗೆ "ಕವಿರತ್ನ" "ಕವಿಕಂಠೀರವ" ಎಂಬ ಬಿರುದು ಅತ್ಯಂತ ಸಾರ್ಥಕವಾಗಿರುವದೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಇವರು ವರಕವಿಗಳಾಗಿ, ಮಹಾಕವಿಗಳ ಮಾಲಿಕೆಯಲ್ಲಿ ಸೇರಲು ಯೋಗ್ಯರಾಗಿರುತ್ತಾರೆ. ಇದಲ್ಲದೆ ಸದರಿ ಪುರಾಣದಲ್ಲಿ "ನವೀರಶೈವ ಸದೃಶಂ ಮತಮಸ್ತಿ ಜಗತ್ರಯೆ" ಎಂಬ ಆಗಮೋಕ್ತಿಗನುಸಾರವಾಗಿ, ಅಷ್ಟಾವರ್ಣ, ಪಂಚಾಚಾರ, ಷಟ್‌ಸ್ಥಲ ಬ್ರಹ್ಮಜ್ಞಾನ, ಭಕ್ತಿಯೋಗ, ಶಿವಯೋಗ ಇತ್ಯಾದ್ಯನಂತ ವಿಷಯುಗಳಿಂದ ಕೂಡಿರುವ ವೀರಶೈವ ಧರ್ಮವೇ ಸರ್ವೋತ್ಕೃಷ್ಟವೆಂದು ಅನೇಕ ದೃಷ್ಟಾಂತಗಳಿಂದ ಅನುಭವಕ್ಕೆ ಬರುವಂತೆ ಬರೆದಿರೋಣದರಿಂದ ಈ ಕವಿಗಳು ವೀರಶೈವ ಸಿದ್ಧಾಂತದ ರಹಸ್ಯವನ್ನು ಚನ್ನಾಗಿ ಬಲ್ಲವರೆಂಬು ಕಂಡ.ಬರುತ್ತದೆ. ಮತ್ತು ಈ ಪುರಾಣದಲ್ಲಿ ಗೃಹಸ್ಥಾಶ್ರಮಧರ್ಮ, ಬ್ರಹ್ಮಚರ್ಯಾಶ್ರಮಧರ್ಮ, ಸ್ತ್ರೀಧರ್ಮ, ಮಾನವಧರ್ಮ ಸತ್ಯ, ಅಹಿಂಸೆ, ಪ್ರೇಮ, ನಿಜವಾದ ನಾಗರೀಕತೆಯ ಲಕ್ಷಣ, ಸಮತಾವಾದ ಇತ್ಯಾದಿ ವಿಷಯುಗಳ ಪ್ರತಿಪಾದನೆಯಾಗಿರೋಣದರಿಂದ, ಈಗಿನ ಕಾಲದ ಮಾನವ ಜನಾಂಗಕ್ಕೆಲ್ಲ ಈ ಪುರಾಣವು ಉಪಯೋಗಬೀಳುವದರಿಂದ ಇದಕ್ಕೆ ಆದರ್ಶ ಪುರಾಣವೆಂದು ಹೇಳಬಹುದಾಗಿದೆ.

ನಾನು ಒಂದುಸಾರೆ ರಾಯಚೂರು ಮುಕ್ಕಾಮು ಮಾಡಿದಾಗ್ಯೆ, ಸದರಿ ಕವಿಗಳ ದರ್ಶನ ಸಂಭಾಷಣಾದಿಗಳಿಂದ ಪರಿಶೀಲಿಸಲು, ಇವರು ಸುಪ್ರಸಿದ್ಧ ಕನ್ನಡ ಮತ್ತು ಸಂಸ್ಕೃತ ಸಾಹಿತಿಗಳು, ವೇದಾಂತ ಮತ್ತು ಜ್ಯೋತಿಷ್ಯಶಾಸ್ತ್ರ ಪ್ರವೀಣರು ಉಭಯ ಕವಿತಾವಿಶಾರದರು, ಭಾಷಣ ಕಲಾಬೃಹಸ್ಪತಿಗಳು, ಲೇಖನ ಕಲ್ಲಾಕೋವಿದರು, ವೀರಶೈವ ಧರ್ಮಶಾಸ್ತ್ರವೇತ್ತರು, ಅನೇಕ ಭಾಷೆಗಳನ್ನು ಬಲ್ಲವರು, ಸತ್ಯ ಸದಾಚಾರನಿಷ್ಠರು, ಸರಳ ಹೃದಯರು, ಅತ್ಯಂತ ವಿನಯಶಾಲಿಗಳು ಆಗಿರುವದನ್ನು

ಕಂಡು ನಮಗೆ ಮಹದಾನಂದವಾಯಿತು. ಈಗಿನ ಕಾಲದಲ್ಲಿ ಇಂಥಾ ವಿದ್ವತ್, ಮತ್ತು ಸದ್ಗುಣಗಳಿಂದ ಕೂಡಿರುವ ಕವಿಗಳು ಹುಟ್ಟುವದು ದುರ್ಲಭವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೆ ನಮ್ಮ ವೀರಶೈವ ಧರ್ಮದ ಏಳ್ಗೆಗಾಗಿಯೇ ಇವರ ಜನ್ಮವಾಗಿರುವದೆಂದು ನಮಗೆ ಕಂಡುಬರುತ್ತದೆ. ಏಕೆಂದರೆ ಇವರು ಸದರಿ ಮಹಾತ್ಮರ ಪುರಾಣವೊಂದನ್ನಲ್ಲದೆ ಇನ್ನೂ ಭಗವಾನ್ ದೇವರಸೂಗೂರು ವೀರೇಶ್ವರ ಪುರಾಣ, ಮಹಾಶಿವಶರಣ ದೇವರದಾಸಿಮಯ್ಯ ಪುರಾಣನೆ ಮೊದಲಾದ ಎಂಟು ಪುರಾಣಗಳನ್ನೂ, ನಾನಾ ವಿಧವಾದ ಗ್ರಂಥಗಳನ್ನೂ ಬರೆದು ಸಮಾಜಕ್ಕೆ ಉಪಕಾರ ಮಾಡಿದ್ದಾರೆ. ಕಾರಣ ವೀರಶೈವ ಧರ್ಮಾಭಿಮಾನಿಗಳು ಇನ್ನೂ ಇವರಿಗೆ ವಿಶೇಷವಾಗಿ ಪ್ರೋತ್ಸಾಹ ಕೊಟ್ಟರೆ ಇವರಿಂದ ನಮ್ಮ ಸಮಾಜಕ್ಕೆ ಮಹದುಪಕಾರವಾಗುವದೆಂದು ನಿರರ್ಗಳವಾಗಿ ಹೇಳುತ್ತೇನೆ. ಇವರು ಬರೆದ ಪುರಾಣಗಳೆಲ್ಲ ಆಚಂದ್ರಾರ್ಕವಾಗಿ ಬೆಳಗಲೆಂದು ಹಾರೈಸುತ್ತೇನೆ.

| | |
|---|---|
| ಗಂಹಾರ.<br>ತಾ॥ ೫-೨-೧೯೫೦. | ಪಂ॥ ಗಂಹಾರದ ಬಸವಲಿಂಗಶಾಸ್ತ್ರಿಗಳು,<br>ಪಂಚಗೃಹ ತೋಪಕಟ್ಟಿ ಹಿರೇಮಠ,<br>ಸಾಹಿತ್ಯ ವಿಶಾರದ, ವ್ಯಾಕರಣ ರತ್ನ. |



೨

ಶ್ರೀಯುತರಾದ ವಿದ್ವಾನ್. ಚಂದ್ರಶೇಖರಶಾಸ್ತ್ರಿಗಳಿಂದ ವಿರಚಿತವಾದ ಶ್ರೀ ಶರಬಸವೇಶ್ವರ ಪುರಾಣವನ್ನು ಅವಲೋಕಿಸಿ ವಿಮರ್ಶೆ ಮಾಡಲು ತುಂಬಾ ಸಂತೋಷವೆನಿಸುತ್ತದೆ. ಗ್ರಂಥಕಾರರ ಆಳವಾದ ವ್ಯಾಸಂಗ, ಸಹಜವಾದ ಕವಿತಾಶಕ್ತಿ, ಸೂಕ್ಷ್ಮ ನಿರೀಕ್ಷಣಶಕ್ತಿ, ಮತ್ತು ವಿಮರ್ಶಕ ಬುದ್ಧಿಯ ನಿದರ್ಶನವು ಈ ಗ್ರಂಥದಲ್ಲಿ ಹೆಜ್ಜೆ ಹೆಜ್ಜೆಗೂ ದೊರೆಯುತ್ತದೆ. ಆಧುನಿಕ ಕಾಲದಲ್ಲಿ ಗ್ರಂಥರಚನೆಯನ್ನು ಮಾಡಿಯೂ ಪ್ರಾಚೀನ ಷಟ್ಪದಿಕಾರರ ಪಂಕ್ತಿಯಲ್ಲಿ ಸೇರುವ ಅರ್ಹತೆಯನ್ನು ತಮ್ಮ ರಚನಾಕೌಶಲ್ಯದಿಂದ ಸ್ಥಾಪಿಸಿಕೊಂಡಿದ್ದಾರೆ. ಭಾಷೆ, ಭಾವಗಳು ಪರಸ್ಪರ ಹೊಂದಿಕೊಂಡು ಕವಿತಾಶೈಲಿಯು ನಿರರ್ಗಳವಾಗಿ ಓಡುತ್ತದೆ.

ವಿಷಯವು ವೀರಶೈವ ಮತಕ್ಕೆ ಸಂಬಂಧಿಸಿದ್ದರೂ ಕವಿಗಳು ತಮ್ಮ ಬುದ್ಧಿ ಕೌಶಲ್ಯದಿಂದ ಕೃತಿಯು ಸರ್ವ ಜನಾದರಣೀಯವಾಗುವಂತೆ ಮಾಡಿದ್ದಾರೆ. ಮತ ಪ್ರಕ್ರಿಯೆಯೂ ಇದೆ. ಮಾನವ ಧರ್ಮ, ನಾಗರೀಕತೆಯ ನಿಜಾರ್ಥ, ಸಮಾಜವಾ

ದಗಳೂ ಇವೆ. ಸ್ತ್ರೀನೀತಿ, ಗೃಹಸ್ಥ, ಬ್ರಹ್ಮಚರ್ಯಾದ್ಯಾಶ್ರಮ ಧರ್ಮಪ್ರತಿಪಾದನೆಯೂ ಇವೆ. ವಿವಿಧ ವಿಷಯಗಳನ್ನು ಪ್ರತಿಪಾದಿಸುವ ಶೈಲಿ ಮನೋಜ್ಞವಾಗಿದೆ. ದೃಷ್ಟಿ ವೈಶಾಲ್ಯದಿಂದ ಸರ್ವಧರ್ಮಗಳನ್ನು ಸಮವಾಗಿ ಕಂಡು ತನ್ನ ಧರ್ಮದಲ್ಲಿ ಆತ್ಮೋದ್ಧಾರವನ್ನು ಕಂಡುಕೊಳ್ಳತಕ್ಕ ತತ್ವವನ್ನು ಬೀರುವ ಗ್ರಂಥಗಳ ಅವಶ್ಯಕತೆ ಈಗ ಬಹು ಅಗತ್ಯವಾಗಿದೆ. ಈ ಕಾರ್ಯವನ್ನು ಈ ಕೃತಿಯಲ್ಲಿ ಬಹುನಯವಾಗಿ ಸಾಧಿಸಲಾಗಿದೆಯೆಂದು ಹೇಳಬಹುದು.

ಈ ಶಾಸ್ತ್ರಿಗಳ ಪ್ರತಿಭೆ ಇತೋಽಪ್ಯತಿಶಯುವಾಗಿ ಬೆಳಗಿ, ಉಭಯ ಭಾಷಾ ಪಂಡಿತರಾದ ಇವರಿಂದ ಕನ್ನಡ ಜನಕ್ಕೆ ಇನ್ನೂ ಅನೇಕ ಕೃತಿರತ್ನಗಳು ದೊರೆಯಲೆಂದು ಹಾರೈಸುತ್ತೇನೆ.

●

ರಾಯಚೂರ.
ತಾ॥ ೨೦-೩-೫೦.

ಶ್ರೀ ರಾಜಪುರೋಹಿತ M. A. B. T.
ಸಂಸ್ಕೃತ ಪಂಡಿತರು,
ರಾಯಚೂರ.

---

೪

ಮಹಾಮಹಿಮಾಶಾಲಿಗಳೂ, ಪರಮ ವೈರಾಗ್ಯಮೂರ್ತಿಗಳೂ ಆದ ಶಹಪೂರ ಶ್ರೀ ಚರಬಸವಾರ್ಯರ ಜೀವನ ಚರಿತ್ರೆಯನ್ನು ಪಂಡಿತ ಪ್ರಕಾಂಡರೂ, ವರಕವಿಗಳೂ, ಮಹಾ ವಾಗ್ಮಿಗಳೂ, ಬಹುಭಾಷಾ ತಜ್ಞರೂ ಆದ ಮಂಗಾಪುರ ಮೇಗೇರಿ ಮಠದ ಶ್ರೀಮಾ, ಚಂದ್ರಶೇಖರಶಾಸ್ತ್ರಿಗಳು ಪುರಾಣ ರೂಪದಲ್ಲಿ ಬರೆದುದು ಸ್ತೋತ್ರಾರ್ಹವಾದುದಾಗಿದೆ. ಈ ಪಂಡಿತರು ಬರೆದಿರುವ ಈ ಪುರಾಣದಲ್ಲಿ ಸರಸ ಶಬ್ದಗಳ ಜೋಡಣೆ, ಅರ್ಥಚಾತುರ್ಯ, ಯುಕ್ತಿಯುಕ್ತ ರಸಾಲಂಕಾರ ಮುಂತಾದವುಗಳು ಬಹು ಮನೋಹರವಾಗಿರುತ್ತವೆ. ಮತ್ತು ಈ ಪುರಾಣವು ಯಾವತ್ತೂ ಕಾವ್ಯಲಕ್ಷಣಗಳಿಂದ ಕೂಡಿಕೊಂಡಿದ್ದು ನವರಸಭರಿತವಾಗಿರುತ್ತದೆ. ಪವಾಡಗಳ ವರ್ಣನೆಯಲ್ಲಿಯೂ ಔಚಿತ್ಯವಿದೆ, ಓಜಸ್ಸಿದೆ. ಹಿತಮಿತವಾಗಿಯೂ ಹೊಂದಿಕೊಂಡಿದೆ. ಷಟ್‌ಸ್ಥಲಾಂತರ್ಗತ ಶಿವಾದ್ವೈತ ಸಿದ್ಧಾಂತ, ವಚನಧರ್ಮ ಶಾಸ್ತ್ರ ಸಿದ್ಧಾಂತ, ಲೌಕಿಕ ಪಾರಮಾರ್ಥಿಕ, ಧಾರ್ಮಿಕ ನೀತಿತತ್ವಗಳೇ ಮೊದಲಾದ ಪುರಾತನ, ನೂತನ ವಿಷಯಗಳಿಂದ ಕೂಡಿ, ಸಕಲರಿಗೂ ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗಿ ತಿಳಿಯತಕ್ಕುದಾಗಿರುತ್ತದೆ.

ಈ ಪುರಾಣದ ನಾಯಕರು, ಇದನ್ನು ಬರೆದ ಕವಿಗಳು ಉಭಯರೂ ವಿನೂತನರೇ ಆಗಿದ್ದಾರೆ. ಆದರೂ ಇದನ್ನು ಪ್ರಾರಂಭದಿಂದ ಕೊನೆಯವರೆಗೂ ಓದುವ ನಾವು ಆರುನೂರು ವರುಷಗಳ ಹಿಂದಣ ಪವಿತ್ರ ಯುಗದ ಪರಿಶುದ್ಧ ವಾತಾವರಣದಲ್ಲಿ ಮಾನವ ರೂಪದ ದೈವೀ ಪುರುಷರೊಂದಿಗೆ ಸಲುಗೆಯ ಸಂಬಂಧಗಳನ್ನು ಮೈಗೂಡಿಸಿಕೊಂಡವರ ಸುಖವನ್ನು ಅನುಭವ ಮಾಡುತ್ತೇವೆ. ಒಟ್ಟಿನಮೇಲೆ ಸರ್ವಾಂಗ ಸುಂದರವಾಗಿ ಪರಿಶೋಭಿಸುತ್ತಿರುವ ಈ ಪುರಾಣವನ್ನು ನೋಡಿ ಪ್ರಾಪ್ತವಾಗಿರುವ ನನ್ನ ಆನಂದದ ಆಳತೆಯನ್ನು ಈ ಲೇಖನಿಯಿಂದ ಬರೆದುತೋರಿಸಲು ಸಾಧ್ಯವಿಲ್ಲ.

ಶ್ರೀ ಶಾಸ್ತ್ರಿಗಳವರು ಪುರಾಣಗಳನ್ನು ರಚಿಸುವ ಕಲೆಯನ್ನು ಮೈಗೂಡಿಸಿಕೊಂಡಿರುವ ರೀತಿಯು ಪ್ರಶಂಸನೀಯವು. ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಎಷ್ಟೋ ಗದ್ಯಪದ್ಯಾತ್ಮಕ ಗ್ರಂಥಗಳನ್ನೂ ಬರೆದಿದ್ದಾರೆ. ಪುರಾಣಗಳನ್ನು ಸೃಷ್ಟಿಸುವ ವಿಷಯದಲ್ಲಂತೂ ಇವರು ಕೇವಲ ನೂತನ ವೇದವ್ಯಾಸರಿಂತಲೇ ನಾನು ಹೇಳುತ್ತೇನೆ. ಇದುವರೆಗೆ ಈ ಕವಿಗಳು ಬರೆದಿರುವ ಪುರಾಣಗಳೂ ಮತ್ತು ಇತರ ಗ್ರಂಥಗಳೆಲ್ಲ ತೀವ್ರವೇ ಪ್ರಿಂಟಾಗಿ ಪ್ರಕಾಶವಾಗುವದು ಬಹಳ ಅವಶ್ಯಕವಿದೆ. ಏಕೆಂದರೆ ಇವು ಅತ್ಯಮೌಲ್ಯವಾದ ಗ್ರಂಥಗಳಾಗಿರುತ್ತವೆ. ಈ ಶಾಸ್ತ್ರಿಗಳು ವಿದ್ವತ್ತಿನಿಂದಲೂ, ಸತ್ಯ ಸದಾಚಾರ ಸದ್ಗುಣಗಳಿಂದಲೂ, ವೀರಶೈವ ಸಮಾಜಕ್ಕಷ್ಟೇ ಭೂಷಣರಲ್ಲದೆ ಇಡೀ ಕರ್ನಾಟಕ ದೇಶಕ್ಕೇ ಭೂಷಣಪ್ರಾಯರಾಗಿರುತ್ತಾರೆ.

ಇಂತಹ ಮಹಾನುಭಾವರಿಂದ ವಿರಚಿತವಾದ ಈ ಪೂಜ್ಯ ಪುರಾಣಕ್ಕೆ ಪ್ರತಿಯೊಬ್ಬ ಕನ್ನಡಿಗರು ಲಕ್ಷಕೊಟ್ಟು ಪುಸ್ತಕವನ್ನು ತೆಗೆದುಕೊಂಡು ಕವಿತೆಯ ಮಾಧುರ್ಯವನ್ನು ಸ್ವೀಕರಿಸಿ, ಚರಬಸವೇಶ್ವರನ ಮಹಿಮೆಗಳನ್ನು ಪಠಿಸಿ ಧನ್ಯರಾಗಬೇಕೆಂದು ಇಚ್ಛಿಸುತ್ತೇನೆ.

.........

ರಾಯಚೂರು.
ತಾ|| ೨೧–೩–೫೦

ಪಂಡಿತ ಡಿ. ಎಂ. ಸೂಗವೀರಶರ್ಮರು
ಕನ್ನಡ ಪಂಡಿತರು,
ಹಮ್ದರ್ದ್ ಹೈಸ್ಕೂಲು, ರಾಯಚೂರ.

# ಪಂಡಿತರ ಅಭಿಪ್ರಾಯಗಳು

## 1

ಮಹಾಮಹಿಮಾಶಾಲಿಗಳೂ, ಇಪ್ಪತ್ತನೇ ಶತಮಾನದ ದಿವ್ಯ ಪ್ರಮಥರೂ ಆದ ಸಗರನಾಡಿನ ಶಹಪುರದ ಅನವಾರ ಮಠದ, ಶ್ರೀ ಚರಬಸವಸ್ವಾಮಿಗಳ ಜೀವನ ಚರಿತ್ರೆಯನ್ನು ಉಭಯ ಭಾಷಾಪಂಡಿತರೂ, ಉಭಯಕವಿತಾ ವಿಶಾರದರೂ ಆದ ಮಂಗಾಪುರ ಮೇಗೇರಿ ಮಠದ ವಿದ್ವಾನ್, ಚಂದ್ರಶೇಖರಶಾಸ್ತ್ರಿಗಳವರು ಪುರಾಣ ರೂಪವಾಗಿ ವಿರಚಿಸಿದ ಆಧ್ಯಾತ್ಮಿಕ ಗ್ರಂಥವನ್ನು, ಈ ದಿನ ಅದೇ ಶಹಪುರದ ಬಿಲ್ಲಂಕೊಂಡಿ ಹಿರೇಮಠಾಧ್ಯಕ್ಷರೂ, ಮತ್ತು ಸಿದ್ಧಾಂತ ಶಿಖಾಮಣಿಯೊಳಗಿನ ನೂರಾರು ಪದ್ಯಗಳಿಗೆ ಸಂಗೀತವನ್ನು ಜೋಡಿಸಿ ರೇಣುಕಗೀತೆಯೆಂದು ಹೆಸರಿಟ್ಟವರೂ, ಸದರಿ ಗ್ರಂಥದ ಪ್ರಕಾಶಕರೂ ಆದ ಪಂಚಾಕ್ಷರ ಗವಾಯಿಗಳು ಮತ್ತು ಶಿವಕಥಾಭೂಷಣ ಬಂದಯ್ಯ ಮಾಸ್ತರ ಬಿಜಾಪೂರ ಇವರು ತಂದು ತೋರಿಸಿ ಈ ಗ್ರಂಥದ ಬಗ್ಗೆ ನನ್ನ ಅಭಿಪ್ರಾಯವನ್ನು ಬೇಡಿದರು. ಶ್ರೀಯುತರ ಪ್ರೇಮಾಗ್ರಹವನ್ನು ಮನ್ನಿಸಿ, ಸ್ವಲ್ಪ ವೇಳೆಯಲ್ಲಿಯೇ "ಸ್ಥಾಲೀಪುಲಾಕ" ನ್ಯಾಯದಿಂದ ನೋಡಿದೆನು.

"ವದನಂ ಪ್ರಸಾದ ಸದನಂ ಸದಯಂ ಹೃದಯಂ ಸುಧಾಮುಚೋವಾಚಃ ॥ ಕರಣಂ ಪರೋಪಕರಣಂ ಯೇಷಾಂ ಕೇಷಾಂ ನತೇವಂದ್ಯಾಃ" ಈ ಸದುಕ್ತಿಯಂತೆ ಅನತರಿಗನುಗ್ರಹವನ್ನು ಮಾಡುವ, ಯಾವಾಗಲೂ ಪರೋಪಕಾರವನ್ನೆಸಗುವ, ದಯಾಮಯ ಹೃದಯರಾದ ಮಹಾತ್ಮರು ಸರ್ವದಾ ಸರ್ವರಿಗೂ, ವಂದ್ಯರೂ, ಸ್ತುತ್ಯರೂ ಆಗಿರುವರು. ಅಂತಹ ಪುಣ್ಯ ಶ್ಲೋಕರಾದ ಶ್ರೀ ಚರಬಸವಸ್ವಾಮಿಗಳು ಈ ಕಾವ್ಯಕ್ಕೆ ನಾಯಕರಿರುವರು. ಇದರಿಂದ ಈ ಗ್ರಂಥದ ಬೆಳಕೂ ಮತ್ತು ಗ್ರಂಥಕರ್ತರಾದ ಕವೀಂದ್ರ ಚಂದ್ರಶೇಖರ ಶಾಸ್ತ್ರಿಗಳವರ ಕೀರ್ತಿಯೂ ಆಚಂದ್ರಾರ್ಕ ಚಿರಸ್ಥಾಯಿಯಾಗಿರುವದು. ಕವಿಗಳ ದೈವೀಶಕ್ತಿಯು, ಅಪ್ರತಿಮ ಶಾಸ್ತ್ರಜ್ಞಾನವು ಹಾಗೂ ಲೌಕಿಕ ವ್ಯವಹಾರ ಜ್ಞಾನವು ಈ ನೂತನ ಪುರಾಣದಲ್ಲಿ ಸ್ಪಷ್ಟವಾಗಿ ಎಡೆದು ತೋರುತ್ತದೆ.

ಈ ಆದರ್ಶ ಕಾವ್ಯವು ಸರಸವೂ, ಸರಳವೂ, ಸ್ಫುಟಾರ್ಥವುಳ್ಳದ್ದೂ ಆಗಿ ದ್ರಾಕ್ಷಾಪಾಕದಂತಿರುತ್ತದೆ. ಇದರಲ್ಲಿ ರೂಪಕ ಮೊದಲಾದ ಅರ್ಥಾಲಂಕಾರಗಳೂ, ಅನುಪ್ರಾಸ ಮೊದಲಾದ ಶಬ್ದಾಲಂಕಾರಗಳೂ ಅಲ್ಲಲ್ಲಿ ತೋರಿಬರುತ್ತವೆ ವರ್ಣನೆಯು ಸರಳವಯು ಸುಗಮವಿರುತ್ತದೆ. ಇದರಂತೆಯೇ ಇನ್ನೂ ಮುಂದೆಯೂ

ಮಾನ್ಯ ಕವಿವರ್ಯರು ಕೇಳುವವರ ಜನ್ಮ ಸಾರ್ಥಕಮಾಡುವ ಪುಣ್ಯಶ್ಲೋಕರ ಪುರಾಣಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಕಳೆಯನ್ನೇರಿಸುವುದೆಂದೂ, ಮತ್ತು ಈ ಪುರಾಣವು ಸರ್ವರಿಗೆ ಶ್ರಾವ್ಯವೆನಿಸಿ ಕನ್ನಡಿಗರ ಕೈಪಿಡಿಯಾಗಲೆಂದು ಹಾರೈಸುವ.

ಸೊಲ್ಲಾಪುರ.
ತಾ।। ೧೨-೩-೫೦.

ಪಂಡಿತ ಜಗದೀಶಶಾಸ್ತ್ರಿಗಳು, ನಾಲ್ವಾರ
ಶ್ರೀಮದ್ವೀರಶೈವ ಗುರುಕುಲ
ಸಂಸ್ಕೃತಪಾಠಶಾಲಾಧ್ಯಾಪಕರು, ಸೊಲ್ಲಾಪುರ.

........

## 2

ಮಂಗಾಪುರ ಮೇಗೇರಿ ಮಠದ ವಿದ್ವಾನ್, ಕವಿರತ್ನ ಚಂದ್ರಶೇಖರಶಾಸ್ತ್ರಿಗಳವರು ರಚಿಸಿದ ಶ್ರೀ ಚರಬಸವೇಶ್ವರ ಪುರಾಣವನ್ನು ನಾನು ಅಲ್ಲಲ್ಲಿ ಓದಿ ನೋಡಿದೆನು. ಶ್ರೀ ಚರಬಸವಾರ್ಯರ ಜೀವನದಂತೆ ಇವರ ರಚನೆ ನಿರಾಡಂಬರವೂ, ಸರಳವೂ ಆಗಿದೆ. ಪ್ರಾಚೀನ ಸಂಪ್ರದಾಯದಂತೆ ಇವರು ಪುರಾಣವನ್ನು ರಚಿಸಿರುವರಾದರೂ ಇದರಲ್ಲಿ ಬಹು ಸ್ವಾರಸ್ಯವಾದ ನವೀನತೆಯನ್ನು ಕಾಣಬಹುದಾಗಿದೆ. ಪುರಾಣದ ಓಟ ನಿರರ್ಗಳವಾಗಿದೆ ನಿರೂಪಣೆ ಸರಸವಾಗಿದೆ. ದೀರ್ಘವಾದ ವರ್ಣನೆಗಳಾಗಲೀ, ಜಟಿಲವಾದ ಸಮಸ್ಯೆಗಳಾಗಲೀ, ಸಂಸ್ಕೃತದ ಶಬ್ದಾಡಂಬರದ ಘೋಷಣೆಯಾಗಲೀ ಕಂಡುಬರುವದಿಲ್ಲ. ತಿಳಿಯಾದ ಕನ್ನಡದಲ್ಲಿ ಸುಲಭವೇದ್ಯವಾಗುವಂತೆ ದ್ರಾಕ್ಷಾಪಾಕವೆನಿಸಿ ಶ್ರೀ ಶಾಸ್ತ್ರಿಗಳವರು ಈ ಪುರಾಣವನ್ನು ರಚಿಸಿದ್ದಾರೆ.

ಮಹಾತ್ಮರೂ, ಸತ್ಪುರುಷರೂ ಯಾವ ಕಾಲದಲ್ಲಿ ಯಾವದೇಶದಲ್ಲಿ ಹುಟ್ಟುತ್ತಾರೆ ಎಂದು ಹೇಳುವದಕ್ಕಾಗುವದಿಲ್ಲ. ಅಲ್ಲದೆ ಮಹಾಪುರುಷರು ಕೀರ್ತಿಗಾಗಿ ಆಶಿಸುವದಿಲ್ಲ. ಕೇವಲ ಲೋಕ ಕಲ್ಯಾಣವೇ ಅವರ ಜೀವನದ ಧ್ಯೇಯವಾಗಿರುತ್ತದೆ. ಇವರು ತಮ್ಮ ಸ್ವರೂಪವನ್ನು ಬಹಿರಂಗವಾಗಿ ವ್ಯಕ್ತಗೊಳಿಸದೆ ಗೋಪ್ಯವಾಗಿಯೇ ಲೋಕಕ್ಕೆ ಕಲ್ಯಾಣವನ್ನುಂಟುಮಾಡುತ್ತಾರೆ. ಇವರು ಎಲೆಯ ಮರೆಯಲ್ಲಿದ್ದುಕೊಂಡು ಸುತ್ತಣ ಪ್ರದೇಶವನ್ನು ಪರಿಮಳದಿಂದ ತುಂಬುವ ಹೂವಿನಂತೆ, ಶ್ರೀ ಚರಬಸವಾರ್ಯರು ಇಂಥ ಹೂವಿನ ಬಾಳನ್ನು ಬಾಳಿದವರು.

ಇವರು ಹೈದರಾಬಾದು ಪ್ರಾಂತದ ಕನ್ನಡ ಭಾಗದ ಒಂದು ಹಳ್ಳಿಯಲ್ಲಿ ಜನ್ಮತಾಳಿ, ತಮ್ಮ ಸದಾಚಾರ, ದೈವಭಕ್ತಿ, ಸದ್ಬೋಧೆ, ನಿಷ್ಕಲಂಕ ವರ್ತನೆ, ಭೂತದಯೆ, ದಾಸೋಹ ಮಹಾತ್ಮೆ ಇವುಗಳಿಂದ ತಮ್ಮ ಸುತ್ತುಮುತ್ತಣ ಜನತೆ

ಯನ್ನು ಉದ್ಧಾರಮಾಡಿ ನೂತನ ಶರಣರೆಂಬಂತೆ ಖ್ಯಾತಿ ಪಡೆದಿದ್ದಾರೆ. ಇಂಥ ಮಹಾಮಹಿಮಾ ಪುರುಷರ ಚರಿತ್ರೆಯನ್ನು ಈ ಪುರಾಣರೂಪದಲ್ಲಿ ರಚಿಸಿ ಶ್ರೀ ಶಾಸ್ತ್ರಿಗಳವರು ಕನ್ನಡಿಗರಿಗೆ ದೊಡ್ಡ ಉಪಕಾರವನ್ನು ಮಾಡಿದ್ದಾರೆ.

ಹೈದರಾಬಾದ.
ತಾ|| ೧೮-೪-೫೦.

ಡಿ. ಕೆ. ಭೀಮಸೇನರಾವ್ *M. A.*
ಕನ್ನಡ ಪ್ರೊಫೇಸರ್
ಉಸ್ಮಾನಿಯಾ ಯೂನಿವರ್ಸಿಟಿ, ಹೈದರಾಬಾದ.



## 3

It was with great pleasure that I glanced through the pages of this biographia literaria of a modern Indian mystic and saint par excellence who, both by example and precept, propogated the eternal principles and tenets of Hindu Dharma to millions of men and women of Karnatak. His memory is still fresh in the minds of his devotees as in him they have found a great savant and spiritual healer. Though the author has used the old Puran-Kavya diction of the Shatpadi School, he has skilfully introduced into it, wherever possible, discussions of moral values and exposition of Indian Philosophy with particular reference to Veerashaiva Philosophy. I congratulate the author on the success he has achieved in delineating the character and elucidating the teachings of this great saint in a poetic work of a high standard.



*Hyderabad.*
D/ 9 - 3 - 50

*Siddayya Puranik,* B. A.
*President*
Kavisammelana of Harapanahalli.

# 4

I consider it to be a great privilege to express my ecstasy caused by my perusal of " CHARABASAWESHWAR PURANA " a biographical sketch of a great seer of Karnataka, written by Mr Widwan CHANDRASEKHAR SASTRI who is well-known throughout Karnatak as an eminent writer and a poet. Like Dr. Rabindranath Tagore he is a born poet, not Made. By his divine poetic gift he has written many books not only in Kannada but also in Sanskrit. Besides, he is a great orator and a good linguist knowing Prakrit, Hindi, English, Urdu Pali and Burmese.

The purity and integrity of his character make him truly a cultured man in the strictest sense of the word. He is a man ot 'sweetness and light.' Produced by such a great person who brooks no hatred and narrow-mindedness, this purana, containing all the ethical, social and religious codes, attempts to establish perpetual hormony among human race. Having the beauty and grandeur of the immortal works of eminent poets of the land, the present volume gives an immense pleasure and joy to the readers. The style of the poet is simple, elegant and beautiful. " Many have genius but, wanting art, are forever dumb " says Longfellow, a great English poet. The author here has undoubtedly not neglected art in this Purana. Coupled with the profoundity of thought, art looks

grand and unique in this volume.

On the whole, this ' Purana ', on account of its alround beauty and elegance can be called a ' Model Purana ' of the day and this alone justifies the titles of the poet such as ' Kaviratna ' and ' Kavikesari '.

It will not be an exaggeration if I call the poet ' Shakespeare ' of Karnatak. Because, his deep erudition, lofty ideas and flowless excellence of his style testify to the fact that he is really fit to be called shakespeare of Karnatak. I wish him God-speed in his literary campaign.

In fine, I would like to express myself in the immortal lines of the poet:—

" Nothing useless is or low; each
Thing in its place is best "

( Longfellow )

............

*Hyderabad.*
D/ 13-3-1950.

*S. Sharanappa* B. A.
Nizam Collage, Hyderabad–Deccan.



॥ ಶ್ರೀಗುರು ಸಿದ್ಧಲಿಂಗ ಸಮರ್ಥ ॥




☆

" ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರು " ಎಂಬ ಬಸವಣ್ಣನವರ ವಚನದಂತೆಯೂ, ಮತ್ತು " ಮಹಾತ್ಮರಂ ನೆನೆವುದೇ ಘನಮುಕ್ತಿ ಪಡಂ ಶಿವನಾಥನಾ " ಎಂಬ ಕವಿಶಿರೋಮಣಿ ಮೊಗ್ಗ-ಮಾಯಿ ಪ್ರಭುದೇವರ ಶತಕ ತ್ರಯದ ಉಕ್ತಿಯಂತೆಯೂ, ಶ್ರೀ ಷಟ್‌ಸ್ಥಲ ಜ್ಞಾನಿಗಳೂ, ಭಕ್ತಿ ಜ್ಞಾನ, ವೈರಾಗ್ಯ ನಿಧಿಗಳೂ, ದಾಸೋಹಮೂರ್ತಿಗಳೂ, ಶಿವಶರಣರೂ ಆದ, ಶ್ರೀ ಬಸವಯ್ಯತಾತನವರು ಭೀಮಾ ಕೃಷ್ಣಾ ನದಿಗಳ ಮಧ್ಯವರ್ತಿಯಾದ ಸಗರಗಡ್ಡಿಯ ಸುರಪುರ ನಾಡಿನ ಅನವಾರ ಗ್ರಾಮದಲ್ಲಿ ಶಿವಾಜ್ಞೆಯಿಂದ ಅವತರಿಸಿ, ಅನೇಕ ಮಹತ್ವಗಳನ್ನು ಮಾಡಿ, ಅನಂತ ಗ್ರಾಮಗಳಲ್ಲಿ ಸಂಚರಿಸಿ, ಜನಗಳಿಗೆ ಭಕ್ತಿ, ಜ್ಞಾನ, ಕ್ರಿಯಾದಿ ಕಾರ್ಯಗಳನ್ನು ಬೋಧಿಸಿ, ಕಾಯಕವೇ ಕೈಲಾಸವೆಂದರಿತು ಕಾಯಕ ರೂಪಿಗಳಾಗಿ ಶಹಪುರದಲ್ಲಿ ವಾಸವಾಗಿದ್ದು ಕಲಬುರ್ಗಿ ಶ್ರೀ ಶರಣರಿಗೆ ದೊಡ್ಡಪ್ಪನವರು ಭಕ್ತರಾದಂತೆ,ನಮ್ಮ ತಾತನವರಿಗೆ, ಯಾಳವಾರ ಸಿದ್ಧಪ್ಪನವರೂ, ಶಹಪೂರ ಪಿರಂಗಿ ಮಲ್ಲಯ್ಯನವರೂ, ಈ ಉಭಯರೂ ಭಕ್ತರಾಗಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ತಾತನವರು ಒಂದೇ ಸ್ಥಳದಲ್ಲಿರದೆ ಚರರೂಪಿಗಳಾಗಿ, ಭಕ್ತರಿಗೆ ಭಕ್ತಿಯ ಬೆಳಕನ್ನು ತೋರಿಸುತ್ತ " ಕಾಯಕವೇ ಕೈಲಾಸ " ವೆಂಬ ಶಿವಶರಣರ ಮಹಾಮಂತ್ರವನ್ನು ಜನಗಳಿಗೆ ಬೋಧಿಸುತ್ತ ಕಾಲಚಕ್ರದ ನೇಮದಂತೆ ತಮ್ಮ ಜಡಶರೀರವನ್ನು, ಇಷ್ಟಲಿಂಗದಲ್ಲಿ ಅಡಗಿಸಿದರು. ಇವರ ದಿವ್ಯಶರೀರವನ್ನು ಶಹಪುರದ ಸರ್ವ ಮಹಾಜನಗಳು ನಾಗರಕೆರೆಯ ಬಂಗಳ ಆವಾರದ ಪವಿತ್ರ ಭೂಮಿಯಲ್ಲಿ ಸಮಾಧಿಯನ್ನು ಮಾಡಿ ತೋರಗದ್ದುಗೆಯನ್ನು ನಿರ್ಮಿಸಿದರು ಈ ಸುಂದರ ಗದ್ದುಗೆಯನ್ನು ನೋಡಿ ತಮ್ಮ ಇಷ್ಟಾರ್ಥಸಿದ್ಧಿಗೋಸುಗ ಅನೇಕ ಪ್ರಾಂತಗಳಿಂದ ಅನಂತ ಜನರು ಯಾವಾಗಲೂ ಬರುತ್ತಲಿದ್ದಾರೆ. ಇಂತಹ ಶಿವಶರಣರ ಚರಿತ್ರೆಯನ್ನು ಈ ಹಿಂದೆ, ಯಾದಗಿರಿ ಶ್ರೀ ಶಂಕರಾನಂದ ಪ್ರೆಸ್ಸಿನ ಒಡೆಯರಾದ ಪಂ॥ ವೇ॥ ಗುರುಸಿದ್ಧಶಾಸ್ತ್ರಿಗಳು ಕಾವ್ಯತೀರ್ಥ ಗೋಡ್ಯಾಳ ಮಠ ಇವರು ಬರೆದು ತಮ್ಮ ಪ್ರೆಸ್ಸಿನಲ್ಲಿ ಅಚ್ಚುಮಾಡಿ ಪ್ರಕಟಿಸಿ, ಓದುಗರ ಮುಂದೆ ಇರಿಸಿದ್ದಾರೆ. ಆದರೂ ಈ ಮಹಾತ್ಮರ ವಿಷಯದಲ್ಲಿ

ಮನಸ್ಸಿಗೆ ತೃಪ್ತಿಯಾಗದೆ ತಾತನವರ ಪುರಾಣವನ್ನೇ ಬರೆಯಿಸಬೇಕೆಂದು ಪಂ॥ ವೇ॥ ಕವಿರತ್ನ ಚಂದ್ರಶೇಖರಶಾಸ್ತ್ರಿಗಳು ಮಂಗಾಪೂರ ಇವರಿಗೆ ಅರಿಕೆಮಾಡಿ ಕೊಂಡರು. ಈ ಕವಿಗಳು ಒಪ್ಪಿಗೆಯಿತ್ತು ಜೀವನಚರಿತ್ರೆಗಳಲ್ಲಿರುವ ಮಹತ್ವಗಳ ಲ್ಲದೆ, ನಾನು ಸೂಟಿಯು ಕಾಲದಲ್ಲಿ ತಾತನವರು ಸಂಚಾರಮಾಡಿದ ಸ್ಥಲಗಳಲ್ಲಿಗೆ ಹೋಗಿ ಇವರ ಮಹತ್ವಗಳನ್ನು ವಯೋವೃದ್ಧ ಜ್ಞಾನಿಗಳಿಂದ ತಿಳಿದುಕೊಂಡದ್ದ ಲ್ಲದೆ ವಿಶೇಷವಾಗಿ ರಾ॥ ರಾ॥ ಶ್ರೀಯುತ ಸಂಗಣ್ಣನವರು ದುದ್ದಿ ಫಿರೋಜಾಬಾದ ಇವರಿಂದ ತಿಳಿದುಕೊಂಡು ಕವಿಗಳಿಗೆ ತಿಳಿಸಲಾಗಿ, ಕವಿಗಳು ಬಹು ಸ್ವಾರಸ್ಯವಾಗಿ ಭಾಮಿನಿ ರೂಪ ಪದ್ಯಗಳಲ್ಲಿ ( ೧೩೧೭ ) ಪದ್ಯಗಳನ್ನು ಬರೆದು ತಮ್ಮ ಜನ್ಮವನ್ನು ಸಾರ್ಥಕವಮಾಡಿಕೊಂಡರೆಂದು ಹೇಳಲು ನನಗೆ ತುಂಬಾ ಆನಂದವಾಗುತ್ತದೆ. ಕವಿ ಗಳು ಈ ಪುರಾಣ ಕವಿತೆಯಲ್ಲಿ ಸಾಹಿತ್ಯದ ಸುಗ್ಗಿಯನ್ನೇ ತುಂಬಿರುವರು. ಈ ಸುಗ್ಗಿಯ ಸೊಬಗು ಪುರಾಣ ಪ್ರತಿಯನ್ನು ಓದಿದವರಿಗೆ ಮಾತ್ರ ಸತ್ಯವೆಂದು ಅರಿಕೆಯಾಗಲಾರದೆ ಇರದು.

ಅಸ್ತು. “ ಶೃತಿಯೊಳೀಶಾರ್ಚನೆಗೆ ನುತಿಕೋಟಿ ಮಿಗಿಲೆಂದು । ಪತಿಕರಿಸಿ ಪೊಗಳುತಿಹುದಾಗಿ ಶರಣ ಸಂತತಿಯನೆ ಹಾಡಿಹರಸುವೆ ” ಎಂಬ ನಿಜಗುಣರ ಉಕ್ತಿಯಂತೆ, ಶಿವಪೂಜಾನಿಷ್ಠರೂ, ದಾಸೋಹಮೂರ್ತಿಗಳೂ, ಕ್ರಿಯಾಜ್ಞಾನನಿಧಿ ಗಳೂ,ಧರ್ಮ ಪರಾಯಣರೂ ಆದ ಶ್ರೀಮಾನ್ ದೊಡ್ಡಪ್ಪ ಅಪ್ಪಾ ಸಾಧೂ ಶ್ರೀ ಶರಣಬಸವೇಶ್ವರ ಸಂಸ್ಥಾನ ಗುಲಬರ್ಗಾ ಇವರ ವ.ಹಾ ಸನ್ನಿಧಿಯಲ್ಲಿ ತಾತನವರ ಪುರಾಣವನ್ನು ನಾನು ಮತ್ತು ನಮ್ಮ ಮಿತ್ರರಾದ ಪಂ॥ ವೇ॥ ಗುರುಸಿದ್ಧಶಾಸ್ತ್ರಿ ಗಳೂ. ಉಭಯರೂ ಪ್ರಕಟಗೊಳಿಸಲೋಸುಗ ಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳಲು ನಮ್ಮೀ ಉಭಯರ ಅರಿಕೆಯನ್ನು ಅರಿತು ಶ್ರೀ ಶರಣರು ಪ್ರಸಾದವಾಣಿಯಿಂದ ಶ್ರೀ ಅನವಾರ ಬಸವಯ್ಯತಾತನವರು, ಮಹಾಶಿವಶರಣರೂ, ಕ್ರಿಯಾಜ್ಞಾನಸಂಪ ನ್ನರೂ, ಇವರ ಪುರಾಣವನ್ನು ಪ್ರಕಟಮಾಡಿರೆಂದು ಅಪ್ಪಣೆಕೊಡಿಸಿ, ತಮ್ಮ ದಿವ್ಯ ಹಸ್ತದಿಂದ ೧೦೧ .ರೂಪಾಯಿಗಳನ್ನು ಆಶೀರ್ವಾದಪೂರ್ವಕ ದಯಪಾಲಿಸಿದರು. ಈ ಕಾಣಿಕೆಯನ್ನು ತಂದು ಅಚ್ಚುಗೊಳಿಸಬೇಕೆನ್ನುವದರಲ್ಲಿ, ಕೆಲವು ಅನಾನುಕೂ ಲಗಳ ಕಾರಣ ನಿಲ್ಲಲಾಗಿ, ಹೀಗೆ ಕೆಲವು ದಿವಸ ಗತವಾಗಲು, ವೇ॥ ಗುರುಸಿದ್ಧ- ಶಾಸ್ತ್ರಿಗಳು ತಮ್ಮ ಪ್ರೆಸ್ಸಿನ ಅಮರವಾಣಿ ಮಾಸಿಕದ ಅನಂತಕಾರ್ಯಗಳಮೂಲಕ ಸಾಧ್ಯವಾಗದೆ ಇದ್ದ ಪ್ರಯುಕ್ತ ನನಗೆ ಕೇಳಿಕೊಂಡರು. ಶ್ರೀ ಶರಣರಿಗೆ ವಚನವಿ ತ್ತಿದ್ದಕ್ಕಾಗಿ ಅಚ್ಚುಗೊಳಿಸಿ ಪ್ರಕಾಶಪಡಿಸಲೇಬೇಕಾಗಿದೆ. ಕಾರಣ ನೀವು ಒಪ್ಪಲೇ ಬೇಕೆಂದು ನನಗೆ ಒತ್ತಾಯಪಡಿಸಿದರು.

ನಾನಾದರೂ ಅಷ್ಟು ಸಮರ್ಥನೂ, ಸ್ವತಂತ್ರನಿಲ್ಲದಿದ್ದರೂ ಉಪಾಯವಿ

ಲ್ಲದೆ ಮಹಾತ್ಮರ ಕಾರ್ಯಕ್ಕಾಗಿ ಒಪ್ಪಲೇಬೇಕಾಯಿತು. ಆಗ್ಗೆ ನಾನು ಆಲೋಚಿಸಿ ಈ ಮಹತ್ವ ಕಾರ್ಯವು ನನ್ನೊಬ್ಬನಿಂದ ಸಾಧ್ಯವಿಲ್ಲೆಂದು ತಿಳಿದು ನನ್ನ ಅತಿ ಸ್ನೇಹಿತರಾದ ಸಂಗೀತ ರತ್ನ, ಸಂಗೀತ ಸಾಗರರೆಂಬ ಬಿರುದಾಂಕಿತರಾದ ಪಂ|| ವೇ|| ಪಂಚಾಕ್ಷರ ಗವಾಯಿಗಳು ಬಿಲ್ಲಂ ಕೊಂಡಿ ಹಿರೇಮಠ ಶಹಪೂರ ಇವರಿಗೆ ಕೋರಿಕೆಮಾಡಿಕೊಂಡೆನು. ನನ್ನ ಕೋರಿಕೆ ಮಾನ್ಯಮಾಡಿ ನನ್ನ ಸಹಾಯಕ್ಕೆ ನಿಂತರು. ಉಭಯರೂ ಕೂಡಿ ಪುರಾಣ ಪ್ರಕಾಶ ಕಾರ್ಯವನ್ನು ಮಾಡಲು ಸಿದ್ಧರಾದೆವು. “ ಹಾದಿಕಾಣದ ಕುರುಡನಿಗೆ, ಹಾದಿ ತೋರಿಸುವಂತೆ ” ಈ ಪ್ರಕಾಶ ಕಾರ್ಯಕ್ಕೆ ನಿಧಿ ಸಂಗ್ರಹಕ್ಕಾಗಿ, ಪರೋಪಕಾರ ನಿರತರಾದ ಶ್ರೀ. ಷಣ್ಮುಖಪ್ಪನವರು ಮಾ|| ಪಾ|| ಕೆಲ್ಲೂರ ಇವರು ನಮ್ಮ ಸಂಗಡ ಕೆಲವು ಮುಖ್ಯ ಮುಖ್ಯ ಗ್ರಾಮಗಳಿಗೆ ಬಂದು, ಹಣವನ್ನು ಸಂಪಾದಿಸಿಕೊಟ್ಟರು. ಈ ಮಹಾಶಯರು ಯಾವಾಗಲೂ ಇಂತಹ ಧರ್ಮಕಾರ್ಯಗಳಲ್ಲಿ ಧುರೀಣರೂ ಭಕ್ತಿವಂತರೂ, ಇದ್ದು ತಮ್ಮ ಸ್ವಗ್ರಾಮದಲ್ಲಿ ತಾತನವರ ಭಾವೀ ಗದ್ದುಗೆಯನ್ನು ನಿರ್ಮಿಸಿ, ಪ್ರತಿವರ್ಷ ಚೈತ್ರ ಶು|| ೫ ಗೆ ರಥೋತ್ಸವ ಕಾರ್ಯವನ್ನು ಗ್ರಾಮದ ಸರ್ವಜನರಿಂದ ನೆರವೇರಿಸುತ್ತಲಿದ್ದಾರೆ. ಇವರ ಸಹಾಯವಲ್ಲದೆ ಇನ್ನೂ ಅನೇಕ ಗ್ರಾಮದ ಧರ್ಮಾಭಿಮಾನಿಗಳ ಸಹಾಯದಿಂದ ಪುರಾಣ ಅಚ್ಚುಗೊಳಿಸಿ ಪ್ರಕಾಶ ಪಡಿಸಲು ಸಾಮರ್ಥ್ಯ ಬಂದಿತು. ಪುರಾಣ ಅಚ್ಚುಗೊಳಿಸಲು ಪಂ|| ವೇ|| ಗುರುಸಿದ್ಧಶಾಸ್ತ್ರಿಗಳಲ್ಲಿ ಹೋಗಿ ಕೇಳಿಕೊಳ್ಳಲಾಗಿ ಇವರು ತಮ್ಮ ಪ್ರೆಸ್ಸಿನಲ್ಲಿ ಪುರಾಣವನ್ನು ಸುಂದರವಾಗಿಯೂ ಅಚ್ಚುಕಟ್ಟಾಗಿಯೂ, ಬಹು ಶ್ರಮವಹಿಸಿ ಅಚ್ಚುಗೊಳಿಸಿದುದಕ್ಕಾಗಿ, ಮತ್ತು ಪುರಾಣ ಶೋಭೆಗಾಗಿ ನನ್ನ ಅರಿಕೆಯಂತೆ ಮೂರು ಮಾತು ಮುನ್ನುಡಿ ಬರೆದ ವೇ|| ಪಂ|| ವಿದ್ವಾನ್ ವಿರೇಶ್ವರಶಾಸ್ತ್ರಿಗಳಿಗೂ ಪ್ರೆಸ್ಸಿನ ಮಾಲಕರಿಗೂ ಬಹು ಋಣಿಯಾಗಿದ್ದೇನೆ.

ಯದ್ಯಪಿ ನಾನು ಸಾಹಿತಿಯೂ ಅಲ್ಲ, ಸಾಹಿತ್ಯ ಬಲ್ಲವನೂ ಅಲ್ಲ. ಸಾಹಸಿಯೂ ಅಲ್ಲ. ನಾನು ಬರೆದಿರುವ ಅರುವಿನ ಅರಿಕೆಯು ಕನ್ನಡ ಸಾಹಿತ್ಯದ ಅಭಿಮಾನಿಗಳು ಅಂತರಾತ್ಮನಿಂದ ಅರಿತು, ಅರಿಕೆಯು ಅರಿವು ಅರೆಮರೆಯಾಗಿರದೆ, ಸಾಹಿತ್ಯದ ಸೇವೆಯನ್ನು ಕವಿರೂಪದಿಂದ ಮಾಡಿದ ಕವಿಗಳ ಹೃದಯದ ಅಂತರಾಳವನ್ನು ತಿಳಿಯುವ ಶಕ್ತಿಯನ್ನು ಭಗವಂತನು ದಯಪಾಲಿಸಲೆಂದು ನನ್ನ ಅರಿಕೆಯ ಕಾಣಿಕೆಯನ್ನು ನಮ್ರತೆಯಿಂದ ಕರ್ನಾಟಕದ ಕನ್ನಡಿಗರಿಗೆ ಭಕ್ತಿಯಿಂದ ಅರ್ಪಿಸುತ್ತೇನೆ.

ತಾ|| ೫-೮-೧೯೫೦.

ಸಜ್ಜನ ವಿಧೇಯ,
ಶಿವಕಥಾ ಭೂಷಣ, ಕೀರ್ತನ ಕೇಸರಿ,
ಬಂದಯ್ಯ ಮಾಷ್ಟರ್, ಬಿಜಾಪೂರ.

★ ಪ್ರಕಾಶಕರು ★





ಶಿವಕಥಾಭೂಷಣ, ಬಂದಯ್ಯ ಮಾಷ್ಟರ್, ಬಿಜಾಪೂರ.



ಸಂಗೀತ ರತ್ನ,
ಪಂಚಾಕ್ಷರ ಗವಾಯಿಗಳು ಬಿಲ್ಲಂ ಕೊಂಡಿ ಹಿರೇಮಠ, ಶಿಹಪೂರ.

## ಪುರಾಣ ಬರೆಯಿಸಿದವರು



ಗೋಡ್ಯಾಳ ಮಠದ ನಾಯ್ಕಲ್
ಗುರುಸಿದ್ಧಶಾಸ್ತ್ರಿಗಳು ಕಾವ್ಯತೀರ್ಥ.



ಬೇಗ್ವಾಟ ಮಠದ
ವೀರೇಶ್ವರಶಾಸ್ತ್ರಿಗಳು ವಿದ್ವಾನ್.

ಯಾದಗಿರಿ.

# ಹಂಬಲು



ಪ್ರಿಯ ವಾಚಕರೆ,

ಶ್ರೀ ಪರಮ ದಾಸೋಹಮೂರ್ತಿಗಳೂ, ಮಹಾಮಹಿಮಾಶಾಲಿಗಳೂ ಆದ ಶಹಪೂರ ಅನವಾರ ಮಠದ ಶ್ರೀ ಚರಬಸವಾರ್ಯರ ಸಂಪೂರ್ಣ ಜೀವನ ಚರಿತ್ರೆಯನ್ನು ನನ್ನ ಅಲ್ಪಬುದ್ಧಿಗೆ ತಿಳಿದಷ್ಟು ಗದ್ಯರೂಪವಾಗಿ ಬರೆದು ಮುದ್ರಿಸಿ ಪ್ರಚುರಪಡಿಸಿದ್ದೇನು. ಆದರೂ ಶ್ರೀ ಚರಬಸವಯೋಗಿಗಳ ದಿವ್ಯ ಪುರಾಣವನ್ನು ಬರೆಯಿಸಿ ಪ್ರಚುರಪಡಿಸಬೇಕೆಂಬ ಹಂಬಲು ಮಾತ್ರ ಯಾವಾಗಲೂ ನನ್ನ ಹೃದಯದಲ್ಲಿ ಬಹುದಿನಗಳಿಂದಲೂ ಮನೆಮಾಡಿಕೊಂಡಿತ್ತು. ಮನೋಹರವಾಗಿ ಪುರಾಣಗಳನ್ನು ರಚಿಸುವಂಥ ಕವಿಶ್ರೇಷ್ಠರು ಯಾರೂ ಜಾಗ್ರತೆಯಾಗಿ ದೊರೆಯಲಿಲ್ಲ. ಇತ್ತೀಚೆಗೆ ನನ್ನ ಹಂಬಲಿನಂತೆಯೇ ಅತ್ಯದ್ಭುತವಾದ ಕವಿತಾಶಕ್ತಿಯುಳ್ಳವರೂ, ಮಹಾ ವಾಗ್ಮಿಗಳೂ, ತತ್ವಜ್ಞಾನಿಗಳೂ ಆದ ಮಾನ್ಯ ಮಿತ್ರವರ್ಯ ಜ್ಯೋತಿಪುರವಾಸಿ ಮಂಗಾಪುರ ಮೇಗೇರಿ ಮಠದ ಕವಿರತ್ನ ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳು ದೊರೆತುದೊಂದು ಮಹಾಭಾಗ್ಯ. ಇವರಿಗೆ ಶ್ರೀ ಚರಬಸವೇಶ್ವರ ಪುರಾಣವನ್ನು ರಚಿಸಲು ವಿಜ್ಞಾಪಿಸಿಕೊಂಡೆನು. ಮಾನ್ಯ ಮಿತ್ರರು ಏನೊಂದು ಪ್ರತಿಫಲದ ಆಶೆಯಿಲ್ಲದೆ ೧೩೦೦ ಭಾಮಿನೀ ಷಟ್ಪದಿಗಳಿಂದ ಶ್ರೀ ಚರಬಸವೇಶ್ವರ ಪುರಾಣವನ್ನು ಸ್ವಲ್ಪ ದಿವಸಗಳಲ್ಲಿಯೇ ರಚಿಸಿಕೊಟ್ಟರು. ಶ್ರೀ ಶಾಸ್ತ್ರಿಗಳವರ ಕವಿತಾಶಕ್ತಿಯು ಅಮೋಘವಾದುದು. ದೇವದತ್ತವಾದುದು. ಈ ಪುರಾಣದಲ್ಲಿ ಪ್ರಾಚೀನ ಮಹಾಕಾವ್ಯಗಳಲ್ಲಿ ತೋರಿಬರುವ ಶ್ರೇಷ್ಠಾಂಶಗಳನ್ನೆಲ್ಲ ಒಡಮೂಡಿಸಿ,

ಆಧುನಿಕ ಕವಿಗಳಿಗೂ ಮತ್ತು ರಸಿಕಮಹಾಶಯರಿಗೂ ಆನಂದವಾಗುವಂತೆ ತಮ್ಮ ಕಾವ್ಯವಾಹಿನಿಯನ್ನು ಹೃದಯಂಗಮವಾಗಿ ಹರಿಸಿದ್ದಾರೆ. ಶೈಲಿಯು ಸುಲಭವಾಗಿದ್ದು ಸುಭಗವಾಗಿರುತ್ತದೆ. ಪವಾಡಗಳ ವರ್ಣನೆಯಲ್ಲಿಯೂ, ವೀರಶೈವ ಸಿದ್ಧಾಂತ ನಿರೂಪಣೆಯಲ್ಲಿಯೂ ನೂತನವಾದ ಔಚಿತ್ಯವಿದೆ.

ಇಂಥಾ ಸರ್ವಾಂಗ ಸುಂದರವಾದ ಈ ಮಹಾಪುರಾಣವನ್ನು ಕಾಗದದ ಬೆಲೆಯು ಮೊದಲಿಗಿಂತಲೂ ಹತ್ತುಪಟ್ಟು ಹೆಚ್ಚಾದ್ದರಿಂದ ಮುದ್ರಣಮಾಡಿ ಪ್ರಕಟಿಸಲು ನನ್ನಿಂದ ಸಾಧ್ಯವಾಗದೆ ಮಿತ್ರರಾದ ಶಿವಕಥಾಭೂಷಣ, ಬಂದಯ್ಯ ಮಾಸ್ತರ್ ಬಿಜಾಪೂರ, ಮತ್ತು ಸಂಗೀತರತ್ನ, ಪಂಚಾಕ್ಷರಗವಾಯಿಗಳು ಬಿಲ್ಲಂಕೊಂಡಿ ಹಿರೇಮಠ ಶಹಪೂರ ಈ ಉಭಯರ ಮುಂದೆ ಶ್ರೀ ಚರಬಸವೇಶ್ವರ ಪುರಾಣವನ್ನು ಮುದ್ರಿಸಿ ಪ್ರಕಟಿಸಬೇಕೆಂಬ ಸದಿಚ್ಛೆಯನ್ನು ವ್ಯಕ್ತಮಾಡಿದೆನು. ನನ್ನ ವಕ್ತವ್ಯವನ್ನು ಮನ್ನಿಸಿ, ಮನದಂದು, ಮಾನ್ಯರ ಸಚ್ಚರಿತ್ರೆಯನ್ನು ಪ್ರಕಟಿಸಿ ಜನ್ಮ ಸಾರ್ಥಕ ಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆಯಿಂದ ಸತತ ಎರಡು ವರುಷಗಳವರೆಗೂ ಅತ್ಯಂತ ಶ್ರಮವಹಿಸಿ ಸದ್ಭಕ್ತಮಹಾಶಯರಿಂದ ಹಣವನ್ನು ಸಂಗ್ರಹಿಸಿ, ನಮ್ಮ ಶಂಕರಾನಂದ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಕಟಿಸಿದ್ದಾರೆ.

ಈ ಪುರಾಣ ಮುದ್ರಣದ ಸರ್ವಹೊಣೆಯನ್ನು ಹೊತ್ತುಕೊಂಡ ಈ ಉಭಯ ಮಹನೀಯರಿಗೂ ಮತ್ತು ಈ ಗ್ರಂಥಕರ್ತರಾದ ಉಭಯ ಕವಿತಾವಿಶಾರದರೂ, ಅನೇಕ ಭಾಷೆಗಳನ್ನು ಬಲ್ಲವರೂ ಆದ ಶ್ರೀಮರ್ನ ಚಂದ್ರಶೇಖರಶಾಸ್ತ್ರಿಗಳವರಿಗೂ ನನ್ನ ನಲ್ಮೆಯ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುವೆನಲ್ಲದೆ, ಈ ಮಹನೀಯರ ಉಪಕಾರವನ್ನು ಎಂದಿಗೂ ಮರೆಯಲಾರೆನು. ಪ್ರಯುಕ್ತ ಸದ್ಭಕ್ತ ಮಹಾಶಯರೆಲ್ಲರೂ ಈ ಮಹಾಪುರಾಣವನ್ನು ಸಂಗ್ರಹಿಸಿ ಮಾನ್ಯ ಕವಿಗಳ ಮತ್ತು ಪ್ರಕಾಶಕರ ಶ್ರಮ ಸಾರ್ಥಕಗೊಳಿಸುವದಲ್ಲದೆ, ಈ ಪುರಾಣ ಪಠನದಿಂದ ತಮ್ಮ ಇಚ್ಛಿತಗಳನ್ನು ಪಡೆದು ಧನ್ಯರಾಗಬೇಕೆಂದು ನನ್ನ ಹಂಬಲು.

---

ಯಾದಗಿರಿ.
ತಾ|| ೨೦–೩–೫೦.

ಗೋಡ್ಯಾಳ ಮಠದ, ನಾಯ್ಕಲ್
ಗುರುಸಿದ್ಧಶಾಸ್ತ್ರಿಗಳು
( ಕಾವ್ಯತೀರ್ಥ )

★

ಓಂ

# ವಿಷಯಾನುಕ್ರಮಣಿಕೆ

ವನ್ನು ಕೈಕೊಂಡು ರೂಪಾಯಿಗೆ ಒಂದಾಣೆಯಂತೆ ಲಾಭಪಡೆಯಬೇಕೆಂಬ ನೇಮ ವನ್ನು ಮಾಡಿಕೊಂಡುದು. ೩ ಜವಳಿ ವ್ಯಾಪಾರದಲ್ಲಿ ಬಂದ ಲಾಭವನ್ನು ತ್ರಿಜೋರಿಯಲ್ಲಿ ಹಾಕಿಡದೆ ಗುರು ಲಿಂಗಜಂಗಮರ ಸೇವೆಗಾಗಿಯೂ, ದಾಸೋಹ ಕ್ಕಾಗಿಯೂ ವಿನಿಯೋಗಿಸುವದು. ೪ ಬಂದ ಹಣವನ್ನು ದಾಸೋಹಕ್ಕೆ ವಿನಿಯೋ ಗಿಸುತ್ತಿದ್ದರಿಂದ ಅವರ ತಮ್ಮ ರಾಚಯ್ಯನವರಿಗೆ ಸರಿಬೀಳದೆ ಅಣ್ಣನವರನ್ನು ಪಾಲುಕೊಡಬೇಕೆಂದು ಕೇಳುವದು. ೫ ಬಸವಾರ್ಯರು ಈ ಪಾಲೂ ಬೇಡ, ಈ ಮಠವೂಬೇಡ, ನೀವೇ ಸುಖವಾಗಿ ಮಾಡಿಕೊಂಡು ಇರಬೇಕು ಎಂದು ಹೇಳಿ ಆಸ್ತಿಯನ್ನೆಲ್ಲ ಅವರಿಗೆ ಬಿಟ್ಟು ಧರ್ಮಪತ್ನಿಯಾದ ಸೂಗಮ್ಮಾಂಬೆಯನ್ನು ಕರೆದು ಕೊಂಡು ಶಹಪುರಕ್ಕೆ ತೆರಳುವದು. ೬ ಶಹಪುರದಲ್ಲಿ ಶಿವಭಕ್ತರು ಇವರಿಗೆ ಆಶ್ರ ಯವನ್ನು ಕೊಟ್ಟು ಮಠವನ್ನು ಸ್ಥಾಪಿಸಿಕೊಟ್ಟುದು. ೭ ಈ ಮಠದಲ್ಲಿಯೇ ಜವಳಿ ವ್ಯಾಪಾರ ಕಾಯಕದಿಂದ ಉಂಟಾದ ಲಾಭದಿಂದ ಘನತರವಾಗಿಯೂ, ನಿರ್ವಿಘ್ನ ವಾಗಿಯೂ ದಾಸೋಹವನ್ನು ಸಾಗಿಸುವದು. ೮ ಇವರ ಭಕ್ತಿಯ ಪ್ರಭಾವದಿಂದ ಲೂ, ಯೋಗ್ಯವಾದ ನಡತೆಯಿಂದಲೂ, ಮಹಿಮೆಗಳಾಗಲು ಪ್ರಾರಂಭ.

೬ ನೇ ಸಂಧಿ ಪುಟ ೫೦-೫೮

೧ ಬಳಬಟ್ಟಿ ಚೆನ್ನಬಸವನಗೌಡರಿಗೆ ಹಮ್ಮಿಣಿಯ ಮಹತ್ವವನ್ನು ತೋರಿ ಸುವದು. ಮತ್ತು ಅವರಿಗೆ ವೀರಶೈವರ ನಿತ್ಯಾಚರಣೆಯನ್ನು ಬೋಧಿಸುವದು.

೭ ನೇ ಸಂಧಿ ಪುಟ ೫೯-೬೮

೧ ಶೀರೆಯ ಮಹತ್ವವನ್ನು ತೋರಿಸಿ ಫೌಜುದಾರನಿಗೆ ಗೃಹಸ್ಥಾಶ್ರಮದ ಧರ್ಮವನ್ನು ಉಪದೇಶಿಸುವದು.

೮ ನೇ ಸಂಧಿ ಪುಟ ೬೯-೭೬

೧ ಶ್ರೀ ಶರಣಬಸವೇಶ್ವರನ ಪುರಾಣಾರಾಧನ ಕಾಲದಲ್ಲಿ ಮಿತಪ್ರಸಾದದಿಂದ ಅಮಿತ ಜನರನ್ನು ತೃಪ್ತಿಗೊಳಿಸುವದು. ೨ ವಸ್ತ್ರದಹಳ್ಳಿಯ ಓರ್ವ ಬಡವನಿಗೆ ನಿರ್ವಂಚನೆಯಿಂದ ಗೋಧಿ ದಾನಮಾಡುವದು. ೩ ಭಕ್ತಾದಿಗಳಿಗೆ ವೀರಶೈವ ತ್ವದ ಲಕ್ಷಣವನ್ನು ಬೋಧಿಸುವದು.

೯ ನೇ ಸಂಧಿ ಪುಟ ೭೭-೮೪

೧ ತತ್‌ಕ್ಷಣದಲ್ಲಿಯೇ ಬಾಳೆಯ ಕಾಯಿಗಳು ಹಣ್ಣಾಗುವದು. ೨ ನಾರಿ- ಯರಿಗೆ ಸ್ತ್ರೀಧರ್ಮವನ್ನು ಬೋಧಿಸುವದು.

೧೦ ನೇ ಸಂಧಿ. ಪುಟ ೮೫-೯೬

೧ ಪುರಾಣಮಂಟಪಕ್ಕೆ ಹತ್ತಿದ ಬೆಂಕಿಯು ತತ್ ಕ್ಷಣದಲ್ಲಿ ತಾನಾಗಿಯೇ ಶಾಂತವಾಗುವಿಕೆ. ಹಾಗೂ ನೀರಿನ ಮಹತ್ವವನ್ನೂ, ತುಪ್ಪದ ಮಹತ್ವವನ್ನೂ ತೋರಿಸುವದು. ೨ ನವತರುಣರಿಗೆ ಬ್ರಹ್ಮಚರ್ಯಾಶ್ರಮದ ಮಹತ್ವವನ್ನು ಉಪದೇಶಿಸುವಿಕೆ.

೧೧ ನೇ ಸಂಧಿ. ಪುಟ ೯೭-೧೧೪

೧ ಕೊಡಚಿಗಿ ಎಂಬ ಗ್ರಾಮದಲ್ಲಿ ಶ್ರೀ ಶರಣಬಸವೇಶ್ವರ ಪುರಾಣದ ಸಮಾಪ್ತಿಕಾ ಗಣಾರಾಧನೆಯ ಸಮಯದಲ್ಲಿ ನೀರಿನ ಮಹತ್ವವನ್ನು ತೋರಿಸುವದು. ೨ ಅಲ್ಲಿಯ ಸರ್ವಜನರಿಗೆ ಮಾನವ ಧರ್ಮವನ್ನು ಉಪದೇಶಿಸುವದು.

೧೨ ನೇ ಸಂಧಿ. ಪುಟ ೧೧೫-೧೨೪

೧ ಕೌಲಗಿ ಗ್ರಾಮದಲ್ಲಿ ಶ್ರೀ ಶರಣಬಸವೇಶ್ವರನ ಪುರಾಣದ ಸಮಾಪ್ತಿಯ ಮಂಗಲದ ಗಣಾರಾಧನೆಯ ಸಮಯದಲ್ಲಿ ತಾಂಬಾಣಿಗಳ ಮಹತ್ವವನ್ನು ತೋರಿಸುವದು. ೨ ಭಕ್ತರಿಗೆ ವೀರಶೈವಮತ ಸರ್ವೋತ್ಕೃಷ್ಟತೆಯನ್ನು ಬೋಧಿಸುವದು.

೧೩ ನೇ ಸಂಧಿ. ಪುಟ ೧೨೫-೧೩೨

೧ ಗುಳ್ಯಾಳ ಗ್ರಾಮದ ಶಿವಪ್ಪಗೌಡರ ಮನೆಯಲ್ಲಿ ಗಣಾರಾಧನೆಗಾಗಿ ಸಿದ್ಧ ಮಾಡಿದ ಸಜ್ಜಕದ ಉಂಡೆಗಳಿಗೆ ವಿಶೇಷವಾಗಿ ಮುತ್ತಿದ ಕೆಂಜಿಗಗಳು ತತ್ ಕ್ಷಣದಲ್ಲಿಯೇ ಮಾಯವಾಗುವಿಕೆ. ೨ ಅಲ್ಲಿಯ ಭಕ್ತರಿಗೆ ಎಲ್ಲಾ ಯೋಗಗಳಿಗೂ ಶಿಖಾಮಣಿಯಾದ ಭಕ್ತಿಯೋಗದ ಮಹತ್ವವನ್ನು ಉಪದೇಶಿಸುವಿಕೆ.

೧೪ ನೇ ಸಂಧಿ. ಪುಟ ೧೩೩-೧೪೯

೧ ವೆಂಕಟಾಪುರಕ್ಕೆ ಕಾರ್ಯಾರ್ಥವಾಗಿ ಹೋಗಿ ಓರ್ವ ಭಕ್ತನ ಮನೆಯಲ್ಲಿದ್ದು ಅಲ್ಲಿ ಹಗ್ಗದ ಕಾಯಕವನ್ನು ಮಾಡುತ್ತ ಕುಳಿತ ಕಾಲದಲ್ಲಿ ಕೈಯಲ್ಲಿ ನಾಗರ ಹಾವು ತೋರಿ ತತ್ ಕ್ಷಣವೇ ಮಾಯವಾದದ್ದು. ೨ ಅಲ್ಲಿನ ಜನರಿಗೆ ಸತ್ಯ, ಅಹಿಂಸೆಯನ್ನು ಬೋಧಿಸುವದು.

೧೫ ನೇ ಸಂಧಿ. ಪುಟ ೧೫೦-೧೭೨

೧ ಶಹಪುರದಲ್ಲಿ ಭೂತವನ್ನು ಬಿಡಿಸುವದು, ಮತ್ತು ಭಕ್ತಿಭಂಡಾರಿ ಬಸವಣ್ಣನವರ ಪುರಾಣವು ನಡೆದ ಸಮಯದಲ್ಲಿ ಅಲ್ಲಿಯ ಭಕ್ತರಿಗೆ ಅಷ್ಟಾವರ್ಣಗಳ ಮಹತ್ವವನ್ನು ಬೋಧಿಸುವದು.

## ೧೬ ನೇ ಸಂಧಿ. ಪುಟ ೧೭೩-೧೭೯

೧ ಶಹಪುರದಲ್ಲಿ ಓರ್ವ ಭಕ್ತನ ಮನೆಯಲ್ಲಿ ಜಲದಿಂದ ದೀಪವನ್ನು ಉರಿಸುವದು. ೨ ಭಕ್ತನಿಗೆ ಷಟ್‍ಸ್ಥಳಗಳ ಮಹತ್ವವನ್ನು ಬೋಧಿಸುವದು.

## ೧೭ ನೇ ಸಂಧಿ. ಪುಟ ೧೮೦-೧೮೬

೧ ಗೂಟಕ್ಕೆ ತಗಲುಹಾಕಿದ ಒಂದೇ ಜೋಳಿಗೆಯಲ್ಲಿಯೋ ಮನಸ್ಸಿನಲ್ಲಿ ಇಚ್ಛಿಸಿದ ಸರ್ವ ಪದಾರ್ಥಗಳೂ ದೊರಕುವದು, ಹಾಗೂ ಯಥೇಷ್ಟವಾಗಿ ಸಿಗುವದು. ೨ ಕಂಬಿಯು ಕಾಯಕದ ಮಾಹೇಶ್ವರರಿಗೆ ಪಂಚಾಚಾರಗಳ ಮಹತ್ವವನ್ನು ಬೋಧಿಸುವದು.

## ೧೮ ನೇ ಸಂಧಿ. ಪುಟ ೧೮೭-೨೦೫

೧ ಸಿದ್ಧರಾಮೇಶ್ವರ ಪುರಾಣದ ಸಮಾಪ್ತಿ ಗಣಾರಾಧನೆಯು ಕಾಲದಲ್ಲಿ ತುಪ್ಪವು ಕಡಿಮೆಬೀಳಲು ನೀರನ್ನು ತುಪ್ಪವನ್ನಾಗಿ ಮಾಡಿ ನೀಡುವದು. ೨ ಭಕ್ತರಿಗೆ ಶಿವಶರಣರ ವಚನಶಾಸ್ತ್ರದ ಮಹತ್ವವನ್ನು ಉಪದೇಶಿಸುವದು.

## ೧೯ ನೇ ಸಂಧಿ. ಪುಟ ೨೦೬-೨೧೦

೧ ಚರಬಸವಾರ್ಯರು ಇಜೇರಿಸಂತೆಗೆ ಹೋಗುವ ಕಾಲದಲ್ಲಿ ಕಳ್ಳರಿಗೆ ತೋರಿಸಿದ ಮಹಿಮೆ. ೨ ಯಾಳ್ವಾರ ಗ್ರಾಮದಲ್ಲಿ ಗೋಣಿತಟ್ಟಿನ ಅಂಗಿಯನ್ನು ತೊಟ್ಟುಕೊಂಡು ಭವಿಷ್ಯವನ್ನು ಸೂಚಿಸಿದ್ದು. ೩ ಕಾಕಂಡಿಕಿ ಗ್ರಾಮದಲ್ಲಿ ಗುಂಡಿನ ಮಹತ್ವವನ್ನು ತೋರಿಸಿದ್ದು. ೪ ರೇವಣಸಿದ್ಧೇಶ್ವರ ಪುರಾಣ ಸಮಾಪ್ತಿ ಸಮಾರಂಭದ ಕಾಲಕ್ಕೆ ಸಾಕ್ಷಾತ್ ಸೋಗೋರೀಶ್ವರನೇ ಜಂಗಮವೇಷವನ್ನು ತಾಳಿ ಸಾಹಿತ್ಯಗಳನ್ನೆಲ್ಲ ಒದಗಿಸಿಕೊಡುವಿಕೆ.

## ೨೦ ನೇ ಸಂಧಿ. ಪುಟ ೨೧೧-೨೨೬

೧ ಬಸವಾರ್ಯರ ಸ್ವಪ್ನದಲ್ಲಿ ಪರಶಿವನು ಬಂದು ತಮ್ಮ ಅವತಾರ ಸಮಾಪ್ತಿಯನ್ನು ಸೂಚಿಸುವದು. ೨ ಈಶಾಜ್ಞೆಯಂತೆ ಲಿಂಗೈಕ್ಯರಾಗುವ ಸುದ್ದಿಯನ್ನು ಭಕ್ತಮಾಹೇಶ್ವರರುಗಳಿಗೆ ತಿಳುಹಿಸಿ ಅವರಿಗೆ ಅನೇಕ ಹಿತೋಪದೇಶಗಳನ್ನು ಮಾಡುವದು. ಮತ್ತು ನಾಗರೀಕತೆಯ ನಿಜಾರ್ಥ, ಸಮತಾವಾದದ ತತ್ವಗಳನ್ನು ಬೋಧಿಸುವದು. ೩ ಭಕ್ತಮಾಹೇಶ್ವರರ ಸಮ್ಮತಿಯನ್ನು ಪಡೆದು ಲಿಂಗದೊಳ್ಬೆರೆಯುವದು.

## ೨೧ ನೇ ಸಂಧಿ. ಪುಟ ೨೨೭-೨೩೩

೧ ಲಿಂಗಶರೀರವನ್ನು ಸಮಾಧಿಯಲ್ಲಿ ನಿಕ್ಷೇಪಿಸುವದು. ೨ ಸಮಾಧಿಯ ಮಹತ್ವ. ೩ ಫಲಶ್ರುತಿ, ಗ್ರಂಥ ಪರಿಸಮಾಪ್ತಿ, ಮಂಗಲಾಚರಣವು.

॥ ಶ್ರೀ ಪರಬ್ರಹ್ಮಣೇ ನಮಃ ॥

# ಮಹಾಮಹಿಮ ಷಹಪೂರ್ ಅನವಾರ ಮಠದ

## ಶ್ರೀ ಚರಬಸವೇಶ್ವರ





# ಪುರಾಣವು.

— ಪೀಠಿಕಾ ಸಂಧಿ. —

॥ ಭಾಮಿನೀ ಷಟ್ಪದಿ. ॥

ಶ್ರೀಮದನುಪಮರೂಪ ಹರಿಮು । ಖ್ಯಾಮರಾರ್ಚಿತ ಚರಣ ವಿಲಸ. । ದ್ರಾಮಣೀಯಕ ವೃಷಭವಾಹನ ನಿತ್ಯನಿರ್ಲೇಪ ॥ ಕಾಮ ಸಂಹರ ಕಾರಣಾತ್ಮಕ । ಭೀಮಪಾವನ ನಿಗಮದುರ್ಲಭ । ವ್ಯೋಮ ಕುಂತಲ ವಾಮದೇವನ ಪದಕೆ ನಮಿಸುವೆನು ॥ ೧ ॥

ಶ್ರೀತುಹಿನಗಿರಿತನಯೆಶಾಂಕರಿ । ಭೂತನಾಥನರಾಣಿಭೈರವೆ । ಪೂತೆಗಣಪತಿಮಾತೆ ಗಾನಪ್ರೀತೆವಿಖ್ಯಾತೆ ॥ ಶೀತಕಂಧರೆ ಚತುರೆ ನಿಗಮಾ । ತೀತೆಮಾತೃಕೆ ಮಾನ್ಯೆಸುಜನ । ಪ್ರೀತೆಶಾಂಭವಿ ಪಾಲಿ ಸೊಲವಿಂದೆನ್ನನಿರುತದೊಳು ॥ ೨ ॥

ಕರಿಮುಖನೆ ಗಣಪತಿಯೆ ಲಂಬೋ । ದರನೆ ಶುಭಕರಮೂರ್ತಿ ವಿಘ್ನೇ । ಶ್ವರನೆಕರುಣಾನಿಧಿಯೆ ವೇದಾಗಮವಿಶಾರದನೆ ॥ ಗಿರಿಜೆ ಪುತ್ರನೆ ಭುಜಗಬದ್ಧೋ । ದರನೆ ಮೂಷಕವಾಹನನೆ ಮಿಗೆ । ಹರುಷ ದಿಂದೀಯುವುದು ನಿರ್ವಿಘ್ನತೆಯನೀಕೃತಿಗೆ ॥ ೩ ॥

ಮೃಡನಬಾಳಾಂಬಕದೆಜನ್ಮಿಸಿ । ಖಡುಗಕೋದಂಡಗಳ ಪಿಡಿ
ಯುತ । ಘುಡಿಘುಡಿಸುತಲಿ ನಡೆದುದಕ್ಷನ ಹೋಮಶಾಲೆಯನು ॥
ಬಿಡದೆಪೊಗುತುರುನಿಂದಕರ ಸದೆ । ಬಡಿದು ದಕ್ಷನಕಡಿದು ಜಯವ
ನು । ಪಡೆದ ಶ್ರೀಗುರು ವೀರಭದ್ರೇಶ್ವರನೆ ಪೊರೆಯೆನ್ನ ॥ ೪ ॥

ಜನಿಸಿದೇಳನೆದಿನಗಳಲ್ಲಿಯೆ । ಮನಸಿಜಾರಿಯ ಗುರುತರಾಜ್ಞೆ
ಯ । ನನುನಯದೆ ಕೈಕೊಂಡು ಸುರಸೈನ್ಯಾಧಿಪತಿಯಾಗಿ ॥ ಘನ
ಪರಾಕ್ರಮಿ ತಾರಕನಗೆಲಿ । ದನುಪಮಿತಶೌರ್ಯದೊಳು ಸುರರನು ।
ಸನುಮತದಿಸಲಹಿದಷಡಾನನ ಸಲಹುನಿರುತದೊಳು ॥ ೫ ॥

ಆದಿಯೊಳುಪರಮೇಶ್ವರನಘನ । ಮೋದಕರವಾಹನವದಾಗಿ
ಶಿ । ಲಾದಸಂಭವನಾಗಿ ಶಿವಧರ್ಮವನುಬೋಧಿಸಿದ ॥ ಸಾಧುವಶಿ
ರೋರನ್ನ ವರಕರು । ಣಾದಿಗುಣಗಣಭರಿತ ವರಸನ । ಕಾದಿವಂದಿತ
ನಂದಿಕೇಶನೆ ಸಲಹುಸಂತಸದಿ ॥ ೬ ॥

ಗಿರಿಸುತೆಯ ವರಸೊಮ್ಮನತಿಗಳೆ। ದುರುತರದಿರಾಜಿಸುವ ತನ್ನ
ಯ । ಶರಿರದೊಳಗಿರ್ದಸ್ಥಿಮಾತ್ರದೆ ನಿಂದುಶಂಕರನ ॥ ಸ್ಮರಿಸಿಮೆ
ಚ್ಚಿಸಿಪರಮ ಶಿವನಿಂ । ದೀಡಮೂರನೆ ಚರಣವನುಬಹು । ತ್ವರಿತ
ದಿಂದಲಿ ಪಡೆದ ಶ್ರೀಭೃಂಗೀಶನಿಗೆ ಜಯತು ॥ ೭ ॥

ಧರೆಯೊಳೇಳ್ನೂರೊರುಷ ಚರಿಸುತೆ । ಸಿರಿದುರಾಜಿಪಗಸ್ತ್ಯನಿಗೆ
ಪರ । ತರದಗುರುವಾಗುತ್ತೆ ಶಿವಧರ್ಮವನುಬೋಧಿಸುತೆ ॥ ನೆರೆಮೆ
ರೆದ ಶ್ರೀಶಂಕರಾಚಾ । ರ್ಯರಿಗೆಲಿಂಗವನಿತ್ತುಮುದದಿಂ । ವರವಿ
ಭೀಷಣನಿಷ್ಟಸಲಿಸಿದ ರೇಣುಕನೆಪಾಹಿ ॥ ೮ ॥

ಪೊಡವಿಯೊಳು ಬವಬಂಧನವಘನ। ತೊಡರ ಕಳೆಯಲು ಪ
ರಮಮೃಡನಿಂ । ದೊಡನೆಪ್ರೇರಿತರಾಗಿಶೂಲಿಯ ವರಮುಖಂಗಳೊ
ಳು ॥ ಪಡಗರದೊಳುದ್ಭವಿಸಿಜಗದೊಳು । ಕಡುಮೆರೆವ ಶ್ರೀವೀರಶೈ
ವವ । ಬಿಡದೆಬೋಧಿಸಿಮೆರೆವಪಂಚಾಚಾರ್ಯರಿಗೆಜಯತು ॥ ೯ ॥

ಪೊಳೆವಸುರಚಾಪದೊಲುದರ್ಪಣ । ದೊಳಗೆಸೆವಪ್ರತಿಬಿಂಬ
ದೊಲು ಭುವಿ । ಯೊಳಗೆಮೆರೆಯುತಲನುಮಿಷಯ್ಯಗೆ ನಿಜಪದವ
ತೋರಿ ॥ ಸುಲಲಿತದಿಮಾಯೆಯನುಗೆಲಿದತಿ । ನಲವಿನಿಂಮಹಿಮೆಗಳ
ತೋರುತ । ಬೆಳಗಿದಶ್ರೀಪ್ರಭುವೆಮತ್ಕೃತಿಗೀಗೆಮಂಗಲವ ॥೧೦॥

ಮೇದಿನಿಗೆ ಭಕ್ತಿಯನುಬೋಧಿಸ । ಲಾದರದಿ ಮಾದರಸನಿಂ
ಗತಿ । ಮೋದಕರಸುತನಾಗಿಸಲಹುತ ವೀರಶೈವವನು ॥ ಭೇದಿಸುತ
ಪರಸಮಯಗಳಮಿಗೆ । ಸಾಧಿಸುತಲಗಣಿತ ಪವಾಡಗ । ಳಾದಯಾ
ನಿಧಿ ಶಂಭುವೆನಿಸಿದ ಬಸವಪಾಲಿಪುದು ॥ ೧೧ ॥

ಪರಮಕಕ್ಕಯ್ಯನ ಪ್ರಸಾದವ । ಹರುಷದಿಂ ಬಸವಣ್ಣತಾರ
ಲ್ । ಭರದೊಳಕ್ಕನುಜಿಡದೆಸೇವಿಸೆ ಗರ್ಭಮಂಕುರಿಸಿ ॥ ದುರುಳರು
ರುದೂಷಣೆಗೆ ಗರ್ಭದಿ । ಸಿರಿದುರೋಷದಿ ನುಡಿದುನಿಜವನು । ಧರೆಗೆ
ತೋರಿದ ಚೆನ್ನಬಸವೇಶ್ವರನೆ ಕೃಪೆದೋರು ॥ ೧೨ ॥

ಮೆರೆವಪುಷ್ಪಕರಂಡಪುರದೊಳು । ಹರುಷದಿಂ ಜನ್ಮಿಸುತವರ
ಗುರು । ಚರರಪೂಜೆಯಗೈದು ಪರಿಪರಿ ಮಹಿಮೆಗಳತೋರಿ ॥ ಪರ
ಮ ಕಲ್ಪು ಗಿರಿಯೊಳುಬಂದುರು । ತರದದಾಸೋಹವನು ಗೈಯುತ ।
ನೆರೆಮೆರೆದ ಶ್ರೀಶರಣಬಸವೇಶ್ವರಗೆ ವಂದಿಪೆನು ॥ ೧೩ ॥

ಶ್ರೀಮದನುಪಮಸುಗುಣಭರಿತನೆ । ಶ್ರೀಮಹಾಪರಶಿವನರೂ
ಪನೆ । ಕಾಮರಿಪುಷಡ್ವರ್ಗರಹಿತನೆಜ್ಞಾನಸಾಗರನೆ ॥ ಭೂಮಿಯೊ
ಳುಸದ್ಭಕ್ತನಿಕರಕೆ । ಕಾಮಿತಾರ್ಥವನಿತ್ತುಪೊರೆವನೆ । ಪ್ರೇಮಮ
ಯಗುರುವರನೆ ನಿಮ್ಮಡಿದಾವರಿಗೆ ಶರಣು ॥ ೧೪ ॥

ಶ್ರೀಗುರುಪರಾತ್ಪರನಿರಂಗಂ । ಯೋಗಿಹೃತ್ಸರಸಿಜಪತಂಗಂ ।
ನಾಗಮುಖಮುಖನಂದನರಿಗಾನಂದಿತೋತ್ಸಂಗಂ ॥ ವಾಗತೀತವಿಚಿ
ತ್ರಪರಮೋ । ದ್ಯೋಗಯುತಮೆನ್ನಿಷ್ಟಲಿಂಗವ । ದೀಗೆಚರಬಸವಾ
ರ್ಯರಕೃತಿಯೊರೆವ ಸುಮತಿಯನು ॥ ೧೫ ॥

ನಿರುಪಮಿತಕಲಿಕಾಮದೇವನ । ಪರಮಶಂಕರದಾಸಿಮಯ್ಯ
ನ । ನಿರಘಶ್ರೀಗುರು ಸಿದ್ಧರಾಮೇಶ್ವರನ ನಿಜಗುಣನ ॥ ದುರು
ಹರಮಡಿವಾಳದೇವನ । ಹರಶರಣಕಕ್ಕಯ್ಯಮೊದಲಾ । ಗಿರುವ
ಸರ್ವ ಪುರಾತರನುನಾಂ ಪೊಗಳ್ವೆ ಮನಮೊಲಿದು ॥ ೧೬ ॥

ಕುವಲಯಾಂಬಕಿನೀಲಲೋಚನೆ । ಶಿವಶರಣಿಮಹದೇವಿ ಗ
ಗ್ಗನೆ । ಪ್ರವಿಮಲಾತ್ಮಕಿಯಕ್ಕನಾಗಾಂಬಿಕೆಯು ಸುಗ್ಗವ್ವೆ ॥ ಶಿವ
ಭಕುತೆ ಚೋಳವ್ವೆಚಂಗಳೆ । ಯುವತಿಮುಕ್ತಾಯಕ್ಕಮೊದಲಾ ।
ದವರ ಚರಣಸರೋಜಗಳಿಗಾನೊಂದಿಪೆನು ಮುದದಿ ॥ ೧೭ ॥

ಮೆರೆವಶಿವಕವಿಕಾಳಿದಾಸನ । ಪರಮಮಲುಹಣ ಮಲಯ
ರಾಜನ । ಹರಿಹರನಗುರುಪಂಡಿತೇಶನ ಭೀಮನುದ್ಭಟನ ॥ ಸರಸ
ಕವಿವರರಾಘವಾಂಕನ । ವರಷಡಕ್ಷರದೇವಮೊದಲಾ । ದುರುಕವಿಗ
ಳನುಸ್ಮರಿಸಿ ಕೃತಿಯನು ರಚಿಸತೊಡಗಿದೆನು ॥ ೧೮ ॥

ಧರಣಿಯೊಳು ಚರರೂಪದಿಂದವ । ತರಿಸಿಗಾರ್ಹಸ್ಥ್ಯವನು ಕೈ
ಕೊಂಡುರುತರದ ದಾಸೋಹವೆಸಗುತ್ತಸಮಭಕ್ತಿಯೊಳು ॥ ಹರನೊ
ಲುರು ಮಹಿಮೆಗಳತೋರುತ । ಸಿರಿದುಜಸವನುಪಡೆದ ಷಾಪುರ ।
ಪರಮಚರಬಸವಾರ್ಯನ ಸುಚರಣದೊಳು ಬಾಳುವೆನು ॥ ೧೯ ॥

ಚಾರುಚರಬಸವಾರ್ಯಭಕ್ತಿಯ । ಬೀರುಸನ್ಮುಕ್ತಿಯನುಮುದ
ದಿಂ । ತೋರು ಸರಸದಿ ಕೃತಿಯರಚಿಪುದನೆನಗೆನೀಸಾರೂ ॥ ಸಾರತ
ರದಿಂದಾದಿಮಾರ್ಗವ । ತೋರುಸನ್ಮಾರ್ಗವನು ತೋಷದಿ । ಬೀರು
ಯನ್ನೊಳುಸಾದರದಿ ಸುಜ್ಞಾನವನ್ನೂರು ॥ ೨೦ ॥

ಶ್ರೀಗುರುವೆಚರಬಸವ ಯೋಗಿಯೆ । ರಾಗದಿಂಸದ್ಭಕ್ತನಿಕರ ।
ಕ್ಕಾಗಮದ ಸಚ್ಚರಿತೆಯನುಪ್ರತಿದಿನವು ಬೋಧಿಸುತೆ ॥ ಬೇಗದಿಂ
ಘನತರದಮುಕ್ತಿಯ । ಭೋಗವೀಯುತೆ ಮೆರೆದೆಜಗದೊಳು । ಯೀ
ಗ ನಿನ್ನೀಕೃತಿಗೆ ಮಂಗಳವಿತ್ತು ಕರುಣಿಪುದು ॥ ೨೧ ॥

ಧೀರಬಸವಸ್ವಾಮಿ ನಿಮ್ಮಯ । ಚಾರುಚರಿತಾಮೃತಲಹರಿ
ಮಾ। ರಾರಿಭಕ್ತರಧೀಹೃದದೊಳುಂ ಪೂರಯಿಸಿನಿಂದು ॥ ಭೂರಿಸ್ಥೈ
ರ್ಯೋದಾರ ಶಾಂತಿ ವಿ। ಚಾರಭಕ್ತಿಯನಿತ್ತುಪೊರೆವುದ । ಪಾರಭಕ್ತ
ರಬಂಧು ಕರುಣಾಸಿಂಧು ಗುಣನಿಧಿಯೇ ॥ ೨೨ ॥

ಭಕ್ತಿಯಲಿ ಶ್ರೀಮೃಡನಶರಣರ । ವ್ಯಕ್ತದಿಂದಲಿಭಜಿಸಿ ಬಲ್ಲ
ನಿ । ತುಕ್ತದೊಳು ಲೋಕೇಶಿಯಾಗಿಹ ವಾಣಿಗೀರ್ವಾಣೀ ॥ ಶಕ್ತನಲ್ಲ
ದಗೀಗಕವಿತಾ । ಸಕ್ತಮನವಂಕುರಿಸತೊಡಗಿದು । ದ್ಯುಕ್ತಿಯಲಿ
ಮಂಜೀರವೆನಿಸುವುದೆಲ್ಲಲೋಕರಿಗೆ ॥ ೨೩ ॥

ತಿಳಿಯದನುಪಮವಚನಕಲ್ಪನೆ । ಗಳನುತತ್ತ್ವಸ್ಥಾನದಲಿನೆಲೆ ।
ಗೊಳಿಸಿದ್ರಾಕ್ಷಾಪಾಕದಂದದಿ ಕೇಳುವರ ಕರ್ಣ ॥ ಗಳಿಗೆಸುಸ್ವರವ
ನು ಗರೆವಂ । ತಿಳುಹನೆನ್ನೊಳು ಕಲ್ಪನೆಯ ಗೈ । ದೊಳಗೆನಿಲುನಾರ
ಚಿಪೆ ಕಾವ್ಯವ ಸಾರಭರಿತದಲಿ ॥ ೨೪ ॥

ಪೃಥ್ವಿಯೊಳುಜನಿಸುತ್ತೆ ಸಾವುತೆ । ಸ್ವಾರ್ಥಪರರಾಗಿರ್ಪನರ
ರಂ । ವ್ಯರ್ಥಪೊಗಳುತೆಪೊಟ್ಟೆಪೊರೆಯುವ ಮನುಜನೇಂ ಕವಿಯೇ ॥
ಕೃತ್ತಿವಾಸನಶರಣರಸುಚಾ । ರಿತ್ರವನು ಜಗದೊಳಗೆ ನಿರುತದೊ ।
ಳರ್ಥಿಯಿಂ ಪೊಗಳುವ ಕವೀಶನ ಜನ್ಮಕೆಣೆಯುಂಟೇ ॥ ೨೫ ॥

ಧರಣಿಯೊಳಗವತರಿಸಿವ ಹಿಮುದಿ । ಪರಮುಜಸವಾಂತಾಮ
ಹಾಂತರ । ವರವಿಸುನಿಗೊಳ್ವಾತವನು ಸಮೆದಂತೆಪೊಸಬಗೆಯಿಂ ॥
ಮಿರುಪಕಬ್ಬಮನೆಗಳ್ದನವರಸ । ಪರಿಯುತಿರೆ ಚಿರಜೀವಿಪಟ್ಟವ ।
ನಿರದೆಕಟ್ಟುವಸತ್ಕವಿಗೆಸರಿ ಬ್ರಹ್ಮಬಂದಪನೆ ॥ ೨೬ ॥

ಮೃಡನಡಿಗೆತಲೆವಾಗಿಯನ್ನಯ । ವೊಡಲೊಳಭವನುನುಡಿಸಿ
ದಂದದಿ । ಮೃಡಶರಣಚರಿತೆಯನು ಪೇಳುವೆ ತೊದಲು ನುಡಿಯಿಂ
ದ ॥ ಪೊಡವಿಯೊಳಗಿದನೆಲ್ಲ ಸುಜನರು । ಕಡುವಿನೋದದೊಳಾಲಿಸು
ತ ನಿ । ಮ್ಮಡಿಯುನನು ಸಂತಸದಿಪೊರೆವುದು ಸತ್ಯವಾಕ್ಯವಿದು ॥ ೨೭ ॥

ವರನಿಗಮಶಾಸ್ತ್ರಾದಿಭಂದವ । ನರಿತಹಮ್ಮೀನಿಲ್ಲವೆನಗಂ । ಪ
ರಿಣತನುಯೆನುತೆಲ್ಲರೊಳು ನುತಿಗೊಳ್ಳ ಬಿರುದಿಲ್ಲ ॥ ತರಳನತಿಬಡ
ಸಾಧಮನುಮಮ । ಕರದೊಳೆನ್ನಪರಾಧವೇನಿರ । ಲರಸವೆಲ್ಲಕ್ಷಮಿ
ಸುವುದು ಸರ್ವಜ್ಞಸಾಧುಗಳು ॥ ೨೮ ॥

ಒರೆಯುರಾಗಿಹಸರ್ವಮಹನೀ । ಯರಿಗೆವಂದಿಸಿ ಪೇಳ್ವಶಿವಶ
ರ । ಣರಪುರಾಣದಮರ್ಮವರಿಯದೆ ಸಿರಿದುಮೂರ್ಖತೆಯಿಂ ॥ ಪರ
ಮಶುಂಠರು ನಿರ್ದಯಾನ್ವಿತ । ರುರುಕುಟಿಲರುನ್ಮತ್ತರಧಿಕರು । ನಿ
ರುತದುರ್ವ್ಯಾಪಾರದೊಳಿಕಾಲವನು ಕಳೆವವರು ॥ ೨೯ ॥

ಧರಿಸಿನೊಸಲೊಳು ಭಸಿತವನು ನೇ । ವರಿಸಿಕಂಠದೊಳಕ್ಷಮಾ
ಲೆಯ । ನೆರಿಗೆಲುಂಗಿಯನುಟ್ಟುಕಾವಿಯ ವಸನವನುಕೊಟ್ಟು ॥ ತಿರು
ಗಿಮನೆಮನೆ ಧನಿಕರೊಳು ಪ । ಲ್ಗಿರುಗಿಯಾಚನೆಗೈದು ಡಂಬಕ । ವೆ
ರಸಿಮೆರೆದೆಮಗೆಣೆಯು ಯಾರಿಹರೆಂಬ ಬೂಟಕರು ॥ ೩೦ ॥

ಸುಲಭಮಾಗಿರುವಲ್ಪವಿದ್ಯವ । ಕಲಿತುಪಂಡಿತರೆನುತ ಲೋಕ
ದಿ । ತಲೆಯನಿಲಿಸದೆ ಮದ್ಯಪಾನಿಯತೆರದಿ ಕುಣಿಯುತ್ತಾ ॥ ಮಲ
ತಿರುವಕಡುಮೂರ್ಖಶಾತ್ಮರು । ಮಲಹರನಶರಣರಪುರಾಣದ । ಹೊ
ಲಬನರಿಯದೆ ಜರಿದೊಡಿದಕೇನೀಗ ಕುಂದಹುದು ॥ ೩೧ ॥

ನುಡಿದುನಿತ್ಯಪುರಾತನರನುಡಿ । ನಡೆದುಕೇಡುಕಿರಾತಕರನಡೆ ।
ನಡುವೆಬಹಳಾಚಾರಶೀಲನ ಕಲಿತುಬಲುಬಗೆಯ ॥ ಬೆಡಗತೋರಿಸಿ
ಕೊಂಡುಪಾಯದಿ । ಪೊಡಲಸಲಹುತಲಿಹದುರಾತ್ಮರು । ಪೊಡವಿ
ಯೊಳಗಪಹಾಸ್ಯಗೈದೊಡೆ ಕೊರತೆಯೇನಹುದು ॥ ೩೨ ॥

ತುಡುಗತಸ್ಕರ ಜಡರುಹಾದರ । ಬಡುಕರುಡುಪನನಿಂದಿಸಲು
ಕಳೆ । ಕೆಡುತಿಹುದೆಯದರಂತೆ ಕುಹಕಾಧಮರು ತೆಗಳಿದೊಡೆ ॥ ಕಡ
ಮೆಯಪ್ಪುದೆ ಸಚ್ಚರಿತ್ರೆಗೆ । ಪೊಡವಿಯೊಳು ಶ್ರೀಮೃಡನಭಕ್ತರು ।
ಕಡುಹರುಷದಿಂ ಶಿರದಿಪೊತ್ತುತಿನಲಿವರನವರತಂ ॥ ೩೩ ॥

ದುಷ್ಟಕುಕವಿಗಳನಿಶಮುರುನಿ। ರ್ದುಷ್ಟಕವಿತಾವೃತದೊಳುಂ ವಿಷ। ಪುಷ್ಟಿಯಾಗಿಹುದೆಂದುಬಕಭಾವದೊಳಳಿವುತಿರ್ಪಾ ॥ ಭ್ರಷ್ಟಬುದ್ಧರಗೊಡವೆಯೇಕು। ತ್ಕೃಷ್ಟಸತ್ಕವಿ ಹಂಸಗಳು ಸು। ಶ್ರೇಷ್ಠವೆನೆ ನೀರ್ಬಿಟಸದಿಹ ಪಾಲೆನುತಕೊಂಬುವವು ॥ ೩೪ ॥

ಸ್ಫುರಿಸುತಿಹಸೌಗಂಧವಿಲಸಿತ। ದರಲಬಯಸದೆ ಪೂತಿಗಂಧಜ। ಝುರಝುರಿಪವ್ರಣವದನುಕಾಂಕ್ಷಿಪ ಮಕ್ಷಿಕದತೆರದೆ ॥ ದೊರೆವಜೆಡಕಾವ್ಯಪ್ರಬಂಧಜೊ। ಳುರುತರದ ಸಾರವನು ಬಗೆಯದೆ। ಬರಿದೆ ಸೂನ್ಯವ ಸಾಧಿಸುವದುಷ್ಕವಿಗಳಂತಿರಲಿ ॥ ೩೫ ॥

ತರಣಜನಕತಿಮೆಚ್ಚು ಪಾಪಿ। ಷ್ಠರಿಗಿದತಿಹುಚ್ಚು ಪ್ರಪಂಚದಿ। ಮೆರೆವಪಾಷಂಡಿಗಳಿಗೆದೆಗಿಚ್ಚವನಿಯೊಳಗೆಚ್ಚು ॥ ಪರಮಭಕ್ತರ ವಡಲುದೂಷಿಪ। ನರರಿಗಡರಿದಶಿಡಿಲು ಶಿವನುತಿ। ಶರಧಿಯಮೃತದಕಡಲು ಯಿದರೊಳು ನಂಬುಗೆಯನಿಟ್ಟು ॥ ೩೬ ॥

ಸಾರಸುಹೃದಯ ಸುಗುಣಿಗಳುಸುವಿ। ಚಾರಿಗಳುತಾತ್ಸಾರವಮಾಡದೆ। ಪೂರತೋಷದಿಪೂಜೆಗೈದಿದನೋದಿಕೇಳಿದೊಡೆ ॥ ಘೋರದುರಿತಾಮಯವದೆಲ್ಲವು। ದೂರವಾಗಿಕೃತಾರ್ಥರೆನ್ನಿಸಿ। ಪಾರಗಾಣಲ್ಕೇನುಸಂಶಯವಿಲ್ಲಭೂತಲದಿ ॥ ೩೭ ॥

ತರಣಿಚಂದ್ರಮರುಳ್ಳನಕ ಸು। ಸ್ಥಿರವುಯನಿಸೀಕೃತಿಯುಭಕ್ತರ। ನೆರವಿಯೊಳುವಿಖ್ಯಾತಿಗೊಂಡುತ್ಸವದೊಳಿರಲೆನುತ ॥ ಪರಸಿದ ಪ್ರಾಜ್ಞರನುಬಿಡದಲೆ। ವರಮನೋರಥವಿತ್ತುನಿತ್ಯವು। ನಿರಘನಿರುಪಮನಿತ್ಯಪುರಹರ ಪೊರೆವನತಿಹಿತದೋಳ್ ॥ ೩೮ ॥

ಧರೆಯೊಳೀಕೃತಿ ಬುಧರುಪಾಮರ। ರರಿವತೆರದೊಳು ಸುಲಭಮಾಗಿಹ। ಪಿರಿದುರೂಢಿಯವಾಕ್ಯದೊಳೆ ನಿಖಿಲರ್ಗೆಪ್ರಿಯಮಾಗಿ ॥ ಮೆರೆವಭಾಮಿನಿಷಟ್ಪದಿಯೊಳಾಂ। ಪುರಹರನದಯದಿಂದ ರಚಿಸಿದೆ। ಪರಮಸುಹೃದರರಿದು ಹರುಷದಿ ಮೆಚ್ಚುವಂದದಲಿ ॥ ೩೯ ॥

ಕೃತಿಪೆಸರುಬಸವಾರ್ಯಚರಿತಂ । ಕೃತಿಗೊಡೆಯನಾ ಬಸವ ಯೋಗಿಯು । ಕೃತಿಯಪೇಳ್ವವ ಚಂದ್ರಶೇಖರಶಾಸ್ತ್ರಿಕವಿವರನು ॥ ಕೃತಿಯನಾಲಿಸಿ ಪರಮಭಕ್ತರು । ಸತತಸಂತಸಬಡುವರೆನಲೀ । ಕೃತಿಯು ಮೆರೆಯದೆ ಭಾನುತಾರಾಪತಿಗಳಿರ್ಪನಕಂ ॥ ೪೦ ॥

ವಿತತವಾದೀಯತಿಯಕೃತಿಯೊಳು । ಒತದೊಳೊಂದಕ್ಕರವ ಕೇಳ । ಲ್ಕತುಳವೈಭವಪಡೆವ ಮೂಢನು ಧೀಮತನೆನಿಪ್ಪಂ ॥ ಸತತ ವರಧರ್ಮದೊಳು ನಡೆವನು । ಕ್ಷಿತಿಯೊಳತಿಬಲವಂತನೆನಿಪನು । ಶತವರುಷಬಾಳುವನು ರೋಗಾದಿಗಳುವಿಲ್ಲದಲೆ ॥ ೪೧ ॥

ಇದುಚತುರ್ವಿಧಫಲವರುತ್ಸುಜ । ವಿದುಸುನಿಷ್ಕಾಮೌಕ್ತಿಕೋ ದಧಿ । ಯಿದುವೆ ಸಕಲ ಸುಯೋಗಚಂದನಕಿದುಮಲಯಕುಧರ ॥ ಇದುಸಯುಜ್ಯಸುಮುಕ್ತಿಪನಿಖನಿ । ಸದಮಲ ಶ್ರೀ ಬಸವಯೋಗಿ ಯ । ಪದಚರಿತವೆನೆ ಜಿಹ್ವೆಪಾವನವಾಗಲುಸುರಿದೆನು ॥ ೪೨ ॥

ಧಾರಿಣಿಯಕರ್ನಾಟಕದೊಳತಿ । ಮೀರಿಬೆಳಗುವಜ್ಯೋತಿಪುರ ದೊಳು । ಭೂರಿಹರುಷದಿಹರನಕೃಪೆಯಿಂ ವಾಸಿಸುತಲಿರ್ದು ॥ ಚಾ ರುತರವುಂಗಾಪುರದವೋ । ಗೇರಿಮಠದಧಿಪತಿಯೆನಿಸಿ ಮಾ । ರಾರಿನಿಭ ಶ್ರೀರೇಣುಕರಗೋತ್ರದೊಳುಸಂಜನಿಸಿ ॥ ೪೩ ॥

ಪರಮಶಿಷ್ಯಸಮೂಹದಿಂದೀ । ಧರೆಯೊಳಗೆರಾಜಿಸುತ ವರಪು ರ । ಹರನಘನತರಕೃಪೆಯಪಡೆಯಲು ನಿರುತವಾಶಿಸುತ ॥ ಪರಧನ ವ ಮುಟ್ಟದಲೆ ಪರಸುಂ । ದರಿಯರನು ಕಾಮಿಸದಲನ್ಯರ । ಜರಿಯ ದಿತರರ ಓಂಸೆಗೈಯದೆ ವೃಷಭನ ಪೂಜಿಸುತ ॥ ೪೪ ॥

ಪರಮಕೀರ್ತಿಗೆಪಾತ್ರನಾಗುತೆ । ಮೆರೆದಡವಿ ಬಸವಾರ್ಯರಾ ತ್ಮಜ । ಸರಸಕವಿಜನಸುಪ್ರಿಯಂ ಸದುಹೃದಯಘನವಿನಯಂ ॥ ಹರಶರಣರುರುಚರಿತೆಗಳನತಿ । ಹರುಷದಿಂ ರಚಿಸುತ್ತನಾಡೊಳು । ದೊರೆವಡೆದ ಶ್ರೀಚಂದ್ರಶೇಖರಕವಿಯೊರೆದನಿದನು ॥ ೪೫ ॥

ಘನಕೃಪಾಗುರುವಿನೊಳುವಿದ್ಯೆಯ । ನನುವಿನಿಂ ಕಲಿಯುತಿರೆ ವಿದ್ಯಾ । ಜನನಿಕೃಪೆದೋರಿದಳು ಕವಿತಾಂಗನೆಯುಕಡೆಗಣ್ಣೊಳ್ ॥ ಬಿನದದಿಂ ನೋಡಿದಳುಪದಿನೆಂ । ಟನೆಯವರ್ಷದ ಪರೆಯದೊಳ ಗಾ । ನನುನಯದಿವಿರಚಿಸಿದೆ ಪಂಚಾಕ್ಷರಿಮಹಾತ್ಮ್ಯವನು ॥ ೪೬ ॥

ಮಾರಹರನುರುಕೃಪದಿಮತ್ತಂ । ಮೀರಿಬೆಳಗುವ ಶೂಲಿಪೀಠಿ ಯು । ಚಾರುಖಟ್ವಾಂಗೇಶಪೌರಾಣವ ಪರಮ ಭರತ ॥ ನೂರು ಶ್ರೀ ಗುರುನಂಜಕಾವ್ಯವ । ಚಾರುದೇವರದಾಸಿಮಯ್ಯನ । ಸಾರಪೌರಾಣ ವ ಮಹಾ ಖಟ್ವಾಂಗ ಚಂಪುವನು ॥ ೪೭ ॥

ಉರುಸರಸದೊಳುಲೋಪದೋಷಗ । ಳಿರದತೆರದಿಂ ರಚಿಸಿರಲು ನಾಂ । ಪುರಹರನಕೃಪೆಯಿಂದೆಲೋಕದಿ ಮಾನ್ಯತೆಯವಡೆದು ॥ ನೆ ರೆ ವಿರಾಜಿಸುತಿರಲವುಗಳೊಳ । ಗಿರುವ ವರ ರಸಭಾವಗಳನಾ । ದರಿಸಿ ನಲವಿಂದವುಗಳುರುತರ ರಚನೆಗತಿಮೆಚ್ಚಿ ॥ ೪೮ ॥

ಪರಹಿತಮೆಜೀವನವೆನಿಸುತುಂ । ನಿರುಪಮದ ಶಿವಭಕ್ತಿಯಿಂ ದಂ । ಅರರೆಬಾಳ್ವಾಚರವರನ ಸಚ್ಚರಿತಮಾದುದರಿಂ ॥ ಧರೆಯ ಸ ಜ್ಜನ ಜನರುಮೆಚ್ಚಲ್ । ಸ್ಫುರಿಸುತಿರ್ಪಮಹಾಕೃತಿಯನಿದ । ನೊರೆ ಯಿಸಲುಬೇಕೆನುತೆ ಮನದೊಳುನಿರ್ಧರಿಸಿಕೊಂಡಾ ॥ ೪೯ ॥

ವಸುಧಿಯೊಳುನೈಜಾಮರಾಜ್ಯದೊ । ಳಿಸೆವನಾಯ್ಕಲ್ಲಿನೊಳು ವಾಸಿಸಿ । ವಿಸುಪಗೋಡ್ವಾಳದಮಠಾಧಿಪನೆನಿಸಿವಿದ್ಯೆಯೊಳು ॥ ಜಸ ವಡೆದ ಗುರುಸಿದ್ಧಶಾಸ್ತ್ರಿಗ । ಳಸಮ ಮತದಭಿಮಾನಿಯಾಗುತ । ಲು ಸುರಿದರು ಬಸವಾರ್ಯರ ಪುರಾಣವನು ರಚಿಸೆನುತೆ ॥ ೫೦ ॥

ಇವರಪರಮಾಜ್ಞೆಯನುಮನ್ನಿಸಿ । ಶಿವನಕಾರ್ಯವಿದೆಂದು ತಿಳಿಯುತ । ಭವನಸಮಬಸವಾರ್ಯರಸಮಪುರಾಣವನುಮುದದಿ ॥ ಶಿವನಭಕ್ತರುಕೇಳಿಸಂತತ । ತವೆಮುದವಪಡುವಂತೆನಾಂ ಮಿಗೆ । ಜ ವದಿ ಸರಸವದೆನಿಸಿಯುಸುರಿದೆ ಪಶುಪತಿಯಕೃಪೆಯಿಂ ॥ ೫೧ ॥

ಲಿಂಗಚರಗುರುವಿಂಗೆಸುಮನಧ । ನಂಗಳಂಗಮನಿತ್ತು ಶರಣ
ರ । ಸಂಗಮೇ ಪರತರಕೃಷಿಯು ವಾಣಿಜ್ಯವೆಂದರಿದು ॥ ಜಂಗಮಾಂ
ಘ್ರಿಜಲಪ್ರಸಾದೋ । ತ್ತುಂಗದಿಂದಂ ಪಸಿವುತೃಷೆಯಂ । ಪಿಂಗಿಸಿ
ದ ಚರಚರಿತೆಯನು ಚಿತ್ತೈಸಿ ಭಕ್ತಜನ ॥ ೫೨ ॥

ವಿದಿತಬಸವಾರ್ಯಸ್ಮರಸುಕಾವ್ಯವು । ಬುಧರಕರದೊಳಗಿರ್ದವರ
ಘನ । ಹೃದಯಕತಿಸಮ್ಮುದವಪಡಿಸಲು ಪ್ರಾಸುವಡಿಗಣವೂ ॥ ಸದ
ಮಳದ ವ್ಯಾಕರಣಛಂದದ । ವಿಧಿಯನನುಸರಿಸುತ್ತಮುದದಿಂ । ಮೋ
ದಲ ಸತ್ಕವಿವರರಪಥವನು ಪಿಡಿದು ವಿರಚಿಸಿದೇಂ ॥ ೫೩ ॥

ಕೋವಿದರಸಭೆಯೊಳಗೆ ಯಿದರ ಪ್ರ । ಭಾವತೀವಿರಬೇಕೆನುತ
ಘನ । ಭಾವಜಾರಿಪದಾಬ್ಜಭೃಂಗರು ಸದ್ಗುಣಾನ್ವಿತರು ॥ ಆವಕಾಲದಿ
ಗುರುಚರರ ಚರ । ಣಾವಲೋಕನದೊಳೆವಿಲೀನರು । ಪಾವನರುಮೆಂ
ದೆನಿಸಿ ಜಸವಾಂತೆಸೆವ ಶಾಪುರದಿ ॥ ೫೪ ॥

ಸತತಸಂತಸದಿಂದೆವಾಸಿಸಿ । ವಿತತ ಬಿಲ್ಲಂಕೊಂಡಿಮಠದಧಿ ।
ಪತಿಯೆನಿಸಿ ಸಂಗೀತರತ್ನಂ ಎನಿಪಬಿರುದಾಂತ ॥ ಪ್ರಥಿತಪಂಚಾಕ್ಷರಿ
ಗವಾಯಿಗ । ಳತುಳಶಿವಕೀರ್ತನವನೆಸಗುತ । ಕ್ಷಿತಿಯೊಳಗೆ ಭಕ್ತರ
ನು ಮುದಗಡಲೊಳಗೆ ಮುಳುಗಿಸುತೆ ॥ ೫೫ ॥

ಶಿವಕಥಾಭೂಷಣನು ಮೆನಿಸಿ । ರ್ದವನಿಯೊಳುರಾಜಿಪ ಬಿಜಾ
ಪ್ಪೂರ್ । ಭವನಚರಣಾರ್ಚನರತಂ ಬಂದಯ್ಯಮಾಷ್ಟರುಗಳ್ ॥ ಜ
ವದಿ ಧನಸಂಗ್ರಹಿಸಿ ಶ್ರಮದಿಂ । ತವೆಮಿರುಪ ಮುದ್ರಣವ ಮಾಡಿ
ಸಿ । ಭುವನದೊಳಗೆ ಪ್ರಕಾಶಪಡಿಸಿದರಸಮ ಭಕ್ತಿಯಲಿ ॥ ೫೬ ॥

ಪರಮಪುರುಷಂವೀರಶೈವೋ । ದ್ಧರಣಜಗದಾರಾಧ್ಯಶಾಂತಾ ।
ಭರಣಶಿವತತ್ವಾನುಬಂಧಕನಾಮಹಾಮಹಿಮ ॥ ಗುರುಪದಾಂಬುಜ
ಭೃಂಗಭಕ್ತ್ಯಾಂ । ಕುರುನೆನಿಪ ಚರಬಸವದೇವನು । ನೆರೆಪ್ರಕಾಶವ
ಗೊಳಿಸಿದಿವರಂ ಸತತ ರಕ್ಷಿಸಲಿ ॥ ೫೭ ॥

ಬಲ್ಲವರುಭಾವಕರು ಭಕ್ತಿಯ । ನುಳ್ಳವರು ಸಾಧಕರು ರಸಿಕರು । ಸೊಲ್ಲಿನೊಳಗರಿವವರು ಸಕಲ ಕಲಾವಿಲಾಸಿಗಳು ॥ ಉಲ್ಲಸದಿ ಸಲೆ ಕೇಳಿಯಿದರೊಳು । ಸಲ್ಲಲಿತಸಂಗತಿಗಳಿರದರಿ । ದೆಲ್ಲರಿದರೊಲು ನಡೆಸು ಪರಮಕೃತಾರ್ಥರಾಗುವುದು ॥ ೫೮ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ। ಕ್ಷೀರಗಳಲಿ ಷಟ್ಪ್ರಕ್ಕರದ ಘನದಂತೆತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು ಮುದದಿಕೇಳ್ವುದು ಪೀಠಿಕಾಸಂಧಿ ॥ ೫೯ ॥

## ಲಲಿತಪದವೃತ್ತ

---

ಸ್ವರ್ಗಸುರಪೋಷಿಣಿ ವೃಷಧ್ವಜಮನೋಹರಿ ಜಯಂತನುತೆ ದುರ್ಜನವಿಭೀಷಿಣಿ ಶಿವಾಂಗಿ । ದುರ್ಗುಣವಿಕಾರಹರಿ ಪುಷ್ಪಶರರಕ್ಷಿಣಿ ವಿಷಜ್ವರವಿನಾಶಿನಿ ಕುತರ್ಕಮತಿದೂರೆ ॥ ದುರ್ಗತಿವಿಷಾದಪರಿಹಾರಿಣಿ ಪುರಾಣಪುರುಷೋತ್ತಮನುತಿಪ್ರಿಯೆ ಕುಮಂತ್ರ ಕುಲನಾಶೆ । ಭರ್ಗೆ ಶಿಖರೀಂದ್ರಗಣವಂದಿತೆ ನಿರಂತರ ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೬೦ ॥

ಪೀಠಿಕಾಸಂಧಿ ೧ ಕ್ಕಂ ಪದ ೬೦ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಶ್ರೀಗುರು ಶಂಭುಲಿಂಗಾಯನಮಃ ॥

# ಎರಡನೆಯ ಸಂಧಿ.



ಸೂಚನೆ ॥ ಶೀಲವಂತಯ್ಯನ ಸುಪತ್ನಿಯು ।
ಶೀಲವತಿ ಅವ್ವನ್ಮ್ಮ ಗರ್ಭದಿ ।
ಲೀಲೆಯಿಂದವತರಿಸಿದನು ಚರಬಸವನಾಮದಲಿ ॥

ಭಾಳಲೋಚನಭರ್ಗಭಸಿತೋ । ದ್ಧೂಳವಾಸುಕಿಭೂಷನಿಶ್ಚಲ। ಶೂಲಧರ ನಿರ್ಮಲನಿರಾಮಯ ನಿರಘನಿಶ್ಶೂನ್ಯ ॥ ಕಾಲಕಾಲಾತೀತ ಕಲಿಮಲ । ಜಾಲಮೂಲೋನ್ಮೂಲನಿಗಮ ವಿ । ಶಾಲನುತನಿನ್ನಯ ಪದಾಬ್ಜವ ಬಿಡದೆ ಭಜಿಸುವೆನು ॥ ೧ ॥

ಇಂದುಕಾವ್ಯಕೆ ಮೊದಲದೇನೆನೆ । ಚಂದದಿಂ ಮೇದಿನಿಗೆ ಶೋ ಭಿಸ । ಬಂಧುರದವಸನಂಬೊಲೊಪ್ಪುವಕಡಲು ಕಣ್ಗಳಿಗೆ ॥ ಸಂದೆ ಮಗೆ ನಭದಂತೆ ತೋರುತೆ । ಕುಂದದೆಳರುತ್ತಿರ್ಪತೆರೆಗಳ । ಸಂದಣಿ ಯ ಸೌರಂಭದಿಂದವೆಯಾರ್ಭಟಿಸುತೆಸೆಗುಂ ॥ ೨ ॥

ಸಿರಿಗೆಜನನಸ್ಥಾನಮೆನಿಸಿಯು । ಮರರೆಭಂಗಂ ಬಿಡದದಾದು ದು । ಪರತರಾವೃತರಸಪಡೆದೆ ವಿಷಮುದಿಸಿತಕಟಕಟಾ ॥ ಭರದೆರ ತ್ನಾಕರತೆಯಾಂತುಂ । ಪರರಧೀನತೆಮಾಣ್ಬುದಿಲ್ಲೆಂ । ದಿರದೆ ಧರೆ ಯಂಬಳಸಿ ಹೆರಳಂತಬ್ಧಿರಾಜಿಸುಗುಂ ॥ ೩ ॥

ಹಿಮಕರನನುರೆಪಡೆದು ಶಂಭುಗೆ । ಕಮಲಿನಿಯುಪಡೆದಚ್ಯು ತಂಗೆಯು । ಮಮೃತವನುಪಡೆದಖಿಳ ನಿರ್ಜರನಿವಹಕಳ್ತಿಯೊಳು ॥ ಮಮತೆಯಿಂ ಕರದಿತ್ತೊಡಂ ಸಲೆ । ವಿಮತುಹೃದಯಂ ದಹಿಪಬಡ ಬಂ । ಅಮಮನೊಂದಿದುದಿಲ್ಲಮೆಂಬಂತಬ್ಧಿ ಘೋಷಿಗುಂ ॥ ೪ ॥

ಇಂತುಪಲತೆರಸೊಗಸುಗಳನುರೆ । ಯೂಂತಶರನಿಧಿ ಎಂಬಕೊಳದೊಳು । ಸಂತತಂಭುವಿ ಎಂಬಪದ್ಮದಮಧ್ಯದೊಳಗಿರ್ಪಾ ॥ ಕಾಂತಿವೆತ್ತಾಗೆಸೆವ ಕರ್ಣಿಕೆ । ಯಂತೆಸಲೆ ರತ್ನಾಚಲಂ ತಾಂ । ಕಂತುಹರನಂತಖಿಳದೇವಪ್ರಾತದಿಂ ಮೆರೆಗುಂ ॥ ೫ ॥

ಆಸುಮೇರುವಿನಿಂದ ದಕ್ಷಿಣ । ವಾಸದೊಳು ಮಿರುಗುವುದು ಕನ್ನಡ । ದೇಶವ್ವೈಪತ್ತಾರುದೇಶದ ಮುಖಮುಕುರದಂತೆ ॥ ಈಶತತ್ವನಸರಿಯುಪವರ ನಿ । ವಾಸವಾಗಿರುತಿರ್ದು ಜಗದೊಳು । ಭಾಸುರದಬೆಳ್ಪಸದಿ ಸಲೆ ಸಿಂಗರದ ನೆಲೆಯುನಿಸಿ ॥ ೬ ॥

ಅಲ್ಲಿಗಲ್ಲಿಗೆಧರ್ಮಶಾಲೆಗ । ಳಲ್ಲಿಗಲ್ಲಿಗೆ ತಿಳಿಗೊಳಂಗಳು । ಮಲ್ಲಿಗಲ್ಲಿಗೆಚರಿಪಹಂಸಗಳುರುತಟಾಕಗಳು ॥ ಅಲ್ಲಿಗಲ್ಲಿಗೆರಾಜಬೀದಿಗ । ಳಲ್ಲಿಗಲ್ಲಿಗೆ ಗಿಳಿಯಬಳಗಗ । ಳಲ್ಲಿಗಲ್ಲಿಗೆ ಮಗಮಗಿಪ ಮಲ್ಲಿಗೆಯವಲ್ಲಿಗಳು ॥ ೭ ॥

ಕುರುವಚಂಪಕಗಂಧತೇಗವು । ಶಿರಸಬೂರುಗಹೊನ್ನೆಪಾದರಿ । ಪರಮಕರವೀರ್ತೆಂಗು ಘನಸಂಜೂರ ವರಬಕುಳ ॥ ವುರಗಸಂಪಿಗೆಪೂಗನೇರಿಲೆ । ಸುರಗಿಚೂತಗಳಿಂದ ಘನಸುಂ । ದರದನೆಲೆಯೂಗಿಹುದು ಕನ್ನಡನಾಡದೇನೆಂಬೇ ॥ ೮ ॥

ಸಂದಹರಿಪುಲಿಚಿರತೆ ವೃಂದಗ । ಳಿಂದಗಜಹಯ ಯರಳೆದುಪ್ಪಿಗ । ಳಿಂದಶೂಕರ ಕರಡಿಶುಕಪಿಕ ಪಾರಿವಾಳಗಳಿಂ ॥ ಅಂದವಹಕಾಡುಗಳ ಸಮುದಯ । ದಿಂದೆಘನತರ ರಮ್ಯಮಾದಿದ । ರಂದವನುಹರಬಲ್ಲನರನೇಂ ಬಣ್ಣಿಪನು ಜಗದಿ ॥ ೯ ॥

ಧರಣಿಯಂ ಮುಂಗಾಲ್ಗಳಿಂದಂ । ಕೆರೆಯುತಂ ಬಲ್ಕೋಡ್ಗಳಿಂಸಲೆ । ಗಿರಿತರುಗಳಂ ಹೊಡೆದುಚೂರ್ಣೀಕೃತಮನೆಸಗುತ್ತೆ ॥ ಅರರೆನೀಲಾಚಲಮೆ ನಡೆತ । ರ್ಪಿರವೊ ಪೇಳೆನಲತ್ಯಧಿಕಭೀ । ಕರಮನೆಸಗುವ ಕಾಡುಕೋಣಗಳಿರ್ಪವಾಕಾಡೊಳ್ ॥ ೧೦ ॥

ಬೆಳೆಯುತೀವಿದ ಪೊಲಗಳಿಂದಂ । ಫಲಿತವಿವಿಧಕುಜಂಗಳಿ
ದಂ । ಚೆಲುವಗುಡಿಗೋಪುರದಪೊಳಲುಗಳಿಂದ ವೀರನೃಪ ॥ ಲಲಿ
ಕವಿಶಿಲ್ಪಿಗಳತತಿಯಿಂ । ತೊಳಪಶಿವಗುರು ಶರಣದಾಸರ । ಬಳ
ದಿಂ ಪೇರ್ಮೆಯನು ತಳೆದುವಿರಾಜಿಪುದು ತಿರೆಯೊಳ್ ॥ ೧೧ ॥

ಚೋರಬಾಧೆಗಳೆಂದುವಿಲ್ಲದ । ದಾರಿಗಳ್ ದಾರಿಯೊಳು ಛಾ
ಯಾ । ಪೂರಣದಸಾಲ್ಮರಗಳಾಮರದಡಿಯಲರವಟಿಗೆ ॥ ಚಾರುತೀ
ರ್ಥಕ್ಷೇತ್ರಗಳು ಮಿಗೆ । ಮೀರಿಕರೆಯುವ ಗೋವುಗಳು ಸುವಿ । ಚಾ
ಮತಿಯುತ ನಾಗರಿಕರಿಹರಾ ಸುದೇಶದೊಳು ॥ ೧೨ ॥

ಧರೆಯೊಳೀಪರಿಮೆರೆವ ಕನ್ನಡ । ಸಿರಿಯನೈಜಾಂರಾಜ್ಯದೊಳು
ಮಿಗೆ । ಪರಮಪಾವನನಾಮದಿಂ ಬಹುದಿನದೆಸೆಸರಾಂತ ॥ ಮಿರುಪ
ಕೃಷ್ಣಾಭೀಮನದಿಗಳಿ । ವೆರಡರುರುಸಂಗಮದೊಳಿರ್ದಾ । ಕರಮೆಸೆ
ವ ಶ್ರೀ ಸಂಗಮೇಶನ ಭವನನೊದಲಾಗಿ ॥ ೧೩ ॥

ಪಿರಿದೆಸೆವಸುರಪುರಸುಶಾಪುರ । ದೆರಡುತಾಲ್ಲೂಕುಗಳವರೆಗಿರು
ತಿರುವಪ್ರಾಂತಕೆ ಸಗರನಾಡೆಂದೆನುತೆಪೇಳುವರು ॥ ಸುರಚಿರದ ಘನ
ಸಗರನಾಡಿದು । ಪರಮಭಕ್ತಿಯಬೀಡು ಫಲದಿಂ । ಭರಿತವಾಗಿಹವೃ
ಕ್ಷತತಿಗಳ ಘನತರದಕಾಡು ॥ ೧೪ ॥

ಅದರೊಳವನೀಕಾಂತೆಗೊಪ್ಪುವ । ವದನವೋ ಶೃಂಗಾರಸಾರ
ದ । ಸದನವೋ ಸೊಬಗಿನಸುಮಾನದ ಸುಖದನೆಲೆವೀಡೋ ॥ ಸುದತಿ
ರತ್ನಗಳೊಗೆದಚೆಲುವಂ । ಬುಧಿಯೊ ಪೇಳೆನೆ ಸಕಲಸೌರಂ । ಭದಲಿ
ಸೊಗಸಿಹುದಲ್ಲಿ ಅನವಾರೆಂಬಗ್ರಾಮವದು ॥ ೧೫ ॥

ಸಂದಬೀದಿಗಳಿಂದವನಕಾ । ನಂದವೀಯುವಪೂವುಬಳ್ಳಿಗ ।
ಳಿಂದ ಧರ್ಮಾಚಾರನಿರತರ ಪರಿಗಡಣದಿಂದ ॥ ಇಂದುಧರಭಕ್ತರು
ನೆಲಸಿರುವ । ಚಂದವಾಗಿಹ ಗೃಹಗಳಿಂದಂ । ಸುಂದರದಗುಡಿಗೋ
ಪುರಗಳಿಂ ತುಂಬಿ ರಾಜಿಪುದು ॥ ೧೬ ॥

ಇಂತುಮೆರೆವಾಪುರದಿಸಂತತ । ಕಂತುಹರಸಮರೂಪರುಗಳ । ತ್ಯಂತಮಹಿಮಾಶಾಲಿಗಳೆನುತ್ತೈದೆ ನುತಿವೆತ್ತು ॥ಅಂತಕನ ಭಯಗೊಳಿಸುವಂತಮ । ಹಂತರಾಗಿಹ ವೀರಶೈವರ । ಕಂತೆಮಠನಾಮಕದ ಗುರುಮಠಮೊಂದು ರಾಜಿಪುದು ॥ ೧೭ ॥

ಪುರಹರನವರಸದನದಂತುರು । ತರದಿಮೆರೆವಾಮಠದಿ ಮುಗ್ಧರು । ಪರಮಜಂಗಮ ಲಿಂಗಪೂಜೆಯೊಳೆರಕವಾದವರು ॥ ಪರರ ದ್ರವ್ಯವಮುಟ್ಟದಿರ್ಪವ । ರರಿಯೆಸದ್ವಂಶಜರು ಸತ್ಯರು । ನಿರುತದೊರೆತನಿತರೊಳೆ ತೃಪ್ತಿಯಪೊಂದುತಿರುವವರು ॥ ೧೮ ॥

ದಾನಧರ್ಮದಯಾನ್ವಿತರು ನಿ । ರ್ಮಾನಮದಮಾತ್ಸರ್ಯ ರಹಿತರು । ಮೌನಭಾವದೊಳವಿರತಂ ಶಿವಧ್ಯಾನತತ್ಪರರು ॥ ಜ್ಞಾನಸಾಧನಮಾರ್ಗನಿರತರು । ಹೀನಡಂಭಾಚಾರದರ್ಪಗ । ಳೇನುಯಿಲ್ಲದ ಶಾಂತರುಗಳತ್ಯಂತ ಸದುಹೃದಯರ್ ॥ ೧೯ ॥

ಉತ್ತಮೋತ್ತಮರಾದಗುರುಪದ । ಭಕ್ತಿಯುಕ್ತರು ಭವದಬೇರನು । ಕಿತ್ತುಬಿಸುಡುವ ಘನವಿವೇಕಿಗಳಸಮಮಾನಿತರು ॥ ಸ್ತುತ್ಯಶೌಚಾಚಾರನಿರತರು । ಚಿತ್ತದಲಿನಿರ್ಮಲರು ನಿಸ್ಪೃಹ । ವೃತ್ತಿಯಲಿ ವರ್ತಿಸುವರಾಶಾಪಾಶ ವರ್ಜಿತರು ॥ ೨೦ ॥

ಜಾತಿಧರ್ಮಾಚಾರವಂತರು । ನೀತಿರೀತಿಗಳರಿತು ನಡೆವವ । ರೋತು ಪಂಚಾಕ್ಷರಿಯ ಜಪಿಸುತ ಕಾಲಕಳೆವವರು ॥ ಖ್ಯಾತಶಾಸ್ತ್ರಾಗಮವ ಕೇಳುತ । ಪೂತಪರಹಿತಕಾರ್ಯವೆಸಗುತ । ಮಾತುಮಾತಿಗೆ ಬಸವನೆಂಬಕ್ಷರವ ನುಡಿವವರು ॥ ೨೧ ॥

ಇಂತನೇಕಗುಣಂಗಳಿಂದ । ತ್ಯಂತಪೂಜ್ಯತೆಪೊಂದಿ ಘನಮೆರೆ। ದಂತಪರತರ ಶೀಲವಂತಾಭಿದನು ಮೇಣೈದೆ ॥ ಕಾಂತಿಯುತೆ ಅಪ್ಪಮ್ಮೆಯೆಂಬುವ । ಶಾಂತಿಯುತ ದಂಪತಿಗಳಿರದೋ । ರಂತೆ ಸಂತಸದಿಂದೆ ವಾಸಿಸುತಿರ್ದರೇನೆಂಬೆ ॥ ೨೨ ॥

ಇನಿತುಮಾನ್ಯತೆಪೊಂದಿನೆಲಸಿರ । ಲನುಪಮಿತ ದಂಪತಿಗಳೀ
ರ್ವರಿ । ಗೆನಿತೊಕಾಲವು ಕಳೆದಡುಂ ವರಪುತ್ರರಿಲ್ಲದಲೆ ॥ ಮನದೊ
ಳಗೆ ಮಿಗೆವ್ಯಸನವ್ಯಾಪಿಸಿ । ಚಿನುಮಯನಧ್ಯಾನದೊಳಿ ಕಾಲವ ।
ನನುದಿನದಿ ಕಳೆಯುತ್ತಲಿರ್ದರು ನಿಮಿಷವರುಷದೊಲು ॥ ೨೩ ॥

ಈಪರಿಯವರಸ್ಮರಣೆಯೊಳಗಿ । ರ್ದಾ ಪರಮದಂಪತಿಗಳ್ನಿ
ಷ್ಠೆಗೆ । ಶ್ರೀಪರಾತ್ಪರಮೂರ್ತಿಸಂತಸಪೊಂದುತೊಂದುದಿನಂ ॥ ಪಾಪ
ನಾಶನಗೊಳಿಪವರಚರ । ರೂಪಮಂ ಧರಿಸುತ್ತಲೀಲೆಯೊ । ಳಾಪರ
ತರವ್ವನಮ್ಮ ಸ್ವಪ್ನದೊಳಾಗಮಿಸುತಿರದೆ ॥ ೨೪ ॥

ಚಿಂತೆಯನುಬಿಡುಮಗಳೆ ನಿನಗ । ತ್ಯಂತಮಹಿಮಾಶಾಲಿಸದ್ಗು
ಣ । ವಂತ ಸುತಜನಿಸುವನುನಿಜವಿದು ಕೆಲವುದಿನಗಳೊಳು ॥ ಇಂತು
ಸುರಿಬಯಲಾಗೆಚರವರ । ಶಾಂತಿಯುತೆ ಅವ್ವನಮ್ಮಯೂಕ್ಷಣ । ಕಂ
ತುಹರನಂ ಭಜಿಸುತೇಳುತೆ ಪತಿಗೆ ನಮಿಸುತಲಿ ॥ ೨೫ ॥

ಚರನುಸ್ವಪ್ನದಿಬಂದುತನಗಾ । ದರದಿಪೇಳಿದಸಂಗತಿಯನವ ।
ಗೊರೆಯಲಾಕ್ಷಣ ಹರುಷಪೊಂದುತಲಿಂತುಯೋಚಿಸಿದಂ ॥ ಚರನು
ಪೇಳಿದಸ್ವಪ್ನಮಾದರೊ । ಭರದಿಫಲಿಪುದು ಸಟೆಯುದಾಗದು । ಹರ
ಹರಾ ಇದರಿದುಕೌತುಕವೆನುತೆ ಪೊಗಳಿದನು ॥ ೨೬ ॥

ಪಂಕಜಾನನೆಬಸುರಿನಾಶೆಯೊ । ಳ್ಶಂಕರನಪೂಜಿಸುತ ಗುರುಪ
ದ । ಪಂಕಜವಸೇವಿಸುತ ಹರುಷದಿ ಬಂದತಿಥಿಗಳ್ಗೆ ॥ ಕಿಂಕರತೆಯಿಂ
ದುಣಿಸಿಜನರೊಳು । ಬಿಂಕವನುತೋರಿಸದೆಮಿಗೆ ನಿ । ಶ್ಶಂಕೆಯೊಳು
ಕಾಲವನು ಕಳೆಯುತಲಿರ್ದಳೇನೆಂಬೆ ॥ ೨೭ ॥

ವರಭಕುತೆಶಿವಚರಿತೆಪೂರಿತೆ । ಕರುಣಯುತೆ ಅವ್ವನಮ್ಮ ಭಕ್ತಿ
ಗೆ । ಪುರಹರನಕೃಪೆಯಾಗಿತೀಪ್ರದಿ ಗರ್ಭಧರಿಸಿದಳು ॥ ವರಮೊಗ
ವು ಬಿಳುಪೇರಿದುದು ತಲೆ । ಗುರುಳುಕವಲಾದುದು ಸುಕದಪಿನ । ನರ
ಗಳವುಪಸುರಾಗಿ ಕುಚಗಳ ತುದಿಯು ಕಪ್ಪಾಗೆ ॥ ೨೮ ॥

ತೊಡೆಪೊಡೆಯುಘನವಾಗಿಮಧುರದ । ನುಡಿಯುಸೂಕ್ಷ್ಮವ
ದಾಗಿನಿದ್ರೆಯೊ । ಕಿಡೆವಿಡದೆ ಜಡಭಾವವನುತೋರುತ್ತಮನದೊಳಗೆ॥
ಸಡಗರವನಿರದಾಂತುಬಸುರಿನ । ಮೃಡನದೃಢಭಕ್ತಿಯೊಳು ಭಜಿಸು
ತ । ಕಡುಮುದದಿಕಾಲವನುಕಳೆಯುತಮಿರಲುಮೊಂದುದಿನ ॥ ೨೯॥

ಭೂಮಿಯೊಳಗಡಗಿರ್ದುರಾಜಿಪ । ಹೇಮಕಲಶವುಪೊರಗೆಬಂ
ದೊಲು । ಕಾಮಣೀಯಕವಾಗಿರಾಜಿಪ ಕಲಿತರತ್ನವದು ॥ ಆಮಹಾ
ಸಾಗರದಿಶೀಘ್ರದಿ । ಕ್ಷೇಮದಿಂ ಕಡೆಗಾದತೆರದೊಳು । ತಾಮರಸನ
ಯನೆಯುಸುಗರ್ಭದಿ ವೇದನೆಯುಮಿರದೆ ॥ ೩೦ ॥

ತಿರೆಯೊಳುರುವಿಖ್ಯಾತವಾಗುತೆ । ನೆರೆಮೆರೆವ ಶ್ರೀಶಾಲಿವಾಹ
ನ । ಪರಮಶಕಪದಿನೇಳುನೂರ್ನಲವತ್ತುನಾಲ್ಕನೆಯ ॥ ವರುಷದೊ
ಳುಪುರಹರನ ಕೃಪೆಯಿಂ । ಮಿರುಪರವಿತೇಜದೊಲುಭುವಿಗವ । ತ
ರಿಸಿದನು ಲೋಕವನು ಪಾವನಗೈವಕತದಿಂದೆ ॥ ೩೧ ॥

ಬಡವನಿಗೆಕಡವರವುದೊರೆದೊಲು । ಕುರುಡನಿಗೆ ನಯನಗಳು
ಬಂದೊಲು । ಮಡದಿಪರಮವ್ವನ್ಮೃಗನುಪಮ ಸುತಜನಿಸಲೊಡನೆ॥
ಮೃಡನಸಮ ಗುರುವರನ ಕರೆಯಿಸಿ । ಸಡಗರದಿಕೊರಳೊಳಗೆಲಿಂಗ
ವ । ತೊಡರಿಸಿದ ವಿಧ್ಯುಕ್ತದಿಂ ವರಶೀಲವಂತಾಖ್ಯಂ ॥ ೩೨ ॥

ಇಂದುಧರನೆಮಗೀಗದಯದಿಂ । ಕಂದನನುಕರುಣಿಸಿದನೆಂದ
ತಿ । ಯಿಂದುಮುಖಿಯಾನಂದದಿಂ ಲೋಲಾಡುತಿರಲಾಗ ॥ ಸಂದ ಪ
ನ್ನೆರಡನೆಯದಿನದೊಳು । ನಂದನಗೆ ವರನಾಮವಿಡಬೇ । ಕೆಂದುತೊ
ಟ್ಟಿಲ ಸಂಭ್ರಮಕೆ ನಾರಿಯರಕರಸಲ್ಕೆ ॥ ೩೩ ॥

ಅಂಬುಜಾನನೆಯರುಸುಶೋಭಿಪ । ಕಂಬುಕಂಧರೆಯರುವಿರಾ
ಜಿಪ । ನಿಂಬದಳಪುರ್ಬಿಯರು ಘನಜಘನೆಯರು ಮೇಣೆಸೆವ॥ರಂಭೆ
ರತಿಸಮರೂಪರುರುತರ । ತುಂಬಿಕಚೆಭರೆಯರು ಸುಮೃದುತರ । ದಂ
ಬುಜದವಾಸನೆಯರಾಗಮಿಸಿದರು ಪುತ್ಸವಕೆ ॥ ೩೪ ॥

ಕಲಪಿಕದಗಾನೆಯರು ಪರತರ । ಕಲಭಮುದಯಾನೆಯರು ಮಂ
ಜುಳ । ತಳಿರಸಮನಧರೆಯರು ವರಕಲಧೌತಕಾಂತಿಯರು ॥ ನಳಿನ
ರಿಪುವದನೆಯರು ಘನತರ । ಕಲೆಯರಿತಕಾಮಿನಿಯರತಿಶಯ । ಪೊ
ಳೆವವರ ಕಾಳಾಹಿವೇಣಿಯರುತ್ಸವಕೆ ಬಂದರ್ ॥ ೩೫ ॥

ನಾರಿಯರು ಸುವಿಚಾರಿಯರು ಕುಚ । ಭಾರೆಯರು ಗುಣಪೂ
ಯರು ವರ । ವೀರಶೈವಾಚಾರಿಯರು ಸುಸ್ಮೃತಿದಾರಿಯರು ॥ ಚಾರು
ಗಂಭೀರೆಯರು ನಿಗಮವಿ । ಚಾರಿಯರು ಸುಕುಮಾರಿಯರುಮುಪ
ಕಾರಿಯರು ಬಾಗಿನಕೆಬಂದರು ಪರಮಸಂಭ್ರಮದಿ ॥ ೩೬ ॥

ಮೆರೆಯುತಿರ್ಪಜನವಾರಭಕ್ತರು । ಹರುಷದಿಂ ಮಠದೊಳಗೆ ನೆ
ಯುತ । ಪುರಹರನಸಮರೂಪರೆನಿಸಿದ ಚರರತೃಪ್ತಿಯನು ॥ ಕರವ
ಸಗಿ ಶುಭಸಮಯದೊಳು ಘನ । ತರದವಾದ್ಯವುನೊಳಗುತಿರೆಬಹು
ಹರುಷದಿಂ ಬಾಲಕನ ತೊಟ್ಟಿಲೊಳಿಟ್ಟು ತೂಗಿದರು ॥ ೩೭ ॥

ಬಾಲಕನೆಜೋ ಪರಮಕರುಣಾ । ಶಾಲಿಯೇಜೋ ವಿದಿತ ಸ
ದ್ಗುಣ । ಶೀಲನೇಜೋ ಮಂದಹಾಸಮುಖೇಂದು ಜೋಜೋಜೋ ।
ವ್ಯಾಳಕಂಕಣರೂಪಜೋಜೋ । ಶೂಲಿಭಕ್ತರಬಂಧು ಜೋಜೋ ।
ಮೇಲೆನಿಪಘನಸೌಖ್ಯಜಲನಿಧಿ ಚಂದ್ರನೇ ಜೋ ಜೋ ॥ ೩೮ ॥

ಬಾಗಿನಕೆಬಂದಿರ್ದಸ್ತ್ರೀಯರು । ಜೋಗುಳದಪದವಾಡಿತೊಟ್ಟಿ
ಲ । ತೂಗಿ ಕೂಸನುನೋಡಿತೋಷದಿ ಧರೆಯಭಕ್ತರನು ॥ ರಾಗದಿ
ಪಾಲಿಸುವನೆನಿಸಿ ಸು । ಯೋಗಶೇಖರನಾಗಿನಿರುಪಮ । ಭೋಗಿಭೂ
ಷಣನುರುಕೃಪೆಯ ಪಡೆಯೆನುತೆ ಪರಸುತ್ತೆ ॥ ೩೯ ॥

ಧರೆಯೊಳಗೆಕಲ್ಯಾಣನಗರಿಯೊ । ಳುರುತರದಮಹಿಮೆಗಳತೋ
ರುತ । ಲಿರದೆಸೆದಬಸವನೊಲು ರಾಜಿಸಲೆನುತೆ ಹರುಷದೊಳು ॥ ಪ
ಮಚರಬಸವಾರ್ಯನೆನ್ನುತೆ । ಪರತರದನಾಮವನಿಡುತ್ತುರು । ಭ
ದಿ ಬಾಗಿನಕೊಂಡುಸಂತಸವಾಂತು ಗಮಿಸಲ್ಕೆ ॥ ೪೦ ॥

ಇತ್ತವರಚರರಿಂಗೆಯೌತಣ । ನಿತ್ತುಕರಸುತಲವರ ಪರಿಪರಿ । ವೃತ್ತಮದಪಕ್ವಾನ್ನದಿಂ ತಣಿಸುತ್ತಲವರಿಂಗೆ ॥ ಚಿತ್ತಕತಿಮುದವೀವ ವಸ್ತ್ರಗ । ಳಿತ್ತುಮತ್ತಂ ದಕ್ಷಿಣೆಯ ಘನ । ವಿತ್ತುಪರಕೆಯುವೆತ್ತು ಚ ರರನು ಮುದದಿಕಳುಹಿದರು ॥ ೪೧ ॥

ಈವಿಧದಿ ನೆರೆದಿರ್ದ ಜನಗಳು । ಭಾವಜಾರಿಯರೂಪದಂತೆ । ದಾವಟುವಕಂಡಮಿತಸಂತಸವಾಂತು ಮನದೊಳಗೆ ॥ ದೇವನೀನೀ ಬಾಲಕಗೆಘನ । ಪಾವನತ್ವವನಿತ್ತು ಪೊರೆವುದು । ಯೀವಸುಧೆಯೊ ಳಗೆನುತ ಸುತಿಸುತ ಗೃಹಕೆ ತೆರಳಿದರು ॥ ೪೨ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ। ಕ್ಷರಗಳಲಿ ಷಟ್ಕಕ್ಕರದ ಘನದಂತೆತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು ಮುದದಿಕೇಳ್ವುದು ಯರಡನೆಯ ಸಂಧಿ ॥ ೪೩ ॥



ಸಂಧಿ ೨ ಕ್ಕಂ ಪದ ೧೦೩ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಶ್ರೀಗುರು ವಿಶ್ವನಾಥಾಯನಮಃ ॥

# ಮೂರನೆಯ ಸಂಧಿ.

—(卐)—

ಸೂಚನೆ ॥ ಶೈಶವದಲೀಲೆಯನು ಕಳೆದು ವಿ ।
ಶೇಷವಿದ್ಯೆಂಗಳನು ಕಲಿತುರು ।
ಲೇಸಿನಿಂ ಶಿವದೀಕ್ಷೆಯಂ ಪಡೆದೆಸೆದ ವಸುಧೆಯೊಳು ॥

ವ್ಯೋಮಕೇಶಮಹೇಶ ಶಂಕರ । ವಾಮದೇವವರೇಣ್ಯ ವ
ಗುಣ । ಧಾಮಗಿರಿಜಾಕಾಮ ವೃಷಭಾರೂಢವಿಶ್ವಾತ್ಮಾ ॥ ಭೀಮಭೈ
ರವ ಭೂತಪತಿಮಹ । ಕಾಮವೈರೀಶ್ವರಜನಾರ್ದನ । ಪ್ರೇಮಪು
ಹರ ನಿನ್ನಪದಪಂಕಜಕೆ ನಮಿಸುವೆನು ॥ ೧ ॥

ಪರಶಿವನೆ ವರಬಾಲಭಾವವ । ಧರಿಸಿದಂದದಿ ಬ್ರಹ್ಮವೇಷುನ
ತರದಶಿಶುರೂಪವನು ಬೆರಸಿದೊಲಸಮ ಚಿನ್ಮಯನೇ ॥ ವರಪಸು
ಯಾಗೊಪ್ಪುವಂದದಿ । ನಿರುಪಮಪರಂಜ್ಯೋತಿ ತಾನೇ । ಪರಮಶೈ
ಶವನನುಕರಿಸಿದಂತೆಸೆದ ಬಸವಾರ್ಯಂ ॥ ೨ ॥

ರವಿಯುದಯಕಾಲದೊಳು ಹರುಷದಿ । ತನೆವಿನೋದವ ಪಡು
ವಬಾಲಕ । ನವಸರದಿಮೊಗದೊಳೆದು ವರಭಸಿತವನು ಧರಿಸುತ್ತೆ ॥
ಪ್ರವಿಮಳದಮೊಲೆಹಾಲಕುಡಿಸುತ । ಭವಿಕದಿಂ ಶೃಂಗರಿಸಿನಲವಿಂ
ಕುವರನಂಸನ್ಮೋಹದಿಂ ಪೋಷಿಸಳು ತಾಯ್ಮುದದಿ ॥ ೩ ॥

ನೊಸಲತುಂಬಿದ ಭಸಿತರಾಜಿಸ । ಮಿಸುನಿಯುಡಿದಾರೆಸೆವಬಿಂ
ದುಲಿ । ಮಿಸುಪವಾಗಾಯ್ನೆಜ್ಜೆವರಳೆಲೆ ಸರಿಗಿಪುಲಿಯುಗುರು ॥ ಎಸೆ
ವ ಪೊಸರುದ್ರಾಕ್ಷಮಾಲೆಯು । ಶಿಶುವಿನುರುಕಂಠದೊಳುರಾಜಿಸ । ಲ
ಸಮಚರಬಸವಾರ್ಯನೆಸೆದನು ಬಾಲದೊಡಿಗೆಗಳಿಂ ॥ ೪ ॥

ಊಡಿಪಾಲ್ಪೆಣ್ಣೆಗಳಮುಖವನು । ನೋಡಿಮುದ್ದಿಸಿ ಪರಮ
ಜೋಗುಳ । ಪಾಡಿಮಿಗೆಜಕ್ಕುಲಿಸಿನಗಿಸುತ ಘ್ರಾಣಿಸುತೆ ತಲೆಯಾ ॥
ಮೂಡಿಲುಲಾಜಲವುಸೂಸಲು । ನಾಡೆಯೊರಸುತ ತೊದಲವಾತಿಗೆ ।
ಗಾಢತೋಷದೊಳ್ಕೂಡಿಯುಪಚರಿಸುವಳು ತಾಯ್ಮುದದಿ ॥ ೫ ॥

ಬಾಲಕೇಳಿಯೊಳಂಬಿಗಾಲಿ । ಟ್ಟೇಳುತಂಭಿತ್ತಿಗಳ ನೆಮ್ಮುತ ।
ಬೀಳುತಂ ನೆಲಕತಿಶಯದಿ ಶೈಶವದಲೀಲೆಯೊಳು ॥ ಬಾಲರೊಡನಾ
ಡುತ್ತ ವ್ಯೈಯ್ಯಿಯು । ಧೂಳಿಯಿಂದೆಸೆಯುತ್ತಲಿರಲಾ । ವೇಳೆಯೊಳು
ಬಸವಾರ್ಯನೆಸೆದಿರ್ದಸಮ ರೂಪಿನೊಳು ॥ ೬ ॥

ಪರಮಪುತ್ರನ ಪಡೆದವನಘನ । ತರದಲೀಲೆಗಳನ್ನುನೋಡು
ತ । ವರಮೊಗದೆಮೊಗವಿಟ್ಟುಮುದ್ದಿಸುತೆತ್ತಿ ತೊಟ್ಟಿಲೊಳು ॥ ಇರಿಸಿ
ಜೋಗುಳಪಾಡಿನಲವಿಂ । ದಿರದೆಸಂತಸಬಡುವಸ್ತ್ರೀಯಳ । ಪರಮ
ಪುಣ್ಯಕ್ಕೆಣೆಯೆ ಪರಿಕಿಸಲೀವಸುಂಧರೆಯೋಳ್ ॥ ೭ ॥

ಬಾಲಕೇಳಿಯನಿಂತು ಕಳೆದಾ । ಶೀಲಚರಬಸವಾರ್ಯಗಾಗ
ಳ್ । ಯೇಳುವರ್ಷದಪರಿಯಮಾಗಲು ತಂದೆಮುದವಾಂತು ॥ ಬಾಲ
ಕನಿಗುರುವಿದ್ಯೆಕಲಿಸುವ । ಕಾಲವದು ಸಲೆಯೊದಗಿಬಂದುದು । ವ್ಯಾ
ಳಕಂಕಣನಸಮಕೃಪೆಯಿಂದೀಗಮೊಂದರಿದು ॥ ೮ ॥

ಚೆನ್ನೆಸೆವಮುಖವುಳ್ಳವಟುವಿಗೆ । ಕನ್ನಡವುಸಕ್ಕದವುಮೊದ
ಲಾ । ದುನ್ನತದವಿದ್ಯೆಗಳಕಲಿಸೆ ನಿತಾಂತಮೋದದೊಳು ॥ ಪನ್ನಗಾ
ಭರನೊಪ್ಪುವೊಲು ಸಂ। ಪನ್ನಮಾರ್ಗದಿ ನಡೆದುಸಂತತ । ತನ್ನಪಡೆ
ದವರಿಂಗೆ ಸಂತೋಷವನುಕೊಡುತಿರ್ದಂ ॥ ೯ ॥

ವಿಮಳಬಾಲಕಗಂದುದೀಕ್ಷಾ । ಸಮಯವದು ವದಗಲ್ಕೆಪಿತರು
ರು । ಕ್ರಮದಿಶಿವದೀಕ್ಷೆಯನುಮಾಡಿಸಬೇಕೆನುತಲೈದೆ ॥ ಅಮಿತಸಾ
ಹಿತ್ಯವನುಜವದೊಳು । ಸುಮುದದಿಂ ಸಿದ್ಧವನುಪಡಿಸಿ ಸು ।ಶಮದ
ಮಾದಿಗುಣಂಗಳಿಂದತಿ ಭರಿತರುರುವಿನಯರ್ ॥ ೧೦ ॥

ಕ್ಲೇಶಪಂಚಕವನ್ನುಮೀರಿ ವಿ । ಲಾಸದಿಂ ಕಾಮಾದಿರಿಪುಗಳ
ನಾಸುರದಿಗೆದ್ದು ಮಲತ್ರಯರಹಿತರತಿಕುಶಲರ್ ॥ ಈಶತತ್ವವಿಶಾರದ
ರು ಪರ । ಮೇಶಪೂಜಾನಿಷ್ಠರಸಮೋ । ಲ್ಲಾಸದಿಂ ಶಿಷ್ಯರಿಗೆಸಂ
ಯವಂಕುರಿಸದಂತೆ ॥ ೧೧ ॥

ಉತ್ತಮದಿಬೋಧಿಸುವವರ್ ಘನ । ವೆತ್ತ ಷಟ್‌ಸ್ಥಲಜ್ಞಾನಿಗ
ಳು ವರ । ಚಿತ್ತಜಾರಿಯತೆರದಿಘನತರ ಮಹಿಮಶಾಲಿಗಳು ॥ ಸತ್ಯ
ರೂಪರು ಭಕ್ತಮಿತ್ರರು । ಭೃತ್ಯರನ್ನುದ್ಧರಿಪಕಾರ್ಯದೊ । ಳತ್ಯಧಿಕ
ತನುಮನವಸೂರೆಯಗೊಡುವವರ್ ನಿರಘರ್ ॥ ೧೨ ॥

ಆದಬಾಡದ ಮೂಲೆಮಠದಾ । ಸಾಧುಶ್ರೀಗುರುಚೆನ್ನವೀರರ।
ಪಾದಸನ್ನಿಧಿಗೆಯ್ದು ಜವದಿನಿತಾಂತ ಭಕ್ತಿಯೊಳು ॥ ಆದಯಾಂಬುಧಿ
ಹರನನೆನೆಯುತ । ಸಾದರದಸಾಷ್ಟಾಂಗವಂದನೆ । ಮೋದದಿಂದರ್ಪಿ
ಸುತ ಬಳಿಕಿರದೆದ್ದು ಕರಮುಗಿದು ॥ ೧೩ ॥

ಗುರುವೆತಮ್ಮಯ ಬಾಲಶಿಷ್ಯಸು । ಚರಬಸವವಟುವಿಂಗೆಕರು
ಣದಿ । ಪರಮಶಿವದೀಕ್ಷೆಯನುಗೈದುದ್ಧರಿಸಬೇಕೆನುತೆ ॥ ಸಿರಿದುವಿನ
ಯದಿ ಬೇಡಿಕೊಳಲು । ಗುರುತರದ ಗುರುವರರುಘನತರ । ಹರುಷ
ದಿಂದಾಗಲಿಯೆನುತ್ತಿರದಾಗ ಸಮ್ಮತಿಸಿ ॥ ೧೪ ॥

ಮಾರನೆಯದಿನವೇಮಹಾಮುದ । ವೇರಿ ವರಗುರುಶಿಷ್ಯರಿ
ರ್ವರು । ಶೇರಿಪರತರಶಿಷ್ಯವೃಂದವ ಕರೆದುಕೊಳುತಾಗಳ್ ॥ ಚಾರು
ಸ್ವಗ್ರಾಮಕ್ಕೆಬಂದು ವಿ । ಚಾರದಿಂ ದೀಕ್ಷೆಯಮುಹೂರ್ತವ । ನೋ
ರಣದಿ ನಿಶ್ಚಯಿಸಿಗೃಹಶೃಂಗಾರವೆಸಗಿದರು ॥ ೧೫ ॥

ಆಲಯುವನತಿಶುದ್ಧಿಗೊಳಿಸಿ ವಿ । ಶಾಲಮತಿಗಳು ವಿವಿಧಪರಿ
ಯೊಳು । ಮೇಲೆನಿಪುದೆನ್ನುವೊಲುಸೌರಭ ಪರಮಮೃಗಮದದೊಳ್
ಕೀಲಿಸಿದಕುಂಕುಮದಿಸಾರಿಸಿ । ಲೋಲಮುಕ್ತಾಫಲಗಳಿಂ ಸುವಿ ।
ಶಾಲಸೊಬಗಿನ ಸೋಜಿಗದರಂಗಗಳ ನೆರೆರಚಿಸಿ ॥ ೧೬ ॥

ಗೋಡೆಗಳುಮಿಂಚುವೊಲು ಸಾರಣೆ । ಮೂಡಿಬಹುವಿಧಚಿತ್ರ ರೂಪಂ । ನೋಡುವರುಬೆರಗಾಗುವಂದದೆ ಬರೆದುಬಿಳಿಪಟ್ಟಂ ॥ ಹೂ ಡಿರುತೆ ನೆಲೆಯನುಗೊಳಿಸಿರೆ ನಿ। ಪೀಡದಿಂ ಮೇಲ್ಕಟ್ಟುಕಟ್ಟುತೆ। ನಾ ಡೆಮಣಿಮಯತೋರಣಗಳಂ ಮಂಟಪಕೆ ಕಟ್ಟೆ ॥ ೧೭ ॥

ಕದಳಿಕಾಸ್ತಂಭಗಳಮೂಲೆಗ । ಳೊದಗಿದೆಡೆಯೊಳ್ ನಿಲ್ಲಿಸುತೆ ವಿಧ । ವಿಧವಿಚಿತ್ರಸುಕೇತನಗಳಂ ತರವರಿದುನೆಲಸೀ ॥ ಸದಮಳಸು ವಸ್ತುಗಳಸಂಗ್ರಹ । ವದವಿಸುತೆ ಸನ್ಮಂಗಳಾನ್ವಿತ । ಸದನದಿವ್ಯ ವಿ ಲಾಸಲೀಲಾಸ್ಪದದಲಂಕರಣಂ ॥ ೧೮ ॥

ಪದುಳವಾಗಿರೆನೋಡಿಮೆಚ್ಚಿ ಸು । ಹೃದಯಶ್ರೀಗುರು ಚೆನ್ನ ವೀರರು । ಮುದದಿಶಿಷ್ಯರಗೂಡುತಾಗಳಪೂರ್ವಸುಖಮಯದ ॥ಸದ ನವದುಪರಿಶೋಭಿಸಲು ಜರಿ । ಗಿದುದೊಡನೆಪ್ರತ್ಯೂಷವಾಸನು । ಯದ ವಿಧಿಯತೀರಿಸುತೆ ಶ್ರೀಚನವೀರದೇಶಿಕನು ॥ ೧೯ ॥

ಸಕಲಭಕ್ತಸಮೂಹಪರಿವೃತ। ಸುಕರದೀಕ್ಷಾಮಂಟಪದ ವೇ। ದಿಕೆಗೆಗಮಿಸೆ ತದೀಯಮಧ್ಯದಿ ಪೂರ್ಣಕುಂಭಗಳ ॥ನಿಕರದಿಂ ಶೋ ಭಿಸುತೆ ಶಿಖರ। ಪ್ರಕರಜಾತುಸ್ತಂಭದುಪರಿಯೊ। ಳಕುಟಲದಿ ಕೀಲಿ ಸಿರೆ ವಿಸ್ಮಯವೆನಲುಮೆರೆಯುತಿಹಾ ॥ ೨೦ ॥

ವರಪ್ರವಾಳಪ್ರಸೂನಗುಚ್ಛ। ಸ್ಫುರಿತಮುಕ್ತಾಫಲಸಮೇತಂ। ಸುರಚಿರತರೋಲ್ಲಸಿತಶೋಭಾಕರತೆಬಹು ವಿಧವ ॥ ಪರಿಮಳೋಪೇ ತಾತಿಶಯ ಸಂ। ಭರಿತಧೂಪಸುಧೂಮದಿಂ ಕ । ರ್ಪುರದದೀಪದಿ ದೀಪಿತವದಾಗಿರ್ಪಮಂಟಪದ ॥ ೨೧ ॥

ಅಂತರಕ್ಕೆಪ್ರವೇಶಿಸುತ್ತಿಮು । ಹಂತನದರೊಳು ಪಂಚವರ್ಣ ವ। ನಾಂತಚೂರ್ಣದಿ ಗೌರಿತಿಲಕವೆನಿಪ್ಪಚಿತ್ರಿತವ ॥ ದಂತಹಲತೆ ಯರಚಿಸುತಂ ಚತು । ರಂತದಿಙ್ಮುಖ ಮಧ್ಯದೊಳಗೋ । ರಂತೆ ವಿಶ್ರಾಂತಸಿತಶಾಲೀತಂಡುಲಂಗಳನೂ ॥ ೨೨ ॥

ಅದರಮೇಲ್ಪ್ರಾಕದೊಳು ಹರವಿಸಿ । ನದಿಯಸಲಿಲದ ಪೂರ್ಣ
ಕಲಶ ಸ । ಮುದಯುವಂ ನೆಲೆಗೊಳಿಸಿತತ್ಪಶ್ಚಿಮಪ್ರದೇಶದೊಳು ॥
ಮುದದೊಳಾತ್ಮಧ್ಯಾನನಾಗಿ ಸು । ಬುಧತಿಲಕನೆಂದೆನಿಸಿಮೆರೆದಿಹ । ಸ
ದಮಳಾನಂದೈಕನಾಗಳ್ಕುಳಿತು ತಕ್ಷಣವೇ ॥ ೨೩ ॥

ಚತುರ್ವಿಧಾಚಾರ್ಯರುಗಳೆನಿಸುವ । ಯತಿಗಳಂಜಾತುಃಕಲಶಸಂ।
ಚಿತ ಸಮೀಪದೊಳಧಿಕರಣರಾಗಿರುವ ತೆರದಿಂದಂ ॥ ಅತಿಶಯದೆ ನಿ
ಯಮಿಸುತೆಯುಳಿದಾ । ಸಿತಿಗಳಪ್ರತಿನಿಧಿಗಳೆನಿಪೂ । ರ್ಜಿತಸುಭಕ್ತ
ರ ಸಂಚಯುವನುಚಿತಾಸನದೆ ನೆಲಸೀ ॥ ೨೪ ॥

ತನ್ನದೆನಲಾಮಧ್ಯಕಲಶವ । ನುನ್ನತದೆ ಕೈಕೊಳುತಲವರು
ಗ । ಳಿನ್ನುಕೂಡಿಯು ತಾನುತತ್ಕಲಶಂಗಳನುಗಂಧಾ ॥ಭಿನ್ನಶುಭ್ರಾಕ್ಷ
ತಪ್ರಸೂನಾ । ಸನ್ನಧೂಪಾರ್ಪಣ ಮುಖಗಳಿಂ । ತೆನ್ನುವಾಸಕಲೋ
ಪಚಾರಗಳಿಂ ಸಮರ್ಚಿಸುತೇ ॥ ೨೫ ॥

ಅದರಮೇಲ್ಭಾಗದೊಳುವಸ್ತ್ರದ । ಹೊದಿಕೆಯಾಚ್ಛಾದನವಮಾ
ಡಿಸಿ । ಸದಮಳದ ವರರತ್ನಸಂಚಯಸ್ವರ್ಣಗಳನದರೊಳ್ ॥ ಒದವಿ
ರುವಚೂತಪ್ರವಾಳ ವಿ । ಶದಸುತಾಂಬೂಲೀದಳಗಳಂ । ಪುದಿದು ತ
ನ್ಮುಖದೊಳು ನೆಲಸುತಾಕಲಶಪಂಚಕದಾ ॥ ೨೬ ॥

ಸುತ್ತತಂತುವವೇಷ್ಟನವನೂ । ಡುತ್ತೆ ತತ್ಕಲಶಂಗಳಂ ಸ ।
ರ್ವೋತ್ತಮೋತ್ತಮವೆನಿಪ ಪಂಚಾಕ್ಷರಮಹಾಮಂತ್ರಂ ॥ ಮತ್ತೆ
ಪಂಚಬ್ರಹ್ಮಮಂತ್ರಗ । ಳಿತ್ತಲಭಿಮಂತ್ರಿಸುತೆ ಸೌರಭ । ವೆತ್ತವುತ್ತ
ರ ಧೂಪದೀಪಾರತಿಗಳಿಂದೆಸೆಯೆ ॥ ೨೭ ॥

ಅಲ್ಲಿರುವ ಸದ್ಭಕ್ತಪುಂಗವ । ರೆಲ್ಲರಂ ವಿಭೂತಿತಾಂಬೂಲೋ
ಲ್ಲಸಿತಪೂರ್ವಕದೊಳಾರಾಧಿಸುತಲವರಿಂದೇ ॥ ಚೆಲ್ಲಸಿತದೀಕ್ಷೆಯನು
ಮಾಡ । ಲ್ಬಲ್ಲಿದರಮುಖದಿಂದಲಪ್ಪಣೆ । ಯೆಲ್ಲರಿಂ ಪಡೆಯುತ್ತಲಾ
ಕ್ಷಣ ವಾದ್ಯಮೊಳಗುತಿರೆ ॥ ೨೮ ॥

ಪರಮಚರಬಸವಾರ್ಯನಂ ಗುರು । ವರನು ಕರೆಯಲ್ಕಾಗ
ಬಂದುರು । ಚರಿಗತಿಮುದದಿಂದಸಾಷ್ಟಾಂಗದೊಳು ವಂದಿಸುತೆ॥ಹರ
ಪುರಾತನರಾಜ್ಞೆಯಿಂ ಶ್ರೀ । ಗುರುಪದಂಗಳಿಗೆರಗಿ ಮುಕುಳಿತ । ಕರ
ಕಲಿತನಾಗಿರೆ ಕೃಪಾಲೋಕನದೊಳುಂ ಪೂರ್ವ ॥ ೨೯ ॥

ತನುವನೊದಗಿದಕರ್ಮವಡಗಿಸಿ । ವಿನಯದಿಂಮಂಟಪವವು
ಗೆ ಶಿ । ಷ್ಯನನು ಪೂರ್ವದಕಡೆಗೆ ಮುಖಮಂಮಾಡಿಕುಳ್ಳಿರಿಸಿ ॥ಸನು
ಮತದೆತಾನೋಕ್ತ್ತರದೆ ಕುಳಿ । ತನುಪಮಂ ತತ್ಕಲಶಪಂಚಕ । ದನಿತು
ಜಲದಿಂದಾಗಸಂಪ್ರೋಕ್ಷಿಸುತೊಡನೆಶೈವಾ ॥ ೩೦ ॥

ಚಾರಸಂಸ್ಕಾರನನುಮಾಡುತೆ । ವೀರಶೈವವಿಧಾನದೀಕ್ಷಾ । ಧಾ
ರವಿಧಿಯೋಸರಿಸದಂದದಿ ತನುವಿನಂಡಲೆಯಂ ॥ ದೂರಮಾಡಿ ಸ್ವ
ಯಂಭುವೆನಿಸುತೆ । ಸಾರಸುಖದೋರುತ್ತೆಭವದುರು । ಬೇರಕಿತ್ತೀಡಾ
ಡಿ ಮೇಣ್ಮುತ್ಸಾಲಸಂಗತದ ॥ ೩೧ ॥

ಭೇದದುರ್ಲ್ಲೇಖಂಗಳಡಗುವ । ನಾದಿಚಿದ್ಭಸಿತೈಕಪಟ್ಟವ । ಸಾ
ದರದೆತಾಂ ಕಟ್ಟನಿಜಹಸ್ತಾಬ್ಜಸ್ಪರ್ಶನದಿಂ ॥ ಮೋದದಿಂದಾಬಸವ
ವಟುವಿನೊ । ಳಾದತನುಗತ ಪಂಚಭೂತಗ । ಳಾದಿ ವೈಕಾರಿಕವ
ಡಂಗಿಸಿಯನುಪಮಿತಪಂಚ ॥ ೩೨ ॥

ವರ್ಣಮಂತ್ರವನುಗ್ರಹಿಸಲಾ । ಕರ್ಣಮಾತ್ರಂ ಮೋಹತಿಮಿ
ರಾ । ಕೀರ್ಣಹಂಕಾರಾದಿಗುಣವಿರಹಿತನುಮಾಗಲ್ಕೆ ॥ ಪೂರ್ಣಪರ
ಬ್ರಹ್ಮಂವಿರಿಂಚಿ ಸು। ಪರ್ಣಗಮನರುಗಳಿಗೆ ಸಿಲ್ಕದ। ನಿರ್ಣಯಾತೀ
ತನು ಸದಾಸರ್ವಗತನೆಂದೆನಿಪ ॥ ೩೩ ॥

ಪರಶಿವನ ನವಯುವವಿರಹಿತನ । ನುರುತರಜ್ಯೋತಿರ್ಮಯಾಕೃ
ತಿ । ನಿರವಧಿಕನಿರ್ಪಿಕೃತಿಯಾಗಿಹ ಪರಮಲಿಂಗವನೂ ॥ ಕರದಿನಿಲ್ಲಿ
ಸುತಾರುಮಾರ್ಗಗಳಿರವೆ ನಿಜವೆಂದದನೆ ತಿಳುಹಿಸಿ । ನಿರತನಿರ್ಲ್ಲೇಪಕ
ವದಾಗಿಹ ನಿಲವನೆಲೆಗೊಳಿಸಿ ॥ ೩೪ ॥

ಪಂಚವಿಷಯವಿರಹಿತನಾಗಳೆ । ಪಂಚವಿಧದಮೃತಸ್ನಪನಗಳ । ನುಂ ಚಲನೆಯಣುಮಾತ್ರವಿಲ್ಲದತೆರದಿಮಾಡುತೆ ನಿರ್‌॥ವಂಚಕ ದಿನಿಖಿಲೋಪಚಾರವ । ಪಂಚಮುಖಶಿವಲಿಂಗಕೆಸಗಿ ಮು । ದಂಚಿತದ ದೇಶಿಕನು ನಿಜಪ್ರಿಯಶಿಷ್ಯನುತ್ತಮದ ॥ ೩೫ ॥

ಅಂಗದೊಳಗಣಚಿತ್ಕಲೆಯಕರ । ಕಂಗವಿುಸಿದಂ ಭಾವದನುಗತ । ದಿಂಗಿತದಿಕಂಡದನೆಯಾಕರ್ಷಿಸಿ ಮಹಾಮಂತ್ರ ॥ ಸಂಗದಿಂಪ್ರತಿಷ್ಠಿಸಿದನಾ । ಲಿಂಗದೊಳುಸತ್ಪ್ರಾಣಭಾವದ । ಮಂಗಳಾತ್ಮನನಾತ್ಮಶಿಷ್ಯನ ಕರಕೆತಾನಿತ್ತು ॥ ೩೬ ॥

ಗುರುವರಂತಲ್ಲಿಂಗಮೂರ್ತಿಗೆ । ಪೆರತೆನಿಸದೊಲು ಪ್ರಾರ್ಥಿಸುತಲಿಂ । ತರುಹಿದನು ಶಿವಲಿಂಗಮೂರ್ತಿಯೆ ಪರಮದೃಢಭಕ್ತಿ ॥ ಪರಿಚಯನುಮೆಂದೆನಿಸುವೀತನ । ಶರಿರಮನಭಾವಂಗಳೊಳುನೀಂ । ಭರಿತವಾಗಿರುಯೆಂದುಮಗಲದ ವಿಧದೊಳಿಂತೆಂದೂ ॥ ೩೭ ॥

ಆಮಹಾಲಿಂಗವನೆಪ್ರಾರ್ಥಿಸಿ । ಪ್ರೇಮದಿಂದಾಶಿಷ್ಯನನುಕಂಡೀಮಹಾಲಿಂಗವನೆಪ್ರಾಣವದೆಂದು ಭಾವಿಸುತೆ ॥ ನೇಮದಿಂದಂಗದೊಳುಧರಿಸು ಸ । ದಾಮನೀಷೆಯೆ ತೊಲಗಲಿದುನಿಃ । ಪ್ರೇಮದಿಂ ತನುವಾಕ್ಷಣದೊಳೇ ತ್ಯಜಿಸಬೇಕೆಂದು ॥ ೩೮ ॥

ಕೀಲಿಸುತ್ತಂ ಲಿಂಗದಕ್ರಿಯ । ಜಾಲದೊಳುನಿಪುಣನುಮೆನಿಸುತಂ । ಲಾಲಿತಪ್ರಸಾದಾಂಗನಂ ಲಕ್ಷಣದಿಮಾಡುತ್ತೆ ॥ ಮೂಲವಾಗಿಹ ಪ್ರಾಣವಾಯ್ವಾ । ಭೀಲವೃತ್ತಿಯ ಸಡಲಿಸುತೆ ಸ । ಲ್ಲೀಲೆಯಿಂ ಶಿವಲಿಂಗಪ್ರಾಣನುಮೆನಿಸಿ ಭವಭಾರಂ ॥ ೩೯ ॥

ನೀಗಿಜೀವನ್ಮುಕ್ತಿಕಾರಣ । ವಾಗಿರುವನಿಜವೀರಶೈವ ಸು । ಯೋಗರಾಹಸ್ಯಂಗಳೆಲ್ಲವ ನೋಜೆಯಿಂ ತಿಳುಹಿ॥ಬೇಗದಿಂತೀರ್ಥಪ್ರಸಾದ ಸು । ಭೋಗನಂಮಾಡಲ್ಕೆ ನಿಜವೈ । ರಾಗಿಯೆನಿಸುವ ಪರಮಚರಬಸವಾರ್ಯತಕ್ಷಣದಿ ॥ ೪೦ ॥

ನಿರುಪಮಾನಾನಂದಪರವಶ । ಭರಿತಚೇತಸ್ಸರವೈಭವ ।ನಿರ ತಿಶಯ ನಿರ್ಗುಣನಿರಘ ನಿಸ್ತುಲಸುಖಾದ್ಯಂತ ॥ ವಿರಹಿತಾವ್ಯಯ ಬ್ರ ಹ್ಮಪಾಗಿಪ । ಪರಮಲಿಂಗವಕರುಣಿಸಿದ ಶ್ರೀ । ಪರಮಗುರುವರ ಚೆನ್ನವೀರೇಶ್ವರನಪಾದಕ್ಕೆ ॥ ೪೧ ॥

ಎರಗಿನಿಮ್ಮಕೃಪಾತಿಶಯದಿಂ । ಹರಿವಿರಿಂಚಿಗಳಿಂಗೆ ನಿಲುಕದ। ಪರಮಶಿವಲಿಂಗದಸಕೀಲನು ತಿಳಿದುಸಂತತದೆ ॥ ಧರೆಯೊಳಗೆನಾಂ ಧನ್ಯನಾದೆನು । ವರಗುರುವೆ ಮದ್ಗುರುವೆದೀಕ್ಷಾ । ಗುರುವೆಯೆಂದು ರುತರದಿಸ್ತೋತ್ರವ ಗೈದುಮುದದಿಂದೆ ॥ ೪೨ ॥

ಬಳಿಕಗುರುಚರರಿಂಗೆತೃಪ್ತಿಯ । ನಲವಿನಿಂದಲಿಗೊಳಿಸಿ ದೀಕ್ಷೆ ಯ । ನೊಲವಿನಿಂದಲಿಗೈದ ಶ್ರೀಗುರುಗಳಿಗೆದಕ್ಷಿಣೆಯಂ ॥ ಸಲೆಸಮ ರ್ಪಿಸಿ ಪರಮಪರಕೆಯ । ನಿಲದೆಪಡೆದುರುಭಕ್ತಿಯಿಂ ಸದ । ಮಳದ ಗುರುಗಳನ್ನೈದೆ ಬೀಳ್ಕೊಟ್ಟುರುಸುಖದಿವಿರ್ದಂ ॥ ೪೩ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ। ಕ್ಷರಗಳಲಿ ಷಟ್ಟಕ್ಕರದ ಘನದಂತೆತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು ಮುದದಿಕೇಳ್ವುದು ಮೂರನೆಯಸಂಧಿ ॥ ೪೪ ॥

ಸಾರಸ್ಥ ಸಮಾನ ನಯನಾಬ್ಜೆ ಘನಕುಂದ ಸಮಗಂಧಿ ಸುಗುಣಾಕರೆ ನಿ ಶುಂಭಮದಜೈತ್ರೆ । ಕ್ರೂರದನುಜಾಳಿ ಭಯನಾಶಿನಿ ಮಹಾತ್ಮೆ ಭುವನೇಶ್ವರಿ ಕಿರೀಟ ನುತೆ ಸಿದ್ಧಗಣಪಾಲೆ ॥ ಸೂರಿಗಣಸಂಘೆ ಫಣಿಭೂಷಣೆ ತ್ರಿಣೇತ್ರಿಭಸಿತಾಂಗೆ ವರ ಮಾರಿ ನರಸಿಂಹನುತಿಪಾತ್ರೆ । ಧೀರೆ ಶಿವೆಸ್ವಾನುಭವೆ ಖೇಚರಿ ನಿರಂತರ ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೪೫ ॥



ಸಂಧಿ ೩ ಕ್ಕಂ ಪದ ೧೪೪ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.

॥ ಶ್ರೀ ಶಶಿಶೇಖರಾಯನಮಃ ॥

# ನಾಲ್ಕನೆಯ ಸಂಧಿ.

—(卐)—

ಸೂಚನೆ ॥ ಪರಮು ಚರಬಸವಾರ್ಯ ಬರುತಿಹ ।
ಪರಮುಸದ್ಭಕ್ತರಿಗೆ ನೀತಿಯ ।
ನರುಹುತಂ ನಿತ್ಯದಲಿ ಪರಿಣಯಮಾಗಿ ಸುಖಮಿರ್ದಂ ॥

ಹರನೆಗೌರೀವರನೆಗಂಗಾ । ಧರನೆಭವಭಯಹರನೆ ಶಿತಿಕಂ। ಧರನೆಚರ್ಮಾಂಬರನೆ ಪುಣ್ಯಾಕರನೆಸುಖಕರನೆ ॥ ತರಣಿಶಶಿಶೇಖರನೆ ವರ್ಣನೆ। ಪರಮಧನಪತಿಸಖನೆ ಸೋಮನೆ । ಸರುವಸುರಕುಲಸಾರ್ವಭೌಮನೆ ಸತತ ನುತಿಸುವೆನು ॥ ೧ ॥

ಅಲಘುಶ್ರೀಗುರು ಪೂಜ್ಯಪಾದರ। ತೊಳಪಕರದಿಂದೀಕ್ಷೆಪೊಂದಿದ । ಬಳಿಕಚರಬಸವಯ್ಯನವರ ವೃತ್ತಿಬದಲಿಸಿತು ॥ ನಿಲಯದೋವಾಸಿಸುತ ಸತತಂ । ಬಳಿಗೆಬರುತಿಹ ಜನರೊಡನೆತಾವ್ । ಬಳಸದಮಾತುಗಳ ಪ್ರತಿದಿನದುದಯಕಾಲದೊಳು ॥ ೨ ॥

ಭರದಿಹಾಸಿಗೆಯಿಂದಲೇಳುತ। ನಿರುಮಲದಜಲದಿಂದವದನವ ನೆರೆತೊಳೆದುಭಸಿತವನು ಧರಿಸುತ ವಚನಗ್ರಂಥಗಳ ॥ ಹರುಷದಿಂ ಪಠಿಸುತ್ತಮನನವ । ನುರುತರದಿಗೈದದರಪರಿಯೊಳು । ಚರಿಸುತನಿಂತಿರ್ದಡುಂ ಕುಂತಿರ್ದಡುಂ ಬಸವ ॥ ೩ ॥

ಎಸೆವಗೃಹಕೃತ್ಯಗಳ ಸಂತತ । ನೆಸಗುವಾಗಲುಬಸವನೋ ಲ್ । ಮಿಸುಪಸಕಲಸುಕಾರ್ಯಗಳಗೈವಾಗಲುಂ ಬಸವ ॥ಬಸವನಾಮವನುಚ್ಚರಿಸಿಯೇ। ವಸುಧೆಯೊಳುಪ್ರತಿಯೊಂದುಕಾರ್ಯವ । ನೆಗುತಿರ್ದರು ಬಸವನಾಮದೊಳಸಮ ಮನಮಿಟ್ಟು ॥ ೪ ॥

ನವವಯವುಪ್ರಾಪ್ತಿಸಿದೊಡಂಬಹು । ತವಕದಿಂ ದುರ್ವಿಷಯ
ವ್ಯಾಮೋ । ಹವನುಪೋಡಿಸಿ ಪರರನಾರಿಯರನ್ನುಮಾತೃವಿನೋಲ್ ॥
ತವೆತಿಳಿದುಪರಧನವಮುಟ್ಟದ । ಲವಿರತಂ ಬಂದತಿಥಿನಿವಹಕೆ ।ಭವ
ನ ಸಮರೆಂದರಿದು ನಿರ್ವಂಚನದಿ ಸೇವಿಸುತೆ ॥ ೪ ॥

ನಿತ್ಯಲಿಂಗಾರ್ಚನೆಯಮಾಡುತ । ಲತ್ಯಧಿಕಶಿವಭಜನೆಗೈಯ್ಯು
ತ । ಮತ್ತೆಪ್ರತಿನಿತ್ಯದೊಳು ಶಿವಕಥೆಗಳನು ಕೇಳುತ್ತೆ ॥ ಉತ್ತಮದೆ
ಗೃಹಕೃತ್ಯಗಳತಾ । ನರ್ಥಿಯಿಂ ಮಾಡುವುದೆಘನತರ । ವೆತ್ತನಿತ್ಯಾ
ಚಾರಮಾಗಿತ್ತಾಚರಂಗನಿಶಂ ॥ ೬ ॥

ನಿತ್ಯದರ್ಶನಕೆಂದುಬರುತಿ । ರ್ದುತ್ತಮದಭಕ್ತರಿಗೆನಲವಿಂ ।
ಸತ್ಯಸನ್ಮಾರ್ಗವನು ಪೇಳುತ್ತಿರ್ದನೆಂತೆನಲು ॥ ಚಿತ್ತವಿಟ್ಟಾಲಿಪುದು
ಭಕ್ತರೆ । ಪೊತ್ತುಪೊರಡುವಮುನ್ನತ್ಸರಿತದಿ । ಚಿತ್ತಜಾರಿಯಸ್ಮರಿಸು
ತೇಳ್ವರು ನಮಿಸಿಲಿಂಗಕ್ಕೆ ॥ ೭ ॥

ಭರದಿಮಲಮೂತ್ರಗಳತೀರಿಸಿ । ನೆರೆತೊಳೆದುವದನವನು ಭಸ್ಮ
ವ । ಧರಿಸಿ ಲಿಂಗಕೆನಮಿಸಿ ಬಳಿಕಾತಮ್ಮಯ ಗೃಹದ ॥ ನಿರುತಮೆಸ
ಗುವ ಕಾರ್ಯಗಳನತಿ । ತ್ವರಿತನೆರವೇರಿಸುತ ಕ್ರಮದಿಂ । ದಿರದೆ
ನೇಮಿತವಾದಪೊತ್ತಿಗೆ ಸ್ನಾನವನುಗೈದು ॥ ೮ ॥

ಹರುಷದಿಂಶಿವಪೂಜೆಯನುಗುರು । ತರದವಿಧ್ಯುಕ್ತದೊಲುಗೈ
ದುಂ । ಪರಮಮಾಹೇಶ್ವರರಕರೆಯಿಸಿ ಪೂಜಿಸುತಲವರ ॥ ಪಿರಿದು
ಭಕ್ತಿಯೊಳೆಡೆಬಡಿಸಿತಾ । ನಿರದೆಭೋಜನಗೈವುದುತ್ತಮ । ವರಿಯು
ವುದು ಶಿವಭಕ್ತರ್ಗಿದು ಸನ್ಮಾರ್ಗವಾಗಿಹುದು ॥ ೯ ॥

ಸತ್ಯವನೆಸಂತತದೆ ನುಡಿವುದು । ಮಿಥ್ಯತನಕೀಳ್ಪಿಕ್ಕಿ ನಡೆಯು
ವು । ದುತ್ತಮರಸಂಗಡವೆ ನಿರುತದೊಳಿರ್ಪುದದುಚಂದಂ ॥ ನಿತ್ಯದ
ಲಿಜಂಗಮವು ಗೃಹಕತಿ । ಯರ್ಥಿಯಿಂ ಬರುತಿರ್ಪುದೊಳ್ಳಿತು । ಮ
ರ್ತ್ಯಲೋಕಕಕೆಬಂದುಮುಕ್ತಿಯ ಸಾಧಿಪುದುಚಂದಂ ॥ ೧೦ ॥

ಕೆಡುಕುತನವನು ಮಾಡಬೇಡಿರಿ । ಯೊಡನೆ ಪರರಿಗೆ ಬಯ
ಸ್ಥಿತವನು । ವಡಸಿಬರೆಕಷ್ಟಗಳು ಧೈರ್ಯವನೆಂದಿಗುಂ ಬಿಡದ
ದೃಢತೆಯಿಂದಾಪ್ತರನು ಪೊರೆಯಿರಿ । ಸಡಗರದಿ ಶಿವಕಥೆಯ ಕ
ಳಿರಿ । ಯಡೆವಿಡದೆ ಹರಶರಣರೊಡನಾಟದೊಳೆ ಜೀವಿಸಿರಿ ॥ ೧೧ ॥

ಆಡಬೇಡಿರಿ ಪರರನಿಂದೆಯ । ಹೂಡಬೇಡಿರಿ ಗ್ರಾಮಕಲ
ವ । ಬೇಡಬಂದವರಿಂಗೆ ಯೆಂದಿಗು ನಾಸ್ತಿಯೆನಬೇಡಿ ॥ ಮಾಡಬೇ
ಡಿರಿ ಪರಮಲೋಭವ । ದೂಡಬೇಡಿರನಾಥಜನರನು । ಗಾಢದಿ
ಬಂದವರಿಗುಪಚಾರವನು ಗೈಯುವುದು ॥ ೧೨ ॥

ತಿರುಕರೆಲ್ಲರು ತಮ್ಮಹೊಟ್ಟೆಯ । ನೊರೆವುದಕೆ ಬರುತಿರ್ಪ
ನ್ನುತ । ಲರಿಯಬೇಡಿರಿಯವರು ನಿಮಗತಿಶಯದ ಪುಣ್ಯವನು ।
ತ್ವರಿತದಿಂದಲಿ ಕೊಡುವುದಕೆ ಬರು । ತಿರುವರೆನುತಂ ತಿಳಿದುಕೊ
ರಿ । ಹರುಷದಿಂ ಶರೆಜೋಳವನುನೀವ್ ನೀಡಲಾರದಲೆ ॥ ೧೩ ॥

ತಿರಿಯಲಿಕೆ ಬಂದಿರುವನೊಬ್ಬನ । ತಿರುಗಿ ಕಳುಹಿಸೆ ನೀವ
ಗೈದಿದ । ಪರಮಪುಣ್ಯವದೆಲ್ಲ ನಾಶವದಾಗಿ ಪೋಗುವದು ॥ ನೀ
ತಿಳಿದು ಧರ್ಮದಸುಮಾರ್ಗವ । ತಿರೆಯೊಳಗೆ ನಡೆಯುವುದು ಭಕ್ತ
ನ । ಪರಮುತರ ಕರ್ತವ್ಯಮಾಗಿರುತಿರ್ಪುದಿದು ನೋಡೆ ॥ ೧೪ ॥

ಅಂಗಲಿಂಗವು ಲಿಂಗವಂಗವು । ವಂಗಲಿಂಗದ ಸಾಮರಸ್ಯವ
ನಿಂಗಿತದೊಳರಿಯುತ್ತ ಲಿಂಗದಮುಖವು ಜಂಗಮವು ॥ ಜಂಗಮ
ತೃಪ್ತಿಸಲು ಲಿಂಗಕೆ । ಪಿಂಗದಲೆ ಘನತೃಪ್ತಿಯಪ್ಪುದು । ವಂಗಹೀ
ನುಮಾದೊಡಂ ಶಿವನೆಂದು ತಿಳಿಯುವುದು ॥ ೧೫ ॥

ಧನವಿಹೀನರು ಕೆಲರು ವಿದ್ಯಾ । ಧನವಿಹೀನರು ಕೆಲರು ಸ
ತ್ಪಿಕ । ಗುಣವಿಹೀನರು ಕೆಲವರಿರುವರು ಜಗದೊಳಗೆ ನೋಡೆ ॥ ಆ
ತರದರಿಂದವರನೆಲ್ಲರ । ಮನದೊಳಿಚಿಕೆಗೆ ತಾರದಲೆ ನೀವ್ । ಬಿನ
ದಿಂದವರನ್ನುದೂಡದೆ ಸಹಯವೀಯುವುದು ॥ ೧೬ ॥

ಬಡವರೆಲ್ಲರು ಧನದಭಾವದ । ಕೆಡುಕಿನಿಂ ಕೊರಕೊರಗಿ ಹ
ಸಿವೆಯು । ತಡೆಯಲಾರದೆ ಮರುಗಿ ಗೋಳಿಡುತಿಹರು ಸಂಕಟದಿ ॥
ಕೆಡುಕರವರೆಂದೆಣಿಸುತವರನು । ಕಡು ನಿರಾಕರಿಸದಲೆ ಧನವ । ನ್ನೊ
ಡನೆ ಮಿಗೆವಿಶ್ವಾಸದಿಂದಿತ್ತುದ್ಧರಿಪುದವರಂ ॥ ೧೭ ॥

ಓದು ಕಲಿಯದ ಕಲಿತರದರಾ । ನೋದವರಿಯದ ಮೂರ್ಖರಿ
ಹರು ಘು । ವಾದಮಾಡುವ ಜ್ಞಾನಹೀನರು ವಸುಧೆಯೊಳಗಿಹರು ॥
ಮೇದಿನಿಯೊಳಿವರುಗಳ ಪಶುಸಮ । ವಾದವರು ದಿಟವೆಂದು ತಿಳಿ
ಯದೆ । ಸಾದರದಿ ಸದ್ವಿದ್ಯೆಬೋಧಿಸಿ ಸಲಹುವದು ಸತತಂ ॥ ೧೮ ॥

ನೀತಿಧರ್ಮದ ಮರ್ಮವರಿಯದೆ । ನೀತಿಗೆಡುವಾಕರ್ಮವೆಸ
ಗುತೆ । ಪಾತಕದಿ ಪರಿತಪಿಪ ಪಾಪಿಗಳಿಹರು ಲೋಕದೊಳು ॥ ಪಾತಕಿ
ಗಳೆಂದೆಣಿಸುತವರನು । ಭೂತಲದಿ ತೃಣಿಕರಿಸದಲೆ ನೀವ್ । ನೀತಿ
ವಿದ್ಯೆಯ ಮುದದಿ ತಿಳುಹುತ್ತುದ್ಧರಿಪುದವರಂ ॥ ೧೯ ॥

ವಿದ್ಯೆಯಿಂ ಸದುನಡೆಯು ಬರ್ಪುದು । ವಿದ್ಯೆಯಿಂ ಸದುನುಡಿ
ಯು ಬರ್ಪುದು । ವಿದ್ಯೆಯಿಂ ಸರ್ವಾರ್ಥಸಿದ್ಧಿಗಳಿರದೆ ದೊರೆಯುವ
ವು ॥ ವಿದ್ಯೆಯುಳ್ಳವದಾಸನಾಗನು । ವಿದ್ಯೆಯುಳ್ಳವ ಸುಖವ ಪಡೆವ
ನು । ವಿದ್ಯೆಯುಳ್ಳವ ಸರ್ವರನು ತನ್ನಂತೆ ಕಾಣುವನು ॥ ೨೦ ॥

ವಿದ್ಯೆಕಲಿತವ ಕುಲಜನೆನಿಪನು । ವಿದ್ಯೆಕಲಿತವ ಜಗವ ಗೆಲಿವ
ನು । ವಿದ್ಯೆಕಲಿತವ ಸ್ವಾವಲಂಬನದಿಂದ ಜೀವಿಪನು ॥ ವಿದ್ಯೆಯುಳ್ಳ
ವನೇ ಸುಚತುರನು । ವಿದ್ಯೆಯುಳ್ಳವನೇ ಸುಶೀಲನು । ವಿದ್ಯೆಯೇ
ನಿಜವಾದಶಾಂತಿಯ ಕೊಡುವ ವಸ್ತುವದು ॥ ೨೧ ॥

ವಿದ್ಯೆಯೇ ಬಹುಶ್ರೇಷ್ಠಧನವದು । ವಿದ್ಯೆಯೇ ಕೀರ್ತಿಯನು
ತರುವುದು । ವಿದ್ಯೆಯೇ ಮೂರನೆಯ ಕಣ್ಣಾಗಿಹುದುಜಗದೊಳಗೆ ॥
ವಿದ್ಯೆಯೆಂಬುದು ಕಲ್ಪತರುವದು । ವಿದ್ಯೆಚಿಂತಾರತ್ನವೆನಿಪುದು ।
ವಿದ್ಯೆಯನು ಲೋಕದೊಳು ಸರ್ವರು ಸಂಗ್ರಹಿಸುತಿಹುದು ॥ ೨೨ ॥

ವಿದ್ಯೆಯಿಂದಲೆಬುದ್ಧಿವರ್ಧನ । ವಿದ್ಯೆಯಿಂದುದ್ಯೋಗಲಭಿಪ್ಪ
ದು । ವಿದ್ಯೆಯಿಂದಿಹಪರದಸುಖಗಳು ಬಿಡದೆಲಭಿಸುವವು ॥ ವಿದ್ಯ
ಯೇಲೋಕದಹಿತೈಷಿಯು । ವಿದ್ಯೆಯೇಘನಮೋಕ್ಷಸಾಧನ । ವಿದ್ಯೆ
ಯುಳ್ಳವ ಸಕಲಸದ್ಗುಣಯುಕ್ತನಾಗುವನು ॥ ೨೩ ॥

ವಿದ್ಯೆಯಿಲ್ಲದಬುದ್ಧಿಹೀನನು । ಶುದ್ಧಪಶುವಾಗಿಹನುಲೋಕ
ದೊ । ಳಿದ್ದುನಿಷ್ಫಲವೆನಿಪಕ್ರಿಮಿಕೀಟಗಳ ಜನ್ಮದೊಲು ॥ ವಿದ್ಯೆಯ
ನುಸಾಧಿಸಿಯೆ ಮನುಮುನಿ । ಸಿದ್ಧಪುರುಷಾದಿಗಳು ಪರಮಪ್ರ । ಸಿ
ದ್ಧವಾಗಿಹ ಜಸವಪಡೆದುರು ರಾಜಿಪರುನಿರುತಂ ॥ ೨೪ ॥

ಸದ್ಯದೊಳುಕಲಿಯುತ್ತಲಿರುತಿಹ । ವಿದ್ಯೆಯುದರಂಭರಣಕಾ
ಗಿಯೆ । ಸಾಧ್ಯವಿಹುದಿದರಿಂದಜನ್ಮವು ಸಫಲವಾಗದದು ॥ ಸಿದ್ಧಿಪು
ರುಷರ ನಡೆಯುಬರದಿಹ । ವಿದ್ಯೆಯದುನಿಜವಿದ್ಯೆಯಲ್ಲವು । ವಿದ್ಯೆ
ಯುಳ್ಳವನಿಂಗೆಭವಭಯವಿರಲೆ ಕೂಡದದು ॥ ೨೫ ॥

ಬದ್ಧಭವಬಂಧನವಹರಿಯುವ । ಸಿದ್ಧಿಯನುಕಲಿಸುವುದೆ ವಿ
ದ್ಯೆಯು । ಶುದ್ಧಜಗದೀಶ್ವರನಪಾದದ ಭಕ್ತಿಮಾರ್ಗವನು ॥ ಹೃದ್ಯ
ಮಾಗಿಯೆಬೋಧಿಸುತ್ತಿಹ । ವಿದ್ಯೆಯೇ ನಿಜವಾದವಿದ್ಯೆಯು । ವಿದ್ಯೆ
ಗಿಂ ಮಿಗಿಲಾದವಸ್ತುವು ತ್ರಿಭುವನದೊಳಿಲ್ಲಂ ॥ ೨೬ ॥

ಧರಣಿಯೊಳಗಿನಿತಸಮಘನತೆಯು । ನಿರದೆಪೊಂದಿದ ವಿದ್ಯೆಯ
ನು ಮನ । ವಿರಿಸಿಸತತಭ್ಯಾಸವನು ಗೈದದರಪರಿಯಂತೆ ॥ ವರವಿವೇ
ಕದಿನಡೆದು ನಿಮ್ಮಗ । ಳುರುತರದಜನ್ಮವನುತ್ವರಿತದಿ । ಪರಮಸಾ
ರ್ಥಕಗೊಳಿಪ ಸುಜನತ್ವವನು ಪೊಂದುವದು ॥ ೨೭ ॥

ಮರವುಸ್ವಾರ್ಥವಬಯಸದೆಂದಿಗು । ಬಿರುಬಿಸಿಲಿನೊಳುನಿಂದು
ಜನರನು । ನೆರೆತಣಿಪುದನವರತನೆರಳಿಂ ಧರೆಯೊಳಗೆನೋಡೆ॥ ಪರಮ
ಸುಜನರು ಹಸುವುತೃಷೆಗಳ । ಮರೆದು ಸಂತತಲೋಕಸೇವೆಯೊ । ಳಿ
ರುವರಿದುನಿಜ ಸುಜನರೀಧಾರುಣಿಗೆ ಭೂಷಣರು ॥ ೨೮ ॥

ಕೆಸರೊಳಗೆ ತಾವರೆಯು ಕಲ್ಲೊಳು । ಮಿಸುಪ ಪೊಸರತ್ನಂಗಳ
ವುಮಿಗೆ । ಯೆಸೆವ ಕಾಡಮರಂಗಳೊಳು ಶೋಭಿಸುವ ಸಿರಿಕಂಡಂ ॥
ಅಸಮಸಾಗರದೊಳಗಮೃತವು । ಸಸಿನೆಯಿಂ ಪುಟ್ಟುವೊಲು ಸುಜನ
ರು । ವಸುಧೆಯೊಳುನರರೊಳಗೆ ಪುಟ್ಟುವಲೋಕಪ್ರಿಯರೆನಿಸಿ ॥೨೯॥

ಸುಜನರ ಸುಸಂಗವದು ದೊರೆದಿರೆ । ತ್ರಿಜಗದೊಳಗೆಣೆಯುಂಟೆ
ಯುವರಿಗೆ । ನಿಜದಿನೋಡಲು ಸರ್ವದಾಸುಖದೊಳಗೆ ಮೆರೆಯುವರು॥
ಅಜಹರೀಂದ್ರಾದಿಗಳುಸಹ ಸಲೆ । ಸುಜನರನು ಭಜಿಸುತ್ತ ದೃಢದಿಂ।
ನಿಜಸುಖದೊಳಿರುತಿಹರೆನುತ್ತಸುರುವವು ಶಾಸ್ತ್ರಗಳು ॥ ೩೦ ॥

ಮೃದುಲತರ ಭಾಷೆಗಳನಾಡುತ । ಸದುವಿನಯದಿಂದ್ಯೆದೆ ಚರಿ
ಸುತ । ವಿದಿತಯಶ ಘನವಿಭವಗಳ ಪಡೆಯುತ್ತ ಸಂತಸದೆ ॥ ಬುಧರ
ಸೇವಕನಾಗಿ ನಿರ್ಮಲ । ಹೃದಯದಿಂ ವರ್ತಿಸುತ ಸರ್ವದ । ಮದ
ವಿರಹಿತನುಮಾಗಿ ರಾಜಿಸುವವನೆ ಘನಸುಜನಂ ॥ ೩೧ ॥

ಮಾತಿನೊಳು ಘನಸತ್ಯತೆಯು ತ । ನ್ನಾತುಮದೆ ನೆರೆನಿರ್ಮಲತ್ವ
ವು । ನೀತಿಯುಂ ಬಿಡದಂತೆ ನಡೆಯುತಲಿರ್ಪುದಲ್ಲದೆಯುಂ ॥ ಭೂತ
ದಯೆ ಜೀವಿಗಳೊಳನಿಶ ಪು । ನೀತವಾದವಿಚಾರನಿಕರದೆ । ಭೂತಳದಿ
ಮೆರೆವವನೆ ಘನಸಜ್ಜನನುಮೆನಿಸುವನು ॥ ೩೨ ॥

ಪರರಿಗುಪಕಾರವನು ಮಾಳ್ಪುದು । ಪರರಿಗನ್ನೋದಕವನೀವು
ದು । ಪರರಿಗನಿಶಂ ಸುಖವಕೊಡುವುದು ಪರರ ದುಃಖಗಳ ॥ ಪರಿಹರಿ
ಸುವುದು ಪರರ ಸಂತತ । ಸರಿಸಮಾನತೆಯಿಂದ ಕಾಣ್ಬುದು । ಪರರ
ಮನದಿಂಗಿತದಪರಿನಡೆಯುವುದು ಸುಜನತ್ವಂ ॥ ೩೩ ॥

ಮನವಚನಕಾಯದಲಿ ಪಾಪವ । ನೆನೆಯ ನುಡಿಯನು ಮಾ
ಡನನ್ಯರು । ತನಗೆಯಪಕಾರವನು ಮಾಡಲು ಪೂರ್ವಕೃತವೆಂಬ ॥
ತನುಜರನುಜರು ತಾಯಿತಂದೆಗ । ಳೆನಿತು ತನ್ನನು ನುತಿಸಿನಿಂದಿಸ ।
ಲನುದಿನದೊಳೊಂದೇ ವಿಧಾನದೊಳಿಪ್ಪ ಸಜ್ಜನನು ॥ ೩೪ ॥

ಬಲ್ಲವರಬೆಸಗೊಂಬ ಶಾಸ್ತ್ರದೊ। ಳುಳ್ಳಸಾರವತಿಳಿವ ಸಾಧು ಗ। ಳಲ್ಲಿಸಂಗವ ಪಡೆವನವರಾಚರಣೆಯಲಿನಡೆವ ॥ ಸಲ್ಲಲಿತಸದ್ವಾ ಸನೆಯ ಸಲೆ। ಮೆಲ್ಲನಭ್ಯಾಸವನು ಮಾಡುವ। ನೊಳ್ಳಿತಹ ಮಾರ್ಗ ದೊಳುನಡೆಯುವ ಪರಮಸಜ್ಜನನು ॥ ೩೫ ॥

ತರುಣಿಯರು ತನ್ನಿದಿರೊಳೆಸೆದಿರೆ। ಕುರುಡನಂತಿಹ ಪರರು ನಿಂದಿಸೆ। ಪಿರಿದು ಬಧಿರನತೆರದೊಳಿರ್ದದಕೇಳನವನೊಲಿದು ॥ ಕರವಿ ಕಲನಂದದಲಿ ಹಿರಿದಹ। ಪರರಧನವನುಹಿಡಿಯ ದುಷ್ಟರು। ಜರಿ ಯೆತಾಹಿಂತಿರುಗಿ ಜರಿಯನು ಪರಮಸಜ್ಜನನು ॥ ೩೬ ॥

ಯಡರಿನಲ್ಲೆದೆಗುಂದದುಬ್ಬದೆ। ಪೊಡವಿಗಧಿಪತಿಯಾಗಿ ಹಿಗ್ಗ ದೆ। ಬಡತನಗಳಡಸಿದರೆ ಕಂಗೆಡದನಿಶ ಭೂತಲದೊಳ್ ॥ ದುಡಿದ ವಿತ್ತದಿಗರ್ವಿಸದೆ ವರ। ಮಡದಿಮಕ್ಕಳುಮನೆವಡವೆಯಲಿ। ಕಡು ಮಮತೆಯಿಲ್ಲದಲೆ ಮೃಡನನುಭಜಿಪ ಸಜ್ಜನನು ॥ ೩೭ ॥

ಈವಿಧದ ಘನಸಜ್ಜನತೆಯ। ನ್ನೀವಸುಧೆಯೊಳಗನಿಶ ಶ್ರಮ ದಿಂ। ದೋವಿಸಂಪಾದಿಸುತೆ ತ್ರೈಜಗದೀಶನಾಗೆಸೆವ ॥ ಭಾವಜಾರಿ ಯ ಕೃಪೆಯಪಡೆದುರು। ಶೀವಿದಾನಂದದೊಳು ನಿಮ್ಮಯ। ಪಾವ ನದಜನ್ಮವನುಸಲೆ ಸಾರ್ಥಕವಗೊಳಿಸಿಕೊಳೆ ॥ ೩೮ ॥

ಆಗಲೇನೀವ್ ಧನ್ಯರೆನಿಸುವಿ। ರಾಗಲೇಮಿಗೆ ಮಾನ್ಯರೆನಿಸು ವಿ। ರಾಗಲೇ ಧರ್ಮಾಭಿಮಾನಿಗಳೆನಿಸುವಿರಿ ದಿಟದಿ ॥ ಆಗಲೇ ತ್ಯಾ ಗಿಗಳುಮೆನಿಸುವಿ। ರಾಗಲೇ ಭೋಗಿಗಳುಮೆನಿಸುವಿ। ರಾಗಲೇ ಘನ ಕರ್ಮಯೋಗಿಗಳೆನಿಸಿ ಬಾಳುವಿರಿ ॥ ೩೯ ॥

ಇಂತುಬೋಧಿಸುತಿರ್ದ ಭಕ್ತರ। ಸಂತತದಿ ಧನ್ಯರನುಗೈದು ಸ। ಮಂತುರಾಜಿಪ ಪರಮ ಚರಬಸವಾರ್ಯಗೆವ್ವನವು ॥ ಕಂತು ಹರಕೃಪೆಯಿಂದ ಪ್ರಾಪ್ತಿಸೆ। ಶಾಂತಿಪ್ರಿಯರಾದವರಪಿತೃಗಳು। ಸಂತಸದಿ ಪರಿಣಯವನೆಸಗಲಿಕೆತ್ನವೆಸಗಿದರು ॥ ೪೦ ॥

ಮುದದಿತಮ್ಮ್ರಿಯ ಗ್ರಾಮದೊಳು ಕೆಲ । ಸದುಗೃಹಸ್ಥರಕೂಡಿ ತ್ವರಿತದಿ । ಮದನಹರಸಮರೂಪ ಚರರಿರುತಿರುವ ಗ್ರಾಮಗಳೋಳ್ ॥ ವಿದಿತಸದ್ಗುಣಭರಿತಕನ್ಯೆಯು । ಸದುವಿನಯದಿಂಕೇಳಿ ಪುಡುಕುತ । ಸದಮಳವಸಗರಕ್ಕೆಬಂದರು ನಲವಿನಿಂದಾಗಳ್ ॥ ೪೧ ॥

ವಿನುತವಾದಾಗ್ರಾಮದೊಳು ಸದು । ಗುಣಮಣಿಗಣಾಚಾರಿಮತದಧಿ । ಪನುಮೆನಿಸಿರಾಜಿಸುವ ಗುರುಬಸವಯ್ಯನ ಗೃಹದೆ ॥ ಅನುಪಮಿತವಹ ಕನ್ಯೆಯಿರ್ಪುದು । ಮೆನುತೆ ತಿಳಿದವರಾಲಯಕೆಬರೆ । ಘನಸವರ ನೆರೆನೋಡಿ ಕರಗಳಮುಗಿಯುತಾಸನಮಂ ॥೪೨॥

ತ್ವರಿತದಿಂದಿಕ್ಕುತಲಿಯಮ್ಮ್ರಯ । ವರಗೃಹಕೆತಾವೀಗ ಬಂದಿಹ । ಪರಮಕಾರ್ಯವದೇನು ಪೇಳುವುದೆಂದು ಬಿನ್ನೈಸೆ ॥ ಮೆರೆಯುತಿರ್ಪನವಾರವೆಮ್ಮ್ರದು । ಹರುಷದಿಂದಲಿ ತಮ್ಮ್ರಗೃಹದೊಳಗಿರದೆ ಬೀಗತನಕ್ಕೆ ಬಂದಿಹೆವೆಂದು ಪೇಳಲ್ಕೆ ॥ ೪೩ ॥

ರೋಗಿಬಯಸಿದೌಷಧವೆತಾ । ಬಾಗಿಲಂಕೇಳುತ್ತ ಬಂದವೊ । ಲಾಗಿಹುದು ಮತ್ತೇನುಕೇಳುವುದಾಗಲೆಂದೆನಲು ॥ ಬೇಗ ಗ್ರಾಮದಜನರನೆಂಟರ । ರಾಗದಿಂಕರೆಸುತ್ತ ಪೂಗೀ । ನಾಗವಲ್ಲಿ ಸುಭಸ್ಮಘುಟ್ಟಿಗಳನ್ನು ತರಿಸುತಲಿ ॥ ೪೪ ॥

ಬಗೆಯಸೂತ್ರಂಗಳನು ಬಹುಪರಿ । ಬಗೆದುನೋಡಲು ಭಿನ್ನವಾಗಿರ । ಲಗಣಿತದಸಂತಸದಿ ಸದುಗುಣಿ ಪುತ್ರಿಯನುತಂದು ॥ ಸೊಗಯಿಸುವ ಚರಣಗಳೊಳೆಡಪಲ್ । ಮುಗುಳಶರಸತಿಗಿಂದರೂಪಿನೊಳಲಘು ಸುಂದರಳಿರ್ಪಳೆಂದೆನುತಾಗ ಪೊಗಳುತ್ತೆ ॥ ೪೫ ॥

ಪರಮಪಂಚಸುಫಲಗಳನು ಬಹು । ಹರುಷದಿಂದುಡಿಯೊಳಗೆ ಮಡಗು । ತ್ತುರುವಿರಾಜಿಸ ತಲೆನೆಗವಿಮುಂದಿರಿಸಿಕೊಂಡಾಗ ॥ ಕರಕಮಲವಂನೋಡಿಯೆಹೌವ್ವನ । ಕರಮೆಸೆವರೂಪಾದಿಲಕ್ಷಣ । ನೆರೆ ತಿಳಿದು ವರಜನ್ಮನಾಮವ ಕೇಳಿಕೊಟಿಗಳ ॥ ೪೬ ॥

ಗುಣಿಸಿನೋಡಲ್ಕೊಳಿತು ಬರಲಾ । ಗನುನಯದೆ ಘಣಿಗಿಟ್ಟು
ಭೂತಿಯ । ನನುಪಮದ ನೂತನದ ವಸನವನುಡಿಸಿ ಪರಿಪರಿಯ ॥
ಕನಕದೊಡವೆಯನಿಟ್ಟು ಶೋಭನ । ಘನಹರುಷದಿಂಪಾಡಿ ಸಕ್ಕರೆ।
ಜನನಿಕರಕುರುಬೀರಿ ದಕ್ಷಿಣೆ ಜಂಗಮರಿಗಿತ್ತು ॥ ೪೭ ॥

ಕಡುವಿಭವದಿಂದೆಲ್ಲರಿಗೆ ಕರಿ । ಗಡುಬು ಮೃಷ್ಟಾನ್ನಗಳನುಣಿ
ಸುತೆ । ವುಡುಗರೆಯನಿತ್ತಿರದೆ ಪರವೈಶಾಖಮಾಸದೊಳು ॥ ಇಡು
ವುದೊಳ್ಳಿತು ಲಗ್ನವೆನುತಲಿ । ಸಡಗರದಿ ತಮ್ಮೊಳಗೆ ನಿರ್ಧರಿ । ಸೊ
ಡನೆತಮ್ಮಯ ಗ್ರಾಮಕತಿಮುದದಿಂದಲೈತಂದರ್ ॥ ೪೮ ॥

ಆದಿನವೆ ಮೊದಲಾಗಿ ಲಗ್ನಕೆ । ಗೋಧಿತಂಡುಲ ಬೇಳೆ ಗುಡ
ಮೊದ । ಲಾದ ಸಾಹಿತ್ಯಗಳನೆಲ್ಲವಭರದಿ ಸಿದ್ಧವನು ॥ ಸಾದರದಿಗೈ
ದಿರದೆ ಪ್ರತಿದಿನ । ಮೋದದಿಂ ವೈಶಾಖಮಾಸದ । ಹಾದಿಯನು
ನೋಡುತ್ತ ಕುಳಿತಿರೆ ಬಂದುದದು ಭರದಿ ॥ ೪೯ ॥

ನೆರಹುತೆಲ್ಲಾಸರಕು ಕರೆಸುತ । ಪರಮಬಾಂಧವರನ್ನು ತವಕ
ದಿ । ಹರುಷದಿಂ ಬರಮಾಡಿ ಜ್ಯೋತಿಷ್ಕರನು ನಿರ್ದೋಷ ॥ ಇರುವ
ಲಗ್ನವನಿಟ್ಟುಕೊಡಿರೆಂ । ದಿರದೆ ಕೇಳಲ್ಕವರು ಶೋಧಿಸಿ । ಗುರುವು
ಲಗ್ನದಿ ತರಣಿದಶಮದೆ ಕುಜನು ಲಾಭದೊಳು ॥ ೫೦ ॥

ಇರುವಲಗ್ನವ ನೋಡಿಕ್ರಮದಿಂ । ಗಿರಿಜೆಶಂಕರಯೋಗವೆ
ನ್ನುತೆ । ಕರೆವರೀಯೋಗದೊಳು ಲಗ್ನವನೆಸಗೆ ಬಹುವಿಧದ ॥ ಸಿರಿ
ಸುತರುಸತ್ಸಂಪದವುಮಿಗೆ । ದೊರಕೊಳುವುದದರಿಂದಲಿದರೊಳೆ ।
ವಿರಚಿಪುದು ಲಗ್ನವನು ನೀವೆನಲಾಗ ನೆರೆನಂಬಿ ॥ ೫೧ ॥

ಎಸೆವಲಗ್ನದ ಪತ್ರಿಕೆಗಳೊಳು । ಮಿಸುಪ ಶ್ರೀವೈಶಾಖಮಾ
ಸದ । ದಶಮಿಯೊಳು ಶ್ರೀಶೀಲವಂತಾಭಿದರವರಪುತ್ರಂ ॥ ಅಸಮ
ಬಸವಾರ್ಯನಿಗು ಸಗರದ । ಪಶುಪತಿಯ ವರಭಕ್ತ ಘನಗುರು ।
ಬಸವನಾಮಾಭಿದರಪುತ್ರಿ ಸುಸೂಗಮಾಂಬಿಕೆಗೂ ॥ ೫೨ ॥

ಮೆರೆಯುನೀ ಸುಮುಹೂರ್ತದೊಳು ಗುರು । ಹಿರಿಯರೀಲಗ್ನ ವನುಗ್ಗೈಯಲು । ಹರುಷದಿಂ ನಿಶ್ಚಿತವಮಾಡಿರುತಿರ್ಪರದರಿಂದೆ ॥ ಇರದೆಯೀಸುಮುಹೂರ್ತಕುರುತರ । ತ್ವರಿತತಮ್ಮೈಯ ಮಿತ್ರಬಾಂಧವ । ಪರಿಕರದೊಳಾಗನಿುಸುತಕ್ಷತೆ ತಳೆದುವಧುವರರ ॥ ೫೩ ॥

ಪರಸಿಪೋಗುವುದೆನುತೆ ಗುರುಹಿರಿ । ಯರಿಗೆಯಾಪ್ತೇಷ್ಟರಿಗೆ ಲಿಖಿಸಿಡ । ಪರಮಲಗ್ನದಪತ್ರಿಕೆಗಳಂ ಕಳುಹಿಂಭರದಿಂದೆ ॥ ಪುರದ ಜನಗಳ ಮಿತ್ರಬಂಧುಗ । ಳುರುಮುದದಿ ಬಸವಾರ್ಯನೊಡನತಿ । ಭರದಿ ಕರೆದುಕೊಳುತ್ತೆ ವೈಭವದಿಂದೆ ರಥಗಳೊಳು ॥ ೫೪ ॥

ಚಾರುವಾದ್ಯಂಗಳ ಸುರಭಸದಿ । ದಾರಿಪಿಡಿಯಲು ಸಗರಗ್ರಾಮದ । ಪಾರಶುಭಶಕುನಗಳಪಾದವು ಮನದಸಂಶಯವು ॥ ದೂರ ಮಾಗುವತೆರದಿ ಬಹುಪರಿ । ದಾರಿಯೊಳು ಸುವಿನೋದದಿಂದಲಿ । ಸಾರಭೋಜನಗೈದು ವಿಶ್ರಾಂತಿಯೊಳು ತಲುಪಿದರು ॥ ೫೫ ॥

ಇವರು ಬರ್ಪುದರೊಳಗೆ ಸಗರದಿ । ವಿವಿಧಬಣ್ಣದ ಚಿತ್ರಗಳನುಂ । ಜವದೆ ಬರೆಯಿಸಿ ಭವನಮಂ ಶೃಂಗರಿಸಿ ತಳಿರುಗಳಿಂ ॥ ಪವಳವೌಕ್ತಿಕ ರೇಷ್ಮೆಜಾಲರಿ । ನಿವಹದಿಂ ಮೇಲ್ಕಟ್ಟು ಕಟ್ಟುತೆ । ಶಿವನಸದನವಿದೆಂಬುವೋಲೆಸೆವಂತೆ ಗೈದಿರ್ದರ್ ॥ ೫೬ ॥

ಹಂದರವ ರಚಿಸುತ್ತಲೊಂದೆಡೆ । ಸಂದಗೋಮಯದಿಂದ ಬಳಿದುರು । ಚಂದಳಿರತೋರಣವಕಟ್ಟಿ ಸುಬಂಧುಜನರೊಡನೆ ॥ ನಂದಿಮುಖಗೈದಖಿಳಮಂದಿಗೆ । ಸಂದಮೃಷ್ಟಾನ್ನದೊಳು ತಣಿಸುತೆ । ಬಂದಚರವೃಂದಕ್ಕೆ ದಕ್ಷಿಣೆಯಿತ್ತು ಸಂತೈಸೆ ॥ ೫೭ ॥

ಕವಿಗಮಕಿವಾಗ್ಮಿಗಳು ವರನಟ । ಸುವಿಟರುರುತರವೇದವೇತ್ತರು । ವಿವಿಧಶಾಸ್ತ್ರಜ್ಞರು ವಿವೇಕಿಗಳಾಪ್ತಬಂಧುಗಳು ॥ ಭವನನಿಭಚರಮೂರ್ತಿಗಳು ಮಿಗೆ । ಜವದಿ ಬಸವಾರ್ಯನ ಸುಲಗ್ನಕೆ । ಪ್ರವಿಮಳಾನಂದದೊಳು ಬಂದರು ಭವನಕಿಕ್ಕೆಲಿವೋಲ್ ॥ ೫೮ ॥

ವಿದಿತಬೀಗರು ಬಂದವಾರ್ತೆಯ । ಸದಯುಗುರುಬಸಪಯ್ಯ ಕೇಳು । ತ್ತಿದುರುಗೊಳಲೆಂದೆದ್ದು ಗ್ರಾಮದ ಸದುಗೃಹಸ್ಥರಮೇಣ್ ॥ ಬುಧಜನರ ಚರವರರಕೂಡಿ ಸು । ವಿಧವಿಧದ ವಾದ್ಯಗಳರಭಸದೆ । ಮುದದಿನಡೆತಂದಾಗವರನನು ಹಯದಮೇಲ್ಕಿಳಿಸಿ ॥೫೯ ॥

ನಲವಿನಿಂಕರತಂದು ನೇಮಿತ । ನಿಲಯದೊಳಗಿಳುಹುತ್ತ ತ್ವರಿತದಿ । ಬಳಿಕಲಗ್ನದಮಂಟಪವ ವಿರಚಿಸಿದರೇಂಪೇಳ್ವೆ ॥ ವಿಳಸಿತದ ಕಸ್ತುರಿಯಸಾರಣಿ । ಯಲಘುತರ ಕುಂಕುಮದಕಾರಣಿ । ಪೊಳೆವ ವಿಧವಿಧರಂಗವಲ್ಲಿಗಳಿಂದಲುಂಮತ್ತೆ ॥ ೬೦ ॥

ಚಿತ್ರಿತವದಾಗಿರ್ದುಶೋಭಿಪ । ಭಿತ್ತಿಯಿಂ ಪರಿಪರಿಯ ಹೂಗಳ । ಮೊತ್ತದಿಂ ಗಾಯಕರ ಮೃದುಮಧುರೋಕ್ತಸ್ವರದಿಂದಂ ॥ ಉತ್ತುಮದ ತೋರಣಗಳಿಂ ಘನ । ವೆತ್ತಸುಮಹಾರಗಳವಿಸರದಿ । ಮತ್ತೆಪರತರ ಧೂಪದೀಪಾರತಿಗಳಿಂದೆಸೆಯೆ ॥ ೬೧ ॥

ಗುರುಹಿರಿಯರುಗಳಿಂದ ಪರತರ । ಪುರಹರನಸಮರೂಪಚರರಿಂ । ಸರಸಸತ್ಕವಿನಿಕರದಿಂ ಪಂಡಿತರಮಂಡಳಿಯಿಂ ॥ ಸರಸಗೀತವ ಪಾಡುವವರಿಂ । ಮೆರೆವಶುಭದ್ರವ್ಯಂಗಳಿಂ ಘನ । ತರದೆ ವಿಧ್ಯುಕ್ತದೊಳು ಲಗ್ನವಗೈವವೈದಿಕರಿಂ ॥ ೬೨ ॥

ಕ್ಷೀರಘೃತಮಧುಶರ್ಕರೆಯು ಜವೆ । ಜೀರಕಂಗುಡದಧಿ ಸುತಂಡುಲ । ನಾರಿಕೇಳವು ತಳಿರುಖರ್ಜೂರಾದಿ ಪಣ್ಣುಗಳಿಂ ॥ ಸಾರತರಬಾಸಿಂಗಮುಕುರದಿ । ಚಾರುಕುಂಭಸ್ತಂಭವಿಸರದಿ । ಮೀರಿಮೆರೆದುದು ಲಗ್ನಮಂಟಪವೇನು ಬಣ್ಣಿಪೆನು ॥ ೬೩ ॥

ಆಗವರನನು ಕರೆದುಮೋದದಿ । ಬೇಗಮಂಗಳಸ್ನಾನಗೈಯಿಸಿ । ದಾಗಶ್ವೇತದುಕೂಲವನ್ನುಡಿಸುತ್ತ ಮುಖದೊಳಗೆ ॥ ಶ್ರೀಗೆನೆಲೆಯಾಗಿರ್ದಭೂತಿಯ । ರಾಗದಿಂದಲಿತಳೆದು ಪರತರ । ನಾಗಭೂಷಣನಕ್ಷಮಾಲೆಯ ಕೊರಳೊಳಗೆಧರಿಸಿ ॥ ೬೪ ॥

ತಲೆಗೆ ಜರತಾರಿಯರುಮಾಲವ । ನಿಲದೆ ನಿಲುವಂಗಿಯನು ಮೈಯ್ಯೊಳು । ನಲವಿನಿಂಧರಿಸುತ್ತೆಪೆಗಲೊಳು ಶಲ್ಲೆಯಂಪೊದಿಸಿ ॥ ಪೊಳೆವಬೆರಳಿಗೆಯುಂಗುರುಗಳಂ । ಗಳಕೆ ಮೌಕ್ತಿಕಸರಗಳಂಮಿಗೆ। ವಿಳಸಿತದಫಾಲಕ್ಕೆ ಬಾಸಿಂಗವನು ಧರಿಸುತ್ತೆ ॥ ೬೫ ॥

ಎಸೆವಮಲ್ಲಿಗೆ ಪಾರಿಜಾತದ । ಕುಸುಮಗಳಮಾಲೆಯನು ಕೊರಳಿಗೆ । ಸಸಿನೆಯಿಂದಲಿಹಾಕಿ ಕಸ್ತುರಿಗಂಧಗಳಧರಿಸಿ ॥ ಕುಸುಮ ಶರನೊಲು ಮಪುಪಳಿಗನಂ । ದಸಮತರ ಶೃಂಗರಿಸಿತಂದರು । ಮಿಸುಪಮಂಟಪದೊಳಗೆ ಶಾಸೆಯಹಸೆಯಮೇಲಿರದೆ ॥ ೬೬ ॥

ಹರುಷದಿಂಕುಳ್ಳಿರಿಸಲಾಗಳ್ । ಭರದಿಬಂದುದು ವರಮುಹೂರ್ತವು । ತ್ವರಿತವಧುವಂ ಸಿಂಗರಿಸಿತಹುದೆನುತಪೇಳಲ್ಕೆ ॥ ಪರಮಸ್ತ್ರೀಯರುಸೇರಿವಧುವಿಗೆ । ಪರಿಮಳೋದಕದಿಂದಮಜ್ಜನ । ಪೆರೆದು ದಿವ್ಯಾಂಬರವನುಡಿಸುತ ಕಂಚುಕವತೊಡಿಸಿ ॥ ೬೭ ॥

ಚಂದನವನೆರೆತೀಡಿ ಭಸಿತವ । ಚಂಧದಿಂಧರಿಸುತ್ತೆ ಫಣೆಯೊಳು । ಚಂದ್ರತಿಲಕವನಿಟ್ಟು ಪರಿಪರಿಭೂಷಣಗಳಿಂದಂ ॥ ಅಂದದಿಂ ಶೃಂಗರಿಸಲಾಗಳ್। ಸಂದಮುಹೂರ್ತವದಿರದೆ ಬಂದುದ । ನಂದುತಿಳಿದಾಚಾರ್ಯವಧುವನು ಮಿಗೆತ್ವರಿತದಿಂದಂ ॥ ೬೮ ॥

ಕರೆದುತರುವುದೆನುತ್ತೆಪೇಳಲ್ । ಪಿರಿದುಮೊಳಗುತ್ತಿರುವ ಭೇರಿಸು । ಕರಡೆ ಢಕ್ಕೆಯು ಕಹಳೆಮದ್ದಳೆಶಂಖದಿಂಕೂಡಿ ॥ ಮೆರೆವ ಪರಿಪರಿವಾದ್ಯರಭಸದೊ । ಳಿರದೆನವಧುವಂ ಕರೆದುತಂದಾ । ಪರಮತರ ಮದುವಳಿಗನೆಡಭಾಗದೊಳು ಕುಳ್ಳಿರಿಸಿ ॥ ೬೯ ॥

ಕಲಶಪಂಚಕಗಳನು ಸ್ಥಾಪಿಸಿ । ಪೊಳೆವವಧುವಿಗೆ ಮೊದಲು ದೀಕ್ಷೆಯು । ನಿಲದೆಕ್ರಮದಿಂ ಗೈದುಪೂರೈಸಿದಬಳಿಕ್ಕಾಗಳ್ ॥ ನಲವಿನಿಂದ ಹರಿದ್ರದಿಂದಲಿ । ಮಿಳಿತಮಾಗಿಹ ತಂಡುಲವ ಜನ । ರೊಳಗೆ ಕೊಡಿಸುತೆಕ್ರಮದೆ ವೈದಿಕಪದ್ಧತಿಯೊಳಾಗ ॥ ೭೦ ॥

ನಾಡೆನ್ವೈವಾಹವದು ನಡೆದಿರೆ । ಪಾಡಿದರು ಶೋಭನವನ್ನೈದೆ ಯ । ಗಾರ್ಢದಿಂ ಕೊಂಡಾಡಿದರು ಶುಭಪಾತಕರುನಲಿದು ॥ ಮಾಡಿದರು ಶೃತಿಘೋಷಣಗಳಂ । ಕೂಡಿದರುಪುರಜನ ಬುಧರ್ಕಳು । ನೋಡೆಸರ್ವರು ಮುದದಿಶೇಸೆಯನಿಟ್ಟರೇಂಪೊಗಳ್ವೆ ॥ ೭೧ ॥

ಈತೆರದೆ ವೈವಾಹಕಾರ್ಯವು । ಖ್ಯಾತಿಯಿಂದಲಿ ಮುಗಿದು ಪೋಗಲ । ನಾಥರಿಗೆ ಚರರಿಂಗೆ ಬಹುದಾನಗಳಮಾಡುತ್ತೆ ॥ ಓತು ಚರಗುರುಬಂಧುನಿಕರಕೆ । ಪ್ರೀತಿಯಿಂ ಮೃಷ್ಟಾನ್ನಪಾನದಿ । ಸಾತಿಶಯದಿಂ ತಣಿಸಿತಾಂಬೂಲಗಳನೀಯುತ್ತ ॥ ೭೨ ॥

ಉಡುಗೊರೆಯನುರೆಮಾಡಿ ಸರ್ವರ । ನಿರದೆ ಬೀಳ್ಕೊಡಲಾಗಳಿತ್ತಲ್ । ಮೃಡಭಕುತದೃಢಚಿತ್ತ ಗುರುಬಸವಯ್ಯತಾನಾಗಳ್ ॥ ಕಡುಮುದದಿ ಪುತ್ರಿಯನುಕರೆಯು । ತ್ತೊಡನೆ ಹಿತವಚನಂಗಳನು ಮಿಗೆ । ಸಡಗರದಿ ಬಹುವಿವರದೊಳಗುಸುರಿದನದೆಂತೆನಲು ॥ ೭೩ ॥

ಮಗಳೆಕೇಳಾ ಪೇಳ್ವೆನೀಗಳ್ । ಜಗದೊಳಗೆ ವರಗೃಹಿಣಿಯೆನಿಸಲು । ಮಿಗಿಲೆನಿಪ ಸದ್ಗುಣಗಳಾವಾವಿರಲುಬೇಕೆಂದು ॥ ಅಗಹರನ ಸಮರೂಪರೆನಿಸು । ತ್ತಗವನಾಶವಗೊಳಿಪ ಗುರುಚರ । ರುಗಳ ಸಾಕ್ಷಾತ್ ಹರನೆಯೆಂದರಿದವರ ಪದಸೇವೆ ॥ ೭೪ ॥

ಮೋದದಿಂದೆಸಗುವುದು ಸರ್ವರ । ನಾದರದಿಕಾಣುತ್ತ ಗೃಹದೊಳು । ನಾದುನತ್ತಿಗೆ ಭಾವಮೈದುನರುಗಳಸಂಗಡವು ॥ ಭೇದಬುದ್ಧಿಯಮೂಡದನಿಶಂ । ಸಾದರದಿ ಮಾವತ್ತೆಯವರುರು । ಪಾದಸೇವೆಯಮಾಡುವುದು ಓರಿಯರೊಳು ವಾದಿಸದಿರ್ ॥ ೭೫ ॥

ಹರುಷದಿಂ ಗೃಹದೊಳಗೆ ದುಡಿಯು । ತ್ತಿರುವಚಾರಕರನ್ನು ಸಾಕ್ಷಾತ್ । ಪರಮಸೋದರರೆಂದು ತಿಳಿವುದು ಶಾಂತಳಾಗಿಹುದು ॥ ನಿರುತಪತಿವ್ರತಕಾದುಕೊಳುವುದು । ದುರುಳರಿಂದೂರಿಹುದು ಸರ್ವದ । ಮೆರೆವನಿನ್ನಾಯುಷ್ಯವಂಕಳೆ ಪರರಹಿತದೊಳಗೆ ॥ ೭೬ ॥

ಪತಿಯಕಾರ್ಯದೆ ಮಂತ್ರಿಯಾಗುತೆ। ವಿತತಗೃಹಕೃತಿಯೊಳ
ಗೆ ತೊಳ್ತಿನಿ । ಸುತಲಿಭೋಜನಸಮಯದಲಿ ವರಮಾತೆಯೆನಿಸುತ್ತೆ ॥
ರತಿಯಸಮಯದಿ ರಂಭೆಯೆನಿಸುತೆ । ಕ್ಷಿತಿಗೆ ಸಮುಶಮೆಯನ್ನು
ಪೊಂದುತೆ। ಸತತನಿಜಸದ್ಧರ್ಮಪತ್ನಿಯುಮೆನಿಸಿಬಾಳುವುದು ॥೭೭॥

ಪರಮಪತಿಯೊಡನನಿಶಕಾಟವು । ಪರಪತಿಯಕೂಡನಿಶ ಕೂ
ಟವು। ವರಗೃಹದಕಾರ್ಯದೊಳುದಾಸವು ನೋಡಲಪಕೃತಿಯೊಳ್॥
ಪಿರಿದುಸಾಸವು ಶಿವನುತಿಗೆಯುರು । ತರದಬೇಸರ ಮಿತರಹಿತವಾ ।
ಗಿರುವಭಾಷೆಯು ನೋಡಲಿಂತಿರುವವಳೆ ದುಸ್ಸತಿಯು ॥ ೭೮ ॥

ಎಲೆಮುಗಳೆಯಿೀಪರಿಯ ದುರ್ಗುಣ । ಗಳಿಗೆಮನಮಂಕೊಡದೆ
ಸರ್ವದ । ಪೊಳೆವ ಪತಿಯಾಜ್ಞೆಯನುಮೀರದೆ ನಿಶ್ಚಲತೆಯಿಂದಂ ॥
ನಿಲದೆಪತಿಸೇವೆಯನುಮಾಡುತ । ಮಲಹರನಕೃಪೆವಡೆದು ವರಪತಿ।
ನಿಲಯದೊಳುಬಾಳೆಂದುಪೇಳುತೆ ಪರಸಿಕಳುಹಿದನು ॥ ೭೯ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ।
ಕ್ಷರಗಲಿ ಷಟ್ಚಕ್ರರದ ಘನದಂತೆಶಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು
ಮುದದಿಕೇಳುವುದ್ಯೈದನೆಯಸಂಧಿ ॥ ೮೦ ॥

ತಕ್ಷಕನುತಾಂಘ್ರಿಯುಗೆ ಸರ್ವಶುಭದಾಯಕಿ ಮಹಾಪ್ರಣವನಾದಮಯಿ
ಪುಣ್ಯಫಲಿತಾರ್ಥೆ । ದಕ್ಷಸುತೆ ವಿಶ್ವಮಯೆ ನಿರ್ಮಲೆ ನಿಜಾವರಣೆ ನಿಶ್ಚಲೆ ಕೃಪಾಮ
ಧುರಪೂರ್ಣಹೃದಯಾಬ್ಜೆ ॥ ಅಕ್ಷಯಬಲಪ್ರದೆಮಹಾವಿರಜೆ ದುರ್ಗೆ ಘಟಕುಂಡಲೆ
ವಿಶುದ್ಧೆ ರಮೆಸುಪ್ರಮದೆ ಲೋಕಾ । ಧ್ಯಕ್ಷೆ ಮಹಿಷಾಸುರವಿಮರ್ದಿನಿ ನಿರಂತರ
ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೮೧ ॥



ಸಂಧಿ ೪ ಕ್ಕಂ ಪದ ೩೨೯ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ..

॥ ಶ್ರೀ ಗಂಗಾಧರಾಯನಮಃ ॥

# ಐದನೆಯ ಸಂಧಿ.



ಸೂಚನೆ ॥ ಜವಳಿವ್ಯಾಪಾರವನು ಕೈಕೊಂ ।
ಡವಿರತಂ ದಾಸೋಹವೆಸಗುತ ।
ಜವದಿಜನ್ಮಸ್ಥಲವತ್ಯಜಿಸುತ ಶಿಹಪುರಕೆ ಬಂದಂ ॥

ಶರಣಜನರಕ್ಷಕ ಸಮನ್ವಿತ । ಪರಮಪುರುಷಪರೇಶಪಾವನ । ವರದವಂದ್ಯವರೇಣ್ಯ ವಿಶ್ವೋದ್ಧಾರವಿಶ್ವೇಶ ॥ ಪರಮಗುಣಗಣನಿಲಯ ಪಂಚಾ । ಕ್ಷರಮಹೇಶಗಿರೀಶ ರುದ್ರೇ । ಶ್ವರ ಸದಾಶಿವ ನಿನ್ನ ವರಚರಣಗಳಿಗೆರಗುವೆನು ॥ ೧ ॥

ಪರಮಬಸವಾರ್ಯರಿಗೆ ಲಗ್ನವು । ಜರುಗಿದಾರನೆವತ್ಸರಗಳೊಳಿ । ಮೆರೆವಮಾತಾಪಿತರು ಶಿವಲಿಂಗೈಕ್ಯರಾಗಲ್ಕೆ ॥ ಚರಬಸವಯೋಗಿಗಳು ಧೈರ್ಯವ । ತೊರೆಯದುರು ಸಂಸಾರದೊಳು ಘನ । ತರದೆ ಸಂಘಟಿತರುಗಳಾದಡು ನಿತ್ಯಕರ್ಮವನು ॥ ೨ ॥

ಬಿಡದೆವಚನಗ್ರಂಥಗಳನತಿ । ಸಡಗರದಿನೋಡುತ್ತ ಸ್ನಾನವು । ಕಡೆಯುದಾದ್ವಾಕ್ಷಣವೆ ಜನಗಳ ಕರ್ಣಗಳಿಗಿರದೆ ॥ ಕಡುಹರುಷವಾಗುವೊಲು ಪ್ರಮಥರ । ನುಡಿಗಳನು ರಾಗದಲಿ ಪೇಳುವ। ದೃಢತರದ ಪದ್ಧತಿಯ ಪಾಲಿಸುತಿರ್ದುದಲ್ಲದಲೆ ॥ ೩ ॥

ಮಾತುಮಾತಿಗೆ ತಿರೆಯೊಳಗೆಘನ । ಖ್ಯಾತರಾಗಿಹ ಶಿವಶರಣರುಗ । ಳೋತುರಚಿಸಿದ ವಚನಗಳಪೇಳುತ್ತಲಿರುತಿರ್ದರ್ ॥ ಪೂತಮಾಹೇಶ್ವರರಗರ್ಭದೆ । ಭೂತನಾಥನಕೃಪದೆ ಮೆರೆವೀ । ಭೂತಳದೆ ಜನ್ಮಿಸಿದಡುಂ ಮಠದಧಿಪನೆನಿಸಿದಡುಂ ॥ ೪ ॥

ಧರೆಯೊಳಗೆಯಾಚನೆಗೆ ಸಮವಾ । ಗಿರುವಲಘುತರಮುಂಟೆ
ಯೆಂಬುವ । ಪರಮನಿಜಗುಣರುರುತರದ ವಾಕ್ಯಗಳಮೇಣೆಸೆವ ॥ ನಿ
ರುತಕಂಡವರೆದುರಿನಲಿ ಘನ । ತರದಕೈಗಳನೊಡ್ಡಿಬೇಡುವ ।ನರರ
ಪುರಹರನೊಲ್ಲನೆಂಬುವ ವರಪ್ರಮಥರುಗಳ ॥ ೫ ॥

ನುಡಿಗಳನುತಿಳಿಯುತ್ತ ನಿರುತದೊ । ಳೊಡಲಹೊರೆವುದಕಾಗಿ
ಭಿಕ್ಷೆಯ । ಸಡಗರದಿಬೇಡುವುದು ಬಹುಲಘುತರಮೆನುತೆತಿಳಿದು ॥
ದೃಢಮನದಿಭಿಕ್ಷೆಯನು ಬೇಡದೆ । ಬಿಡದೆ ಪ್ರಾಮಾಣಿಕವನೆಂದಿಗು।
ಮೃಡನಿಗತಿಪ್ರಿಯಪೂಜಕಾಯಕವನ್ನು ಕೈಕೊಂಡು ॥ ೬ ॥

ಸತ್ಯವೇಸ್ವರ್ಗಪದಸತ್ಯವೆ । ನಿತ್ಯನರಕವದೆಂದುಪೇಳುವ ।
ಸ್ತುತ್ಯಬಸವೇಶ್ವರನವಾಕ್ಯದ ತೆರದೆನಡೆಯುತ್ತ ॥ ನಿತ್ಯನೇಮದಕೂ
ಲಿಯನು ಪಡೆ । ಯುತ್ತಪಡೆದಾವಿತ್ತವೆಲ್ಲವ । ಭೃತ್ಯತನದಿಂ ಜಂಗ
ಮರ ದಾಸೋಹಕತಿಮುದದೆ ॥ ೭ ॥

ಸಂದಿಸಲುಬೇಕೆನುತಲವರುಗ । ಳಂದುಮನದೊಳಗಾವುದಾದ
ಡ। ದೊಂದುವ್ಯವಹಾರವನುಕೈಕೊಳಬೇಕೆನುತೆ ಬಗೆದು ॥ ಇಂದು
ಧರಶರಣರೊಳು ಶ್ರೇಷ್ಠನು । ಮೆಂದೆನಿಸಿಮಿಗೆ ರಾಜಿಸುತ್ತಿಹ। ಸಂದ
ದೇವರದಾಸಿಮಯ್ಯನ ತೆರದಿ ಶೋಭಿಸುವ ॥ ೮ ॥

ಜವಳಿವ್ಯಾಪಾರವನುಕೈಕೊಂ । ಡವನಿಯೊಳುನಡಸುತ್ತಸತ್ಯ
ದೊ । ಳವಿರತಂ ರೂಪಾಯಿಗೊಂದಾಣೆಯೊಲು ಲಾಭವನು ॥ ತವೆಪ
ಡೆಯಬೇಕೆನುತೆ ವರನೇ । ಮವನುಮಾಡಿಕೊಳುತ್ತೆ ಮನದೊಳು ।
ಜವದಿದೃಢದಿಂ ಜವಳಿವ್ಯಾಪಾರವನು ಕೈಕೊಂಡಂ ॥ ೯ ॥

ಕೆಲವುದಿನಗಳೊಳ್ಳೆದೆಜಗದೊಳು । ಮಲಹರನಸಮರೂಪ ಕೈ
ಕೊಂ । ಡಲಘುತರದಾಸತ್ಯನೇಮದ ಸೀರೆವ್ಯಾಪಾರಂ ॥ ನಿಲದೆಜ
ವದಿಂ ಪಸರಿಸಲು ಭುವಿ । ಯೊಳಗೆವ್ಯಾಪಾರವದು ಭರದಿಂ । ಸಲೆನ
ಡೆಯುತಿರಲಾಗ ಧನಸಂಚಯವು ಮಿಗಿಲಾಗೆ ॥ ೧೦ ॥

ಇವರುಸಂಗ್ರಹಿಸಿರ್ದ ಧನವನು । ಭವನದಲಿ ತ್ರಿಜೋರಿಯೊ
ಳುಮಡಗದೆ । ಭವನಸಮ ಗುರುಲಿಂಗಜಂಗಮ ಸೇವೆಗಾಗಿಯು
ಮೇಣ್ ॥ ಭುವಿಯೊಳುರುದಾಸೋಹಕಾಗಿಯು । ತವೆಮುದದಿ ವಿನ
ಯೋಗಿಸುತ್ತಿರ। ಲವರತ್ಯಾಗವಬಣ್ಣಿಪೊಡೆನಾಗೇಂದ್ರಗಳವಲ್ಲ ॥೧೧॥

ಈವಿಧದವರ್ತನೆಯದವರುರು। ಭಾವದೊಳುಮೂಡಲಿಕೆ ಘನ
ತರ। ಭಾವಜಾರಿಯಭಕ್ತಿಯೇ ಮಿಗೆಮೂಲಕಾರಣವು ॥ ಭಾವಶುದ್ಧ
ದಿನೋಡೆ ಭಕ್ತಿಯು । ಜೀವನವ ಬಹುಪ್ರೇಮಮಯವನು । ಸಾವ
ಧಾನದೊಳೆಸಗಿ ನಿಜಸುಖವನ್ನು ಬೀರುವುದು ॥ ೧೨ ॥

ಭಕ್ತಿಯದುಪರಿಕಿಸಲು ಸ್ವಾದದಿ । ಯುಕ್ತವಾಗಿಹ ಪರಮ
ಸಕ್ಕರೆ। ಭಕ್ತಿಯಿಂದೊದಗುತ್ತಲಿರ್ಪಾನಂದವರ್ಣಿಸಲು ॥ ಶಕ್ಯವಲ್ಲವು
ನರರಿಗದು ಬಹು । ಭಕ್ತಿಯುಕ್ತಸುಭಕ್ತಮಾತ್ರಂ । ಶಕ್ತನಾಗಿಹ
ನಿರದೆ ನಿರುತದಿ ಮೆರೆಯುವೀಧರೆಯೊಳ್ ॥ ೧೩ ॥

ಪರಮಭಕ್ತನು ಸರ್ವಕಾಲದೊ । ಳಿರದೆಯಗಣಿತ ಜೀವಿಗಳ
ನು । ದ್ಧರಿಸುವನು ದಿಟವಾದಕಾರಣದಿಂದೆ ಶಿವಶರಣರ್ ॥ ನಿರುತ
ದೊಳು ಭಕ್ತಿಯಪ್ರಶಂಸೆಯ । ಧರೆಯೊಳಗೆ ಪಿರಿದೆಸಗಿ ನರರನು ।
ಹರನಕೃಪೆವಡೆವಂತೆ ನೆರೆಪ್ರೇರೇಪಿಸಿರುತಿರ್ಪರ್ ॥ ೧೪ ॥

ಈಪರಿಯ ವರಭಕ್ತಿಯೇ ಶಿವ । ರೂಪರಾಗಿಹ ಬಸವಯೋಗಿ
ಗ । ಳಾಪರಮಹೃಧಯದೊಳು ಮೂಡಿಯೆ ಭಾವಶುದ್ಧಿಯೊಳು॥
ಕೋಪವಣುಮಿಲ್ಲದಲೆ ವ್ಯರ್ಥಾ । ಲಾಪಗಳನಾಡದಲೆ ವರನಗ ।
ಚಾಪನೊಲು ರಾಜಿಸುವ ಘನಗುರುಲಿಂಗಜಂಗಮರ ॥ ೧೫ ॥

ಸೇವೆಗಾಗಿಯೆ ತಮ್ಮತನುವನ । ದಾವಗಂ ಸವೆಸುತ್ತ ಭುವಿ
ಯೊಳ । ಗಾವಿಮಳಭಾವದೊಳು ನೀಚೋಚ್ಚರುಗಳೆನ್ನದಲೆ ॥
ಆವವಿಧದಿಂಧನಿಕದೀನರ್। ಕೋವಿದರ್ ಮೂಢರುಗಳೆನ್ನದೆ। ಯಾ
ವಕಾಲದಿ ಬಂದಜನರಿಂಗೆಲ್ಲ ಸಮನಾಗಿ ॥ ೧೬ ॥

ಹರುಷದಿಂದುಪಚರಿಸಿತಮ್ಮಯು । ಪರಮಭಕ್ತಿಯ ಬೆಳಕಹರಡಿದ । ಠಿರದೆತಿರೆಯೊಳು ಸಕಲಜನಗಳು ನೋಡಿನಲಿವಂತೆ ॥ ಪುರಹರನ ಸಮರೂಪರೆನಿಸಿದ । ಚರಬಸವಯೋಗಿಗಳು ಭಕ್ತಿಯೊ । ಳುರುತರದಿ ಕೈಕೊಂಡುನಿರುತದಿ ನಡೆಸುತಿರುತಿರ್ದಾ ॥ ೧೭ ॥

ಸಾರತರದಾಸೋಹಕಾರ್ಯದ । ಭೂರಿಚಿಂತಕಾಗನಿಶತಮ್ಮಯು। ಚಾರುಸತಿಯಾಗಿರ್ದ ಶ್ರೀಸೂಗಮ್ಮನವರ್ಕೈದೆ ॥ ವೀರಪತಿಗಳನೆರಳನೇ ತಾವ್ । ಧೀರತನದಿಂದನುಕರಿಸಿ ಮುದ । ವೇರಿಸೇವೆಯನೆಸಗಿಯೆಸೆಯುತಲಿರ್ದಳೀಸೆಂಬೆ ॥ ೧೮ ॥

ಇವರಚಿಕ್ಕಸಹೋದರರಸತಿ । ಶಿವಕರದ ದಾಸೋಹಕಾರ್ಯದಿ । ವವಿರತಂ ದೇಹವನುದಂಡಿಸಿ ಬೇಸರವಪೊಂದಿ ॥ ಭುವನಕದ್ಭುತವೆನಿಸುವೀ ಕ್ಲೇ । ಶವನು ಸಹಿಸಲುಸಾಧ್ಯವಿಲ್ಲವು । ತವಕದಿಂದೆ ನಗೀಗಲಪ್ಪಣೆ ಕೊಡುವುದೆಂದೆನುತೆ ॥ ೧೯ ॥

ಕೇಳಲಾಗಳ್ ಬಸವಯೋಗಿಗ । ಳಾಲಿಸುತಲೀ ವಚನವನು ಸಲೆ । ಶೂಲಿಕಾರ್ಯಕೆ ನಿನಗೆಬೇಸರವಾಯಿತೇ ತಾಯಿ ॥ ವ್ಯಾಲಕಂಕಣನೀಪವಿತ್ರದ । ಮೇಲೆನಿಪಕಾರ್ಯಕ್ಕೆ ತನುವನು । ಲೀಲೆಯಿಂಸಂತತದಿ ಸವೆಸುವಳವಳೆ ಕಡುಧನ್ಯೆ ॥ ೨೦ ॥

ಅಷ್ಟುಮೂರುತಿಸೇವೆಗೈಯ್ಯಲು । ಕಷ್ಟವಾದಡೆ ನಿಮಗೆಯೀಗು । ತೃಷ್ಟವಿಶ್ರಾಂತಿಯನುಪೊಂದುವುದೊಳಿತು ಕೇಳ್ತಾಯೆ ॥ ನಿಷ್ಟೆಇಷ್ಟುದಿನಗಳು ಗೈದಸೇವೆಗೆ । ಸೃಷ್ಟಿಪತಿಸಂತುಷ್ಟನಾಗಿಹ । ನಿಷ್ಟೆಸಾಕೌ ಎಂದುವಿನಯದಿ ಪೊರಗೆ ಕರೆದಿರದೆ ॥ ೨೧ ॥

ಆಗಶೀರೆಯನುಡಿಸಿ ಮುದದಿಂ । ಬೇಗವಿಶ್ರಾಂತಿಯನು ತೆಗೆದುಕೊ । ಪೋಗೆನುತಭರದಿಂದೆ ತವರೂರಿಂಗೆಕಳುಹಿಸಿದರ್ ॥ ಭೋಗಿಭೂಷಣರೂಪರಿಗೆತಾವ್ । ಸಾಗಿಸುವಭಕ್ತಿಗೆ ಸುತ್ಯಾಗ । ಕ್ಕಾಗಬಾರದದಾವಗಂ ನಸುಕೊರತೆಯೆಂದೆಂಬ ॥ ೨೨ ॥

ಹೇತುವೇ ಘನಧ್ಯೇಯವಾಗಿರ। ಲೋತುಜವಳಿಯ ಮಾರಲಿಕೆ ಪ್ರ। ಖ್ಯಾತವಾಗಿಹ ಸುತ್ತಮುತ್ತಣ ಗ್ರಾಮಗಳಿಗೆಲ್ಲ ॥ ನೂತನದ ಶೀರೆಯಪಸಾರವ। ಖ್ಯಾತವಾದಾಹಯದಮೇಲತಿ। ಯಾತುರದೊಳಿರದೇರಿಕೊಂಡಾಹಯದಹಿಂದಾಗ ॥ ೨೩ ॥

ಹರುಷದಿಂದಲಿ ಪೋಗುತಿರ್ದರ್। ನಿರುತತಮ್ಮಯ ಕಾಯಕವನುರು। ನಿರತದಿಂದಲಿ ಸಾಗಿಸುವುದಕೆ ವಿಮಲಹೃದಯದೊಳು ॥ ಹರನರೂಪಿಗಳೊಂದುದಿನತಾವ್। ಕರವೆಸೆವ ಜವಳಿಯ ಪಸಾರವ। ಭರದಿಕುದುರೆಯಮೇಲೆ ಸಾಗಿಸಿಕೊಂಡು ಸಂತೆಯೊಳು ॥ ೨೪ ॥

ಮಾರಲಿಕೆ ಪೋಗುತ್ತಲಿರುತಿರೆ । ದಾರಿಯೊಳು ಬಡಜನರು ಬಂದು ವಿ। ಚಾರಿಸಿದರೇನಯ್ಯಸಂತೆಗೆ ಬಸವಸ್ವಾಮಿಗಳು ॥ ಬಾರಲಿರುವರೆ ಯೆಂದುಕೇಳಲು । ಮಾರಹರಸಮರೂಪಿಗಳು ಮುದ । ವೇರಿ ನಿಮಗೀಗವರು ಬೇಕಾಗಿರ್ಪುದೇತಕ್ಕೆ ॥ ೨೫ ॥

ಪೇಳಿರೆನಲಾಬಡಜನಂಗಳು। ಪೇಳುವೆವು ಕೃಪೆದಾಳಿಯಮ್ಮಯ। ಮೇಲೆ ಕೇಳುವುದೀಗ ನಾವುಗಳೆಮ್ಮಸುತರುಗಳ॥ ಮೇಲೆನಿಪಲಗ್ನಗಳನೆಸಗಲಿ। ಕಾಲಯದಿ ಸನ್ನಾಹವೆಲ್ಲವ। ಮೇಳವಿಸಿಕೊಂಡಿರುವೆವೀಗಳ್ ಶೀರೆಗಳಮಾತ್ರಂ ॥ ೨೬ ॥

ತರುವುದಕೆ ಸಾಧ್ಯವದುವಾಗದೆ। ಹರುಷದಿಂ ಸಾಗಿಸಿದಲಗ್ನಗ। ಳಿರದೆ ನಿಲ್ಲುವಸಂಭವವು ಬರುತಿಹುದು ನಿಜವಾಗಿ ॥ ಧರೆಯೊಳಗೆ ಪರಮಾತ್ಮನೆಮಗೀ। ತೆರದ ದಾರಿದ್ರ್ಯವನುನೀಡಿಹ। ನರಿದಿದನು ಭರದಿಂದ ದೂರನುಮಾಡುವವರಿಲ್ಲಂ ॥ ೨೭ ॥

ಎಂದುಪೇಳಿಕೊಳಲ್ಕೆ ವರಚರ। ರಂದವರ ದೀನತೆಯ ನೋಡು। ತ್ತೊಂದುಪ್ರತಿಮಾತಾಡದದೊಲು ವರಹಯದಮೇಲಿರ್ದ ॥ ಚಂದವಾದ ಪಸಾರವಂ ಭರ। ದಿಂದ ಕೆಳಗಿಳಿಸಿರದೆ ಬಿಚ್ಚು। ತ್ತಂದು ನಿಮಗಿದರೊಳಗೆ ಬೇಕಾಗಿರ್ಪ ಶೀರೆಗಳಂ ॥ ೨೮ ॥

ತೆಗೆದುಕೊಳ್ಳುವುದೆನುತೆ ಸರ್ವರಿ। ಗೊಗುಮಿಗೆಯ ಭಕ್ತಿಯೊ
ಳು ಪೇಳಲು। ಸೊಗಸಿನಿಂ ಬಡಜನರು ತಮ್ಮಯಮನಕೆ ಬಂದಂಥ॥
ಮಿಗಿಲೆನಿಪ ಶೀರೆಗಳ ಹರುಷದಿ । ತೆಗೆದುಕೊಂಡಿರದಾಗ ಯಮ್ಮ
ಯ। ಬಗೆಯೊಳಿರ್ದಿಷ್ಟಾರ್ಥವದು ಕೈಗೂಡಿತಿನ್ನೇನು ॥ ೨೯ ॥

ಈಗಳಿವರಂನೋಡೆ ಭುವಿಯೊಳು। ತ್ಯಾಗದೊಳು ವರಕರ್ಣ
ಗಿಂಮಿಗಿ । ಳಾಗಿಷೋರುವರಿವರು ಸಾಕ್ಷಾತ್ ಪರಶಿವನೆಯೆಂದು ॥
ರಾಗದಿಂಕೊಂಡಾಡಿ ಸರ್ವರು । ಬಾಗಿನಮಿಸುತೆ ತಮ್ಮಗ್ರಾಮಕೆ।
ಪೋಗಿ ಲಗ್ನಗಳನ್ನು ತವೆಗೈದಾಗ ಸುಖವಡೆದರ್ ॥ ೩೦ ॥

ಕೇಳಿದೊಸ್ತುಗಳನ್ನು ಶ್ರೀಗಳು। ಭಾಳಲೋಚನನಂತೆ ದೃಢ
ದಿಂ। ಲೀಲೆಯಿಂ ಕೊಡುತಿರ್ದರಲ್ಲದೆ ಯಿಲ್ಲವೆಂದೆಂಬ॥ ಕೀಳುವಚ
ನವದವರಬಾಯೊಳು। ಕೇಳಿದವರಿಲ್ಲೈಮಹಾತ್ಮರ । ಮೇಲೆನಿಸು
ವೌದಾರ್ಯವನು ಬಣ್ಣಿಸಲಿಕಳವಲ್ಲ ॥ ೩೧ ॥

ಧರೆಯಜನರಘಕುಳವ ಕಳೆಯಲು । ಕರುಣದಿಂ ಪರಶಿವನೆ
ತಾನೀ। ಪರಮಚರಬಸವೇಶನೆಂಬುವ ನಾಮದೊಳೆಬಂದು॥ ಮೆರೆ
ವನಲ್ಲದೆ ಮಿಕ್ಕಲೌಕಿಕ। ನರರಿಗಿಂತಹ ತ್ಯಾಗವಳವಡು । ತಿರುವು
ದೇ ಹರನೆಂದು ನಂಬುವದಖಿಳ ಸಜ್ಜನರು ॥ ೩೨ ॥

ದೆಶೆದೆಶೆಯೊಳೈತರುವ ಜನರಿವ । ರಸಮತ್ಯಾಗದ ಮಹಿಮೆ
ಯುಸುರುತ। ಸಸಿನೆಯಿಂಕೀರ್ತಿಸುತ ಸಾಷ್ಟಾಂಗದೊಳೆ ನಮಿಸುತ್ತೆ॥
ರಸೆಯೊಳೀಚರವರನ ಘನತರ। ಜಸವನಾಂತಿಹ ತ್ಯಾಗಧರ್ಮವ।
ನುಸುರಲೆಮ್ಮಳವಲ್ಲವೆಂದೆನುತ್ತೈದೆ ಪೊಗಳುವರು ॥ ೩೩ ॥

ಶಶಿಧರನ ಸಮರೂಪರಾಗಿರ್ದ। ಸಮಬಸವಸ್ವಾಮಿಗಳಿಗುರು।
ಮಿಸುಪ ಮಹಲಿಂಗಯ್ಯ ರಾಚೋಟಯ್ಯನವರೆಂಬ ॥ ರಸಿಕರಾಗಿ
ರ್ದೀವ್ರತಮ್ಮಧಿ। ರೆಸೆಯುತಿರಲದರೊಳಗೆ ಪರತರ। ಪಶುಪತಿಯ
ವರಭಕ್ತ ಮಹಲಿಂಗಯ್ಯನೆಂಬುವರು ॥ ೩೪ ॥

ಅಣ್ಣನವರಾಜ್ಞೆಯನುಮೀರದೆ। ನನ್ನಿಯಿಂಗುರುಲಿಂಗಜಂಗಮ। ರುನ್ನತದಸೇವೆಯೊಳು ಸತತಾಸಕ್ತರಾಗೈದೆ ॥ ಪನ್ನಗಾಧರನ ಸಮಪೂಜಿಸು। ಪನ್ನತಿಕೆಯಿಂದೆಸಗುತುರು ಸಂ। ಪನ್ನರಾಗಿಯೆ ಕಾಲಹರಣವಮಾಡುತಿರುತಿರ್ದರ್ ॥ ೩೫ ॥

ಎರಡನೆಯತಮ್ಮಂದಿರಾದುರು। ತರದ ರಾಚೋಟಿಯ್ಯನವರತಿ। ಮೆರೆವಲೌಕಿಕ ವರ್ಗದೊಳುಸೇರುತ್ತಲದರೊಳಗೆ ॥ ನಿರುತಪರಮಾಸಕ್ತರಾಗಿಯೆ। ಚರಿಸುತಿರ್ದುದರಿಂದ ತಮ್ಮಯ। ಪರಮಭ್ರಾತೃಗಳಾದ ಚರಬಸವಾರ್ಯ ಹರುಷದೊಳು ॥ ೩೬ ॥

ಎಸಗುತಿಪದಾಸೋಹವಾಗಲಿ। ಮಿಸುಪ ಪರತರಭಕ್ತಿಯಾಗಲಿ। ವಸುಮತಿಯೊಳವರಿಂಗೆ ಸಲೆಸರಿದೋರಲಿರಲಾಗ ॥ ರಸೆಯೊಳೀತೆರನಾದಕಾರ್ಯದಿ। ಯೆಸೆವಪ್ರಾಪಂಚಿಕದ ಸೌಖ್ಯವು। ವ್ಯಸನಮಯವಾಗುವುದು ನಿಶ್ಚಯವೆಂದು ಭಾವಿಸುತೆ ॥ ೩೭ ॥

ಚರಬಸವಯೋಗಿಗಳತನ್ನಯ। ಸರುವಭಾಗವ ತ್ವರಿತದಿಂದಲಿ। ಯಿರದೆಕೊಡುವುದೆನುತ್ತೆಕೋಪದಿ ಕೇಳಿಕೊಳಲಾಗ ॥ ಹರನಸಮ ಬಸವಾರ್ಯನೆಮಗೀ। ಗಿರುತಿರುವಸ್ವತ್ತಿನೊಳು ಭಾಗವ। ಸರುವಥಾತ್ಯಾಜ್ಯವನು ಮಾಡಿರುತಿರ್ಪೆ ಮೇಣೆಸೆವ ॥ ೩೮ ॥

ಈ ಮಠವುಬೇಡೆನಗೆನೀವೇ।ಪ್ರೇಮದಿಂ ಸುಖಮಾಗಿಜೀವಿಸಿ। ಕಾಮವೈರಿಯಕೃಪೆಯಪಡೆಯಿರೆನುತ್ತೆ ಹರುಷದೊಳು ॥ ಭೂಮಿಯೊಳಗನವಾರಗ್ರಾಮದಿ। ಪ್ರೇಮಮಯದಾಸ್ತಿಯನುಬಿಟ್ಟು। ಧ್ಯಾಮಧೀರತ್ವದೊಳು ಮನದಿವಿಕಾರಗೊಳ್ಳದಲೆ ॥ ೩೯ ॥

ವರವಿವೇಕತೆ ಪರಮಸತ್ಯತೆ। ಕರುಣೆಸೇವಾಸಕ್ತಿಧೃತಿಮತಿ। ಪರತರೌದಾರ್ಯಕ್ಷಮಾಬಲ ಭಕ್ತಿಸರಳತನ ॥ ಹರಸಮಯದಭಿಮಾನ ಸದ್ಗುಣ। ಭರಿತಗುರುಬಸವಯ್ಯನೆನಿಪುರು। ತರದಪುತ್ರ ಸುಪತಿವ್ರತಾಲಂಕರಣೆ ನಿಜಪತ್ನಿ ॥ ೪೦ ॥

ಸೂಗಮ್ಮಾಂಬಿಕೆಯೊಡನೆ ಮೋದದಿ । ಭೋಗಿಭೂಷಣನನ್ನು ಸ್ಮರಿಸುತ । ಲಾಗಮಿಸಿದರು ತ್ವರಿತದಿಂದೆಸೆಯುವ ಸುಶಹಪುರಕೆ ॥ ಆಗಳಲ್ಲಿಯ ಭಕ್ತಶ್ರೇಷ್ಠರು । ರಾಗದಿಂದಾಶ್ರಯವನೀಯುತೆ । ಬೇಗದಿಂಶೋಭಿಸುವಮಠವನು ಸ್ಥಾಪಿಸಿಕೊಡಲ್ಕೆ ॥ ೪೧ ॥

ಇವರುಮೆರೆವೀಮಠದೊಳೇ ನೆರೆ । ಜವಳಿವ್ಯಾಪಾರವನು ಮಾಡುತ । ಲವಿರತದೊಳದರಿಂದ ಬಂದಿಹಲಾಭದಿಂದಿರದೆ ॥ ಶಿವಕರದ ದಾಸೋಹಕಾರ್ಯವ । ಭುವಿಯೊಳಗೆ ನಿರ್ವಿಘ್ನಮಾಗಿಯೆ । ಭವನಮನಕಾನಂದವಾಗುವತೆರದಿ ನಡಸಿದರು ॥ ೪೨ ॥

ಇವರ ನಿರ್ವಂಚನದ ದಾಸೋ । ಹವದು ಜನರಿಗೆ ತೋಷಗೊಳಿಸಲ್ । ಭವನಸಮರಿವರೆಂದು ನುಡಿದರು ಹರುಷದಿಂದುಬ್ಬಿ ॥ ಶಿವನಭಕ್ತಿಯ ಘನಪ್ರಭಾವದಿ । ಭುವಿಯೊಳೆಸಗಿದವರ ಮಹಿಮೆಗಳ । ವಿವರದಿಂದುಸುರುವೆನು ಭಕ್ತರುಕೇಳಿನಲಿಯುವುದು ॥ ೪೩ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣಕ್ಷರಗಳಲಿ ಷಟ್ಟಕ್ಷರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀವರಪುರಾಣವು । ನಿರುತ ನಿಖಿಲಪುರಾಣಮಧ್ಯದಿ । ಹರನಭಕ್ತರು ಮುದದಿಕೇಳುವುದೈದನೆಯಸಂಧಿ ॥ ೪೪ ॥

ಮೃತ್ಯುಭಯಭಂಜನಿ ಗಣೇಶ್ವರಿ ಬಲಿಪ್ರಿಯೆ ಪ್ರಿಯಂಕರಿ ಯುಗಂಧರಿ ಲಯಾಪಹೆ ಶುಭಕ್ಷೆ । ಸತ್ಯಬುಧಚಿತ್ತಕಮಲಾಲಯೆ ಜರಾಪಹೆ ಸುವೃಷ್ಟಿಕರಿ ನಿರ್ವ್ಯಸನದಾಯಕಿ ಸುಪಾಣಿ ॥ ಭೃತ್ಯಜನರಕ್ಷಿಣಿ ಮಹಾಸುಖವರೇಣ್ಯೆ ಮೃಗರಾಜಘನವಾಹಿನಿ ದಿವಾಕರಸವರ್ಧೂಸಂ । ಸ್ತುತ್ಯೆ ಸನಕಾದಿಮುನಿಸೇವಿತೆ ನಿರಂತರ ಪೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೪೫ ॥



ಸಂಧಿ ೫ ಕ್ಕಂ ಪದ ೨೭೪ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.

॥ ಓಂ ಪರಬ್ರಹ್ಮಣೇನಮಃ ॥

# ಆರನೆಯ ಸಂಧಿ.

ಸೂಚನೆ:— ಚಾರುಶ್ರೀಚರಬಸವದೇವನು ।
ತೋರಿವರಹಮ್ಮಿಣಿಯ ಮಹಿಮುವ ।
ವೀರಶೈವರ ಪರಮನಿತ್ಯಾಚರಣೆಯರುಹಿದನು ॥

ಪರಮಪುಣ್ಯಶ್ಲೋಕ ಪುರಹರ । ನಿರವಯುವ ನಿರ್ದ್ವಂದ್ವ ನಿಸ್ಪೃಹ । ವರಕಥನಲೀಲಾವಿನೋದಪ್ರಕಟಭುವನೇಶ ॥ ಪರಮ ಚರಿತವಿಲಾಸನಿರ್ಮಲ । ನಿರುಪಮಿತ ನಿರ್ಮಾಯಕರುಣಾ । ಕರಮ ಹಾತ್ಮ ಮಹೇಶನಿನ್ನಯ ಚರಣಕೊಂದಿಪೆನು ॥ ೧ ॥

ಸನ್ನುತಶ್ರೀಬಸವಯೋಗಿಗ । ಳುನ್ನತದ ಶಿವಭಕುತ ಬಳಬಟಿ ಚೆನ್ನಬಸವನಗೌಡರ ಗೃಹಕಾಗಮಿಸಿಮುದದಿಂ ॥ ನನ್ನಿಯಿಂದಲಿ ತಮ್ಮನೇಮಗ । ಳನ್ನು ತೀರಿಸಿಕೊಳುತಲವರ ಸು । ಮನ್ನಣೆಯ ಪಡೆಯುತ್ತ ವರಕಾರ್ಯಾರ್ಥಸಾಧನೆಗೆ ॥ ೨ ॥

ಕೆಲವುದಿನಗಳವರೆಗೆಯವರ ಸು । ನಿಲಯದೊಳಗಿರುತಿರುವ ಸಂಭವ । ಮಲಹರನುತಾರಲ್ಕೆ ಘನತರಸುಖದೊಳಿರುತಿರ್ದಂ ॥ ನಲಿವಗುಣಯುತಗೌಡರಾ ಮಿಗೆ । ತೊಳಪಬಸವಾರ್ಯರೊಳು ನಿರುತದೊ । ಳಲಘುತರಭಕುತಿಯೊಳು ನಡೆದುಕೊಳುತ್ತಲಿರುತಿರ್ದರ್॥೩॥

ಒಂದುದಿನ ಕಡುಬಡವನೋರ್ವಂ । ಬಂದುಶ್ರೀಬಸವಾರ್ಯರಿಂಗಭಿ । ವಂದಿಸುತ್ತಲಿ ಸ್ವಾಮಿಗಳೆನಾನಿಂದು ತನುಭವನ ॥ ಸಂದಲಗ್ನದಕಾರ್ಯವನು ಮುದ । ದಿಂದ ಕೈಕೊಂಡಿರುವೆನದರಿಂ । ದಿಂದು ಶತರೂಪ್ಯಗಳು ಬೇಕಾಗಿರ್ಪವತಿಭರದಿ ॥ ೪ ॥

ಎನ್ನಮೇಲತಿಕರುಣತೋರುತ । ನನ್ನಿಯಿಂದಾಹಣವನಿತ್ತಡೆ । ಯನ್ನಸಾಲಪನಿನಿತುದಿನದೊಳೆ ತೀರಿಸುವೆನೆನುತೆ ॥ ಉನ್ನತದ ಕ್ರಮಬದ್ಧಮಾಗಿಪ । ಚೆನ್ನಸೆವಪತ್ರವನು ಬರೆದುರು । ನನ್ನಿಯಿಂದಲಿ ಕೊಡುವೆನೆನುತಲಿ ವಿನಯದಿಂಬೇಡೆ ॥ ೫ ॥

ಆಗಳಾಬಸವಾರ್ಯ ಪರಮನು । ರಾಗದಿಂದಂ ಕರೆದುಗೌಡರ । ನೀಗಳೀಕಡುಬಡವಗೋಸುಗ ನಸುಶ್ರಮುವವಹಿಸಿ ॥ ಶ್ರೀಗೆನೆಲೆಯಾಗಿರ್ದವರಬಳಿ । ಬೇಗದಿಂದಂ ತರಿಸಿಯವನಿರ । ದೀಗಬೇಡಿರು ಶಿರ್ಪ ಶತರೂಪ್ಯಗಳ ಸಲಿಸುವುದು ॥ ೬ ॥

ಇನ್ನುನಾಲ್ಕುದಿನಂಗಳಲ್ಲಿಯೆ । ಚೆನ್ನಸೆವ ಶಹಪುರದವಾನ್ಯಶಿ । ವಣ್ಣನವರಿಂ ನಿಮ್ಮರೂಪಾಯಿಗಳ ತರಿಸೀರೆ ॥ ಎನ್ನುತಲಿ ಪೇಳಲ್ಕೆಗೌಡರು । ಯಿನ್ನು ಪ್ರತ್ಯುತ್ತರವನೀಯದೆ । ನನ್ನಿಯಿಂದಲಿ ಪೋಗಿ ತಮ್ಮಗತಿಪರಿಚಯದಿರ್ದಾ ॥ ೭ ॥

ಜನರಬಳಿ ವಿನಯದೊಳುಕೇಳುತ । ಹಣವತವಕದಿ ತಂದುಸಲಿಸ । ಲ್ಕನುನಯದೆ ಥರ್ರ್ಥವಾಗಿಯೆ ಸಲಿಸಿದಾಧನವ ॥ ಘನತರದಹರುಷದೊಳು ದೀಸನು । ಸನುಮತದಿ ಕೊಂಡೊಯ್ದುತನ್ನಯ । ತನುಭವನನವರಲಗ್ನಗೈದುರುಸುಖದೊಳೆಸೆದಿರ್ದಂ ॥ ೮ ॥

ಇತ್ತಲಾಬಸವಾರ್ಯಮುದದಿಂ । ದುತ್ತಮದನೂಲನ್ನು ತರಿಸುತ । ತ್ಯುತ್ತಮದೆ ಪೊಸೆದದನು ಭರದಿಸಹಸ್ರರೂಪ್ಯಗಳ ॥ ಮೊತ್ತವನು ಪಿಡಿವಂತೆ ಹಮ್ಮಿಣಿ । ಪೊತ್ತುಗಳೆಯದೆ ಮೂರುದಿನದೊಳೆ । ಚಿತ್ತಕತಿಮುದವೀವತೆರದೊಳು ರಚಿಸಿಮುತ್ತಾಗಳ್ ॥ ೯ ॥

ಪರಮಗುಣಯುತಗೌಡರನು । ಬಹುತ್ವರಿತದಿಂಕರೆದಾಗಗೌಡರೆ । ಹರುಷದೊಳು ನೀವಿತ್ತರೂಪಾಯಿಗಳ ವಾಯಿದೆಯು ॥ ಭರದೊಳಿಂದೇಬಂದುದೀಗಳೆ । ಮೆರೆವಶಹಪುರದಿಂದ ಹಣವನು । ತರಿಸಿಕೊಡುವೆನು ಮುದದೊಳೋರ್ವ ಮನುಷ್ಯನಂಬೇಗ ॥ ೧೦ ॥

ಕಳುಪುವುದುಮೀಗಿಲ್ಲವಾದಡೆ । ಪೊಳೆಯುತಿರ್ಪೀಹಮ್ಮಿಣಿ ಯನೀವ್ । ನಲವಿನಿಂಮನವಮಾಡಿ ಶತರೂಪಾಯಿಗಳಿಗಾಗಿ ॥ ಪಲ ತೆರದಯೋಚನೆಯನೆಸಗದೆ । ಘಳಿಲನೀಗಳೆ ತೆಗೆದುಕೊಳುವುದು । ನಿಲದೆನೀವೀ ಎರಡರೊಳಗಾವುದನು ಬಯಸುವಿರಿ ॥ ೧೧ ॥

ನಿಮ್ಮಸತಿಸುತರನ್ನು ವಿವಿರದೊ । ಳೊಮ್ಮನದಿ ಸುವಿಚಾರಗೈ ದುರು । ಸಮ್ಮತದೊಳುಸುರುವುದೆನುತ್ತಲಿ ಪೇಳಲಾಗೌಡರ್ ॥ ಗಮ್ಮನಚ್ಚರಿವಟ್ಟು ಕೋರ್ಪೀ । ಹಮ್ಮಿಣಿಯು ನಾಲ್ಕಾಣೆಬಾಳ್ವು ಡು । ಯಮ್ಮಗುರುತರಶ್ರೀಗಳಾದಡೊ ಪರಮಪುರುಷದೊಳು ॥೧೨॥

ಒಂದು ಶತರೂಪ್ಯಗಳಿಗಾಗಿರ । ದಿಂದುಮೀಹಮ್ಮಿಣಿಯ ಕೊ ಳಬೇ । ಕೆಂದು ಪೇಳುವರಿದರೊಳೇನೋ ಮಹಿಮವಿರುತಿರ್ಕುಂ ॥ ಎಂದುಗೌಡರು ತಿಳಿದುತಮ್ಮಸು । ನಂದಸಹಧರ್ಮಿಣಿಯರನುತಿಳಿ ದಿಂದು ಪರಮಪರೀಕ್ಷೆ ಕಾಲವದೆಮಗೆ ಬಂದಿಹುದು ॥ ೧೩ ॥

ಎಂತುಗೈಯಲಿಬೇಕೆನುತ್ತಂ । ಚಿಂತಿಸುತ್ತಿರೆ ಸತಿಸುತರುಮು ದ । ವಾಂತು ಸತ್ಪುರುಷರ ಸುವಚನವದಾವಕಾಲದೊಳು ॥ ಎಂತಹು ದೊ ಯಂಬುವುದು ತಿಳಿಯದು । ಚಿಂತೆಯಲ್ಲವತೊರೆದು ಪರಿಶು । ದ್ಧಾಂತರಂಗದಿಪೋಗಿ ಹಮ್ಮಿಣಿಬೇಡುವುದೆ ವಳಿತು ॥ ೧೪ ॥

ಎನುತೆ ಸತಿಸುತರೆಲ್ಲರೊರೆಯಲು । ಸನುಮತಿಸಿಯೊಮ್ಮನದಿ ಸರ್ವರು । ಘನಮಹಿಮ ಬಸವಾರ್ಯರಿರ್ದೆಡೆಗಾಗಮಿಸಿ ನಮಿಸಿ ॥ ಅನಘರೂಪರೆ ತಮ್ಮಬಳಿನಾವ್ । ಧನವನೊಲ್ಲೆವು ತಾವುರಚಿಸಿ । ರ್ಪ ನುಪಮದ ಹಮ್ಮಿಣೆಯ ಮುದದಿಂದೀಯಬೇಕೆನುತೆ ॥ ೧೫ ॥

ಕರವಜೋಡಿಸಿ ಬೇಡಲಾಗಳ್ । ಪರಮಶ್ರೀಗಳು ಸ್ಮೇರಮು ಖದಿಂ । ಭರದೊಳವರಿಂಗಿತ್ತುಸುಖದಿಂ ಬಾಳಿರೆಂದೆನುತೆ ॥ ಹರುಷ ದಿಂ ಪರಸುತ್ತಲಲ್ಲಿಂ । ಪಿರಿದುಹಿತಕರವಾಗಿತೋರುತ । ಮೆರೆವ ಸ್ವ ಗ್ರಾಮಕ್ಕೆ ತೆರಳಿದರಂದು ಕುಶಲದೊಳು ॥ ೧೬ ॥

ಇತ್ತ ಗೌಡರು ಬಡವರಾದಡು । ವುತ್ತುಮದ ನಡತೆಯೊಳು
ನಡೆಯುತ। ಲರ್ಥಿಯಿಂದಂಬರುತಲಿರ್ಪಸಾಮಿಗಳಿಗಿರದೆ ॥ ಸತ್ಯದಿಂ
ದಲ್ಲಾಳಿತೆಗೆದುಕೊ । ಳುತ್ತಲುತ್ತುಮ ಹತ್ತಿಯರಳೆಯ । ನಿತ್ಯದಲಿ
ಕೊಡಿಸುತ್ತ ಜನಗಳಮುಮತೆ ಪೊಂದಿರಲು ॥ ೧೭ ॥

ಒಂದುದಿನ ಮಾರ್ವಾಡಿಯೋರ್ವನು । ಬಂದು ಮೇಲಾದರಳೆ
ಯನು ಭರ । ದಿಂದಕ್ರಯವನು ಮಾಡಿಕೊಡಿರೆಂದೆನುತೆ ಕೇಳಲ್ಕೆ ॥
ಚಂದಮಾದ್ಕೆವತ್ತು ಚಕ್ಕ್ಕಗ । ಳೆಂದುಗೌಡರು ಕ್ರಯವಮಾಡು
ತೆ । ಮುಂದೆಯೇ ಮಾಲೀಕರುಗಳಿಗೆ ಸಂಚಕಾರವನು ॥ ೧೮ ॥

ಕೊಡುತನಂತರದಲ್ಲಿ ತೂಕವ । ನೊಡನೆಗೈದು ಬಟಾರದೊಳು
ತುಂ । ಬಿಡಲುಬಂಡಿಗಳನು ಕ್ರಯದದ್ರವ್ಯವನು ತಾರಲ್ಕೆ ॥ ಸಡಗ
ರದಿಮಾರ್ವಾಡಿಪೋಗ । ಲ್ಕೊಡನೆ ಧಾರಣೆ ಮಂಧಮಾಗಿದೆ । ಕಡು
ತರೆಚ್ಚರಿಕೆಯೊಳು ಧಾರಣೆಗೈಯ್ಯುದೆಂದೆನುತೆ ॥ ೧೯ ॥

ಪತ್ರವದು ಭರದಿಂದಬಾರಲು । ಗೊತ್ತುಗೆಟ್ಟವನಾಗಿನಾಮು।
ನ್ನಿತ್ತಹಣವದು ಪೋದಡುಂಪೋಗಲಿಯೆನುತ್ತಾಗಳ್ ॥ ಉತ್ತುಮ
ದಮಾಲನ್ನು ಓಂದ । ಕ್ಕರ್ಥಿಯಿಂಬಿಡಲಿರದೆ ಬನಬಟೆ । ಸ್ತುತ್ಯ
ವಹಜನರುಗಳು ಗುಣಯುತಗೌಡರಂಕೂರ್ತು ॥ ೨೦ ॥

ಗೌಡರೇನಾವೀಗಸರ್ವರು । ಗೂಡಿನಿಮಗರಳೆಯನು ಬಹು
ಮುದ । ಗೂಡಿಯಿತ್ತಿರುತಿಹೆವು ಹಣವನು ನಾಲ್ಕುತಿಂಗಳೊಳು ॥
ನಾಡೆಸಲಿಸುವುದೆಮಗೆ ಪ್ರತಿಮನ । ಮಾಡದರಳೆಯ ತೆಗೆದುಕೊಳು
ವುದು । ನೋಡಲಿದರೊಳುನಿಮಗೆ ನಷ್ಟವುಸಂಭವಿಸದಿಹುದು ॥೨೧॥

ಎಂದೊರೆದಮಾತಿಂಗೆ ಗೌಡರು । ಸಂದೆಗವಪಡದಂತೆವಪ್ಪು
ಲು । ಮುಂದೆದಶದಿನಗಳೊಳೆ ನಾಲ್ವತ್ತೈದುಮಿರುತಿರ್ದ ॥ ಮುಂದ
ಧಾರಣೆಯುರಳೆಯದುದಿನ । ಕೊಂದು ಚಂದದಿಯೇರುತೇರುತ ।
ಬಂದುಮುಟ್ಟಿತು ಕೊನೆಗೆಯಪ್ಪತ್ತೈದರಕ್ರಯಕೆ ॥ ೨೨ ॥

ಅಂದುಗೌಡರುತಿಳಿದು ಘನಮುದ । ದಿಂದಮೂರಾಟವನುಮಾ
ಡಲ್ । ಬಂದಿತಾಗ ಸಹಸ್ರರೂಪ್ಯಂಗಳ ಸುಲಾಭವದು ॥ ಮುಂದಹಾ
ಸದಿಗೌಡರಾಗಳ್ । ಬಂದಮಾಲಿಕರಿಂಗೆ ಹಣಮಂ । ಚಂದದಿಂದ
ರ್ಪಿಸುತಜನಗಳ ಮಮತೆಪಡೆದಾಗಳ್ ॥ ೨೩ ॥

ವಸುಧೆಯೊಳು ಶ್ರೀಬಸವಸ್ವಾಮಿಗ । ಳಸಮತರದ ತ್ರಿಕಾಲ
ಜ್ಞಾನದಿ । ವುಸುರಿದಾಮುಹವಾಕ್ಯವದು ಸಟೆಯಾಗಲಿಲ್ಲವಲಾ ॥
ಎಸೆಯುತಿರ್ಪಿವರುರುಮಹತ್ವವ । ರಸನೆಯಿಂ ಪೊಗಳುವಡಳವೆ
ವರ । ಪಶುಪತಿಯೆ ಬಸವಾರ್ಯರವತಾರವನು ಧರಿಸುತ್ತೆ ॥ ೨೪ ॥

ಧರೆಗೆಬಂದಿಹನಿದರೊಳೇನುಂ । ಪಿರಿದುಸಂಶಯುಮಿಲ್ಲಮೆನುತ
ಲಿ । ಪರಿಪರಿಯತೆರದಿಂದ ಕೊಂಡಾಡುತ್ತಲತಿಮುದದಿ ॥ ಚರಬಸವ
ಯೋಗಿಗಳಸನ್ನಿಧಿ । ಗಿರದೆ ಪೋಗಿಸುಭಕ್ತಿಯಿಂದಲಿ । ಚರಣಗಳಿಗೆ
ರಗುತ್ತ ಕರಗಳಮುಗಿದುನಿಂತಾಗಳ್ ॥ ೨೫ ॥

ನೀನೆ ಜಗದಾಧಾರಭವಹರ । ನೀನೆ ಘನಸುಜ್ಞಾನಸಾಗರ ।
ನೀನೆ ಭಕ್ತರ ಪಾತಕೌಘವಕಳೆವ ಗುರುವರನು ॥ ನೀನೆ ಶರಣಾಗತರ
ಪಾಲಿಪ । ಮಾನನಿಧಿ ತವಚರಣನಂಬಿದ । ಮಾನವನೆ ಘನಧನ್ಯನೆ
ನಿಪನು ಲೋಕದೊಳುನೋಡೆ ॥ ೨೬ ॥

ಎಂದುನುತಿಸುತ ಪೂಜ್ಯರೇನಾ । ನಿಂದುತಮ್ಮಯ ಚರಣದ
ರ್ಶನ । ದಿಂದ ಪರಮಕೃತಾರ್ಥನಾದೆನು ಸಂಶಯುವದಿಲ್ಲಂ ॥ ಅಂ
ದುಗೃಹದೊಳು ತಾವ್ರಯೆನಗಾ । ನಂದದಿಂದಿತ್ತಿರ್ದಹಮ್ಮಿ್ಣಿ ।
ಯಿಂದು ತುಂಬಿರುತಿಹುದು ನೋಡಲು ತಮ್ಮಮಹವಾಕ್ಯಂ ॥ ೨೭ ॥

ರಸೆಯೊಳಗೆ ಪುಸಿಯಾಗಲಿಲ್ಲವ । ದಸಮಮುಹಿಮಾಪುರುಷರೆನಿ
ಸು । ಶ್ರೀಸೆವತಮ್ಮಯ ಪರಮಕೃಪೆಯದುದೊರೆದ ನಾವುಗಳೇ ॥
ವಸುಮತಿಯೊಳುರುಧನ್ಯಧನ್ಯರು । ಪಶುಪತಿಯ ಪರಮಾವತಾರದಿ
ಮಿಸುಪತಮ್ಮಯ ಸನ್ನಿಧಿಯೊಳಾನೊಂದುಬಿನ್ನೈಪೆ ॥ ೨೮ ॥

ಧಾರಿಣಿಯೊಳಿಮ್ಮ್ರಿಯ ಸುಜನ್ಮವ। ಸಾರಸತ್ಯಾಚಾರದಿಂದಲಿ। ಭೂರಿಸಾರ್ಥಕಗೊಳಿಸಿಕೊಳುವುದು ವುಚಿತಮಾಗಿಹುದು ॥ ವೀರಶೈವ ಪರಮುನಿತ್ಯಾ । ಚಾರಮಂ ವಿವರದೊಳುಬೋಧಿಸಿ । ಮೀರಿ ಕರುಣಾಮೃತದೊಳೆನ್ನುದ್ಧರಿಪುದನವರತಂ ॥ ೨೯ ॥

ಎಂದುಬೇಡಲ್ಯಾಗ ಯೋಗಿಗ। ಳಂದುಮುದಮಂತಾಳ್ದುಗೌಡರೆ। ಸಂಡನಿತ್ಯಾಚರಣೆಯನು ತಿಳಿದದರಪರಿಯಂತೆ ॥ ಚಂದದಿಂದಂ ನಡೆದುಕೊಳೆ ಪರ। ಮೇಂದುಧರನುರುಕೃಪೆಯುದೊರೆವುದು। ಸಂದೆಗವುಮಿನಿತಿಲ್ಲವಿದರೊಳು ವಿವರವಾಗೀಗಳ್ ॥ ೩೦ ॥

ಒರೆವೆನಾಲಿಪುದಾಗಸದೆಮಿಗೆ। ಮಿರುಪುತಿಹ ಪರಿಪೂರ್ಣತಾರೆಗ । ಳಿರುವಕಾಲವದುತ್ತಮವು ತೀವ್ರದೊಳವೆಲ್ಲಿರದೆ ॥ ಪರೆವಸಮಯವು ಮಧ್ಯಮವು ಪರ। ತರದಭಾಸ್ಕರನುದಯಕಾಲದ। ಹರಸಪೂಜೆಯೆ ತಿಳಿಯಲಧಮವು ನೆರೆತಿಳಿಯುತಿದನು ॥ ೩೧ ॥

ಜವದಿಹಾಸಿಗೆಯಿಂದ ಹರುಷದಿ । ಶಿವನಸ್ಮರಿಸುತಲೆದ್ದುಪರತರ। ಭವನರೂಪವದಾಧ ವರಶಿವಲಿಂಗಮೂರುತಿಯ ॥ ಪ್ರವಿದಿತದಭಕ್ತಿಯೊಳುಜುನಿಸಿ। ಜವದೊಳಂತರ್ಮಲವಿಮೋಚನ । ತವೆಯೆಸಗಿಮಿಗೆ ರಾಜಿಸುವ ಸುಬಹಿರ್ಪ್ರದೇಶದೊಳು ॥ ೩೨ ॥

ತೆರಳಿ ನಿರ್ಜನವಾದತಾಣದಿ। ಪಿರಿದುಮೌನದಿಕುಳಿತು ರಾಜಿಪ। ಗುರುತರದವಿಧಿಗಳೊಲು ಮಲಮೂತ್ರವನು ತ್ಯಜಿಸಿರದೆ ॥ ಪರಮಮೃತ್ತಿಕಶೌಚವನುಗೈ। ಪುರುತರದಿ ಕರಚರಣಗಳನತಿ। ನಿರುಮಲದಿ ತೊಳೆದಾಗರಾಜಿಪ ಬೇವುಚಿರಿಬಿಲ್ವ ॥ ೩೩ ॥

ಎಸೆವಮಾವಿನಕಾಷ್ಠಗಳತಂ । ದೊಸೆದುಮಿಸುಪೊಲು ದಂತಧಾವನ। ವೆಸಗಿಲಿಂಗೋದಕದಿ ಗಂಡೂಷವನುಮಾಡುತ್ತೆ ॥ ಸಸಿನೆಯಿಂಮುಖಮಜ್ಜನವಗೈ। ದಸಮುಘುಡಿವರ್ಗವನು ತಳೆದತಿ। ಮಿಸುಪವರಶಿವಪೂಜೆಗೃಹಕ್ಕೈತಂದು ಮುದದಿಂದೆ ॥ ೩೪ ॥

ಕ್ಷೋಳಪಷಟ್ಸಮ್ಮಾರ್ಜನೆಯ ಗೈ । ದೊಲವಿನಿಂ ಮಿಗೆ ರಂಗವ
ಲಿಯಿಂ । ಸಲೆಯಲಂಕರಿಸುತ್ತ ತನೆ ಪೂರ್ವಾಭಿಮುಖನಾಗಿ ॥ ಲಲಿ
ತಪದ್ಮಾಸನದಿ ಮಂಡಿಸಿ । ಚಲಿಸದೊಲುಮಿಗೆ ಮನವ ಸ್ಥಿರವನು ।
ಗೊಳಿಸಿ ಶಿವಲಿಂಗಾರ್ಚನೆಯನೆಸಗಲ್ಕೆ ಗೈದಿರುವ ॥ ೩೫ ॥

ವಿಳಸಿತದ ಸನ್ನಾಹಸಿದ್ಧತೆ । ಗಳನುಮಂತರತರದೊಳರಿಸುತ ।
ನಲವಿನಿಂದಂ ಮೊದಲು ಭಸ್ಮಸ್ನಾನವನ್ನೆಸಗಿ ॥ ಸುಲಲಿತದ ನೇಮ
ವನು ಮನದೊಳು । ತಿಳಿದು ವರವದನಾದಿಗಳಿಗತಿ । ಶೋಳಪಭಸಿ
ತೋದ್ಧೂಳನವ ಮುದದಿಂದಲೆಸಗುತ್ತೆ ॥ ೩೬ ॥

ಮಿಗಿಲೆನಿಪ ತ್ರೈಪುಂಡ್ರರುದ್ರಾ । ಕ್ಷಿಗಳ ಧರಿಸಿಕೊಳುತ್ತ ಹರಿ
ಯಜ । ರುಗಳಿಗತಿಶಯಪದವಿಗಳನಿತ್ತಿರದೆ ರಾಜಿಸುವ ॥ ಪಗಲಿರು
ಳು ಸ್ಮರಣೆಯನುಗೈದವ । ರಘುವನತಿಭರದಿಂದೆ ತೊಲಗಿಸಿ । ಜಗ
ದೊಳತಿಸುಖವೀವ ಪಂಚಾಕ್ಷರಿಯ ಮಂತ್ರವಿದು ॥ ೩೭ ॥

ಧರೆಯೊಳಗಣಿತಮಂತ್ರಕೋಟಿಗೆ । ಪರಮಮಾತೃಸ್ವರೂಪ
ಮೆನಿಸುತೆ । ನಿರುತಜಪಿಸುವನಿರದೆ ಸಾಕ್ಷಾಚ್ಛಿವನುಮೆನಿಸುವನು ॥
ಪರಮತರದೀಮಂತ್ರದಿಂದಲಿ । ಕರಮೆಸೆವ ಸಕಲೋಪಕರಣಗ ।
ಳಿರದೆ ಮುಂತೆಯೆ ಶುದ್ಧಿಗೈದಾನಂತರದಿ ಮೆರೆವ ॥ ೩೮ ॥

ವಿತತಶ್ರೀಶಿವಲಿಂಗಮೂರುತಿ । ಗತುಳವಾದೇಕಾಗ್ರಚಿತ್ತದಿ ।
ಅತಿಶಯದೊಳರ್ಘ್ಯಾದಿಮೇಣ್ಗಂಧೋದಕಾದಿಗಳಿಂ ॥ ಒತ್ತದೊ
ಳಭಿಷೇಕವನುಗೈದುರು । ಶಿತಿಗಳನರೂಪದೊಳು ಪೂಜಿಸಿ । ನುತಿಸಿ
ಮಿಗೆ ಭವಕುಜಕುಠಾರವದೆನಿಸಿ ರಾಜಿಸುವ ॥ ೩೯ ॥

ಶ್ರೇಷ್ಠತರಪಾದೋದಕವ ಘನ । ನೈಷ್ಠೆಯಿಂ ಸ್ವೀಕರಿಸಿ ಪರ
ತರ । ದಷ್ಟವಿಧದರ್ಚನೆಯ ಮೇಣುಪಚಾರಷೋಡಶದೊಳ್ ॥
ಇಷ್ಟಲಿಂಗವನರ್ಚಿಸುತಲು । ತ್ಕೃಷ್ಟಮೃಷ್ಟಾನ್ನವ ಸಮರ್ಪಿಸಿ ।
ಯಿಷ್ಟಫಲದ ಸುತತ್ಪ್ರಸಾದವನ್ನೈಷ್ಠೆಯಿಂ ಸವಿದು ॥ ೪೦ ॥

ವಿದಿತವಾಗಿಹ ತದ್ರಸವನತಿ । ಮುದದೊಳಂಗಕೆ ಲೇಪಿಸುತ
ಘನ । ಬಿದುಧರನ ಘನಕೃಪೆಗೆಪಾತ್ರರುಮಾಗಿ ನಿಜಸುಖವ ॥ ಪದು
ಳದಿಂ ಪೊಂದುವುದದಲ್ಲದೆ । ಸದಯಹೃದಯರುಮಾಗಿಮೆರೆದಾ ।
ಸದಮಳದ ಶ್ರೀರೇಣುಕಾದಿಗಳಿಂದೆ ಸ್ಥಾಪಿಸಿದ ॥ ೪೧ ॥

ವೀರಶೈವವ್ರತವ ಧರೆಯೊಳು । ಧೀರತನದಿಂ ಪಾಲಿಸುವ ಸು
ವಿ। ಚಾರಸ್ತ್ರೀಪುರುಷರ್ಕಳುರುಮುದದಿಂದೆ ಪ್ರತಿನಿತ್ಯಂ ॥ ಭೂರಿ
ಶುದ್ಧವದಾಡಮನಸದಿಂ । ಸಾರಮುಜ್ಜನವೆಸಗಿ ಘನಮುದ । ವೇರಿ
ತಮ್ಮಯದೇಪದೊಳುಮಿಗೆ ರಾಜಿಸುತಲಿರ್ಪ ॥ ೪೨ ॥

ಇಷ್ಟಲಿಂಗದಪೂಜೆಯನುಘನ । ನೈಷ್ಠೆಯಿಂದಲಿ ಗೈಯ್ಯ
ಬೇಕು । ತ್ಕೃಷ್ಟವಾಗಿರ್ಪಿಷ್ಟಲಿಂಗಕ್ಕರ್ಪಿಸದೆ ನಿರುತಂ ॥ ಸೃಷ್ಟಿ
ಯೊಳಗಾವುದನು ಸೇವಿಸ । ದಿಷ್ಟಲಿಂಗವ ಸತತಮಗಲದೆ । ಯಿಷ್ಟ
ಲಿಂಗದಪೊರತು ಮತ್ತಿತರಾವಮೂರುತಿಯಂ ॥ ೪೩ ॥

ಪರಮಮಾನಸದಿಂದ ಪೂಜಿಸ । ದುರುತರಷ್ಟಾವರಣ ಷಟ್
ಸ್ಥಳ। ಮೆರೆವ ಪಂಚಾಚಾರಗಳನಿರುತದೊಳುಮೆಡೆವಿಡದೆ ॥ ಸ್ಥಿರಮ
ನದಿಪಾಲಿಸಲುಬೇಕುರು । ತರದ ವೀರಶಿವವ್ರತನುಘನ । ದುರಿತಕರ
ಮದ್ಯಾಮಿಷಾದಿಗಳನ್ನು ಸೇವಿಸದೆ ॥ ೪೪ ॥

ಪರಮಶಾಕಾಹಾರಿಯಾಗಿಯೇ । ನಿರುತವರ್ತಿಸಬೇಕು ಭವಿ
ಗಳ। ಕರದಿಸ್ಪರ್ಶಿತವಾದ ಜಲವನ್ನಾದಿಪಾನಗಳ ॥ ಮರಣವದು
ವೊದಗಿದಡು ಸೇವಿಸ । ದುರುದುರಿತಹಿಂಸೆಯನುಗೈಯ್ಯುವ । ಪಿರಿ
ದು ಹೇಯುಗಳೆನಿಪ ಯಜ್ಞಾದಿಗಳನೆಸಗದಲೆ ॥ ೪೫ ॥

ವಿತತಧ್ಯಾನಸುಜ್ಞಾನಯುತ ಮೇ । ಣತುಳಮನಶುದ್ಧಾದಿ
ಯಜ್ಞಗ । ಳತಿಶಯದಿ ಸತತದೊಳು ನಡೆಸಲು ನಿರತನಾಗಿರುತೆ ॥
ಕ್ಷಿತಿಯೊಳಗೆ ಚಾಂದ್ರಾಯಣಾದಿ। ವ್ರತಗಳನುಮೆಸಗದಲೆಸ್ತ್ರೀಯ
ರು । ಸತತಭಾವಿಸೆ ಪಂಚಸೂತಕಗಳನು ಪಾಲಿಸದೆ ॥ ೪೬ ॥

ಪರತರದಲಿಂಗಾರ್ಚನಾವ್ರತ । ವುರುತರದಿ ಪಿಡಿದಿರ್ಪಕಾರಣ।
ಪರಮಲಿಂಗಾರ್ಪಿತವನೆಸಗದೆ ಭೋಜನಾದಿಗಳ ॥ ನಿರುತಮೆಸಗಲು
ಬಾರದದರಿಂ । ಕರಮೆಸೆವ ಸ್ತ್ರೀಯರುಗಳಖಿಳರು । ಮಿರದೆಕ್ರಮ
ದಿಂ ಪುಷ್ಪವತಿಯರದಾಗಳುಂಮೆರೆವ ॥ ೪೭ ॥

ಭೂರಿಲಿಂಗಾರ್ಚನೆಯನೆಸಗಲು । ವೀರಶೈವರಧರ್ಮವಿರ್ಪು
ದು । ನಾರಿಯರಿಗುಂಪುರುಷರಂತೆ ಸಮಾನವಿರುತಿಹುದು ॥ ವೀರಶೈ
ವನುಮರಣಪೊಂದಲು । ಚಾರುಲಿಂಗವದೆಂದುಭಾವಿಸಿ । ಸಾರ
ಸಂಸ್ಕಾರದೊಳು ನಿಕ್ಷೇಪಿಸುವುದವನಿಯೊಳು ॥ ೪೮ ॥

ಎನುತಲುಸುರಲ್ಕಾಗಗೌಡರು । ಚಿನುಮಯನರೂಪರನು
ವಂದಿಸಿ । ಘನತರದತಮ್ಮಯ ಸುಬೋಧಾಮೃತದಿನಾನೀಗಳ್ ॥
ಅನುನಯದಿ ಧನ್ಯತೆಯವಡೆದೆನು। ಯೆನುತಪೇಳಲ್ಕಾಗಶ್ರೀಗಳು।
ಮನವೊಲಿದುನಾನೊರೆದಪರಿಯಂತಿರದೆ ಚರಿಸಿದಡೆ ॥ ೪೯ ॥

ಪುರಹರನ ಕೃಪೆಯಾಗಿ ಜವದಿಂ । ಧರೆಯೊಳತಿಸೌಖ್ಯವನು
ಪೊಂದುತ । ಲಿರದೆಯಂತ್ಯದಿ ಪರಮಪದವಿಯಪಡೆದು ನಿಜಸುಖ
ವ ॥ ನಿರುತಮನುಭವಿಸುವಪ್ರಸಂಗವು । ದೊರೆವುದಿದುನಿಜಮೆನುತ
ಗೌಡರ । ಪರಸುತಪ್ಪಣೆಯಿತ್ತು ಸ್ವಗ್ರಾಮಕ್ಕೆ ಕಳುಪಿದರು ॥೫೦॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೋಣ
ಕ್ಷರಗಳಲಿ ಷಟ್ಪಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು
ಮುದದಿಕೇಳುವುದಾರನೆಯಸಂಧಿ ॥ ೫೧ ॥



ಸಂಧಿ ೬ ಕ್ಕಂ ಪದ ೩೦೫ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.

॥ ಶ್ರೀ ಸೀಲಕಂಠಾಯನಮಃ ॥

# ಏಳನೆಯ ಸಂಧಿ.



ಸೂಚನೆ:—— ಪರಮಚರಬಸವಾರ್ಯ ಶೀರೆಯ ।
ವರಮಹತ್ವವತೋರಿಯುಸುರಿದ ।
ನುರುಗೃಹಸ್ಥಾಶ್ರಮದ ಧರ್ಮವಥೌಜುದಾರನಿಗೆ ॥

ಧರೆಯುರಥವಾಗಿರಲು ವರಶಶಿ । ತರಣಿಚಕ್ರಗಳಾಗೆ ಪೊಳೆಯುವ । ಪರಮಪಳಿವಾತುಗಳು ರಾಜಿಪಹಯಗಳಾಗಲ್ಕೆ ॥ ಮೆರೆವ ಚಾಪವದಾಗಿಮೇರುವು । ಪರಮಹರಿಶರವಾಗೆ ತ್ರಿಪುರದ । ನೆರೆಮದಿಸಿದಸುರರಸು ಜಯಿಸಿದಹರಗೆ ವಂದಿಪೆನು ॥ ೧ ॥

ಒಂದುಧಿನಬಸವಾರ್ಯ ಪರಮಾ। ನಂದದೊಳು ಯಡರಾಮಿಸಂತೆಗೆ । ಸಂದಪ್ರಾಮಾಣಿಕದೆ ಜನಳಿಯವಾರಲುಂಪೋಗಿ ॥ ಚಂದಚಂದದ ಜನಳಿಬಿಚ್ಚುತೆ। ಬಂದಜನರಿಗೆ ಕ್ರಯಕೆವಾರುತೆ। ಮುಂದಹಾಸದಿ ಕುಳಿತುಕೊಂಡಿರಲೋರ್ವಕಡುಚೋರಂ ॥ ೨ ॥

ಚೊಕ್ಕನಡತೆಯ ಚರನುಮಿಟ್ಟಹ । ಪಕ್ಕದಂಗಡಿಯೊಳಗೆ ವಡೆಯನ। ದೃಕ್ಪಥಕೆಬೀಳದೊಲು ಶೀರೆಯ ಕದಿದುಕೊಳ್ಳುತ್ತ ॥ ಅಕ್ಕರತೆಯಿಂಪೋಗುತಿರುತಿರೆ। ಪಕ್ಕದೊಳೆ ಕದಿಯುವುದನೋಡುತೆ। ನಕ್ಕುನಗಿಸುತೆ ಕುಳಿತುಕೊಂಡಿರ್ದೋರ್ವನವಯದ ॥ ೩ ॥

ತರುಣಪೋಲೀಸಾಧಿಕಾರಿಯು। ಭರದೆಚೋರನಬೆನ್ನುಹತ್ತುತ। ಲಿರದವನಪಿಡಿಯುತ್ತಘರ್ಜಿಸಿ ಬೆದರಿಕೆಯಹಾಕಿ ॥ ಕರದೊಳಗೆ ನೀಂಪಿಡಿದುಕೊಂಡಿ। ರ್ಪರುಣವರ್ಣದಶೀರೆಯನು ನೀ। ನಿರದೆಯಲ್ಲಿಂತಂದೆ ಪ್ರಾಮಾಣಿಕದೆ ಪೇಳೆನೆಲು ॥ ೪ ॥

ಚೋರನಾಕ್ಷಣಕಂಪಿಸುತಲಸ । ಪಾರ ಚರಬಸವಾರ್ಯರೊಳು ನಾಂ । ಮಾರಲಿದತಂದಿರುವೆ ಪುಸಿಯಲ್ಲೆನುತೆಪೇಳಲ್ಕೆ ॥ ಚೋರಕ್ಕ್ರತ್ಯದಿತಂದಶೀರೆಯ । ಚಾರುಬಸವಾರ್ಯರೊಳು ತಂದಿ । ನ್ನಾರೊಳುಂ ತರಲಿಲ್ಲವೆನ್ನುತಲುಸುರುವೆಯಮೂರ್ಖ ॥ ೫ ॥

ಎಂದುಪೋಲೀಸಾಧಿಕಾರಿಯು । ಕಂಧರದೆಕರವಿಟ್ಟು ನೂಕುತ । ಲಂದು ವರಮತಿಫೌಜುದಾರನಬಳಿಗೆ ಕರದೊಯ್ಯು ॥ ಮಂದಮತಿಯುತಚೋರಗೈದುದ । ನೊಂದುಳಿಯದಂತುಸುರಲಾಕ್ಷಣ । ತಂದಶೀರೆಯ ತಮ್ಮಪೆಟ್ಟಿಗೆಯೊಳಗೆ ಮಡಿಗಿಸುತೆ ॥ ೬ ॥

ಪರಮತೇಜಿಯನೇರಿಭರದಿಂ । ಪರತರೋನ್ನತಫೌಜುದಾರನು । ಪೊರಟು ತನ್ನಯಪಿಂದೆ ಚೋರನಕರೆದುಕೊಳುತಾಗಳ್ ॥ ಹರಶರಣಬಸವಾರ್ಯರಿರುತಿಹ । ಪರಮತಾಣಕೆಬಂದು ಹಯದಿಂ । ದಿರದಿಳಿದು ತಸ್ಕರನ ಮೊಗದಿದಿರಿನೊಳು ನಿಲಿಸಲ್ಕೆ ॥ ೭ ॥

ಚಾರುಚರಬಸವಾರ್ಯನೋಡಿ ವಿ । ಚಾರಿಸಿದರಿವನಾರೆನುತ್ತಂ । ಸಾರಮತಿಯುತಫೌಜುದಾರನು ಹರುಷದಿಂದಾಗಳ್ ॥ ಚಾರುಮತಿಗಳೆ ಯಿವನುನಿಮ್ಮಯ । ಶೀರೆಯಂಗಡಿಯೊಳಗೆ ಶೀರೆಯ । ಮಾರುವುದಕೆಂದೆನುತೆ ವಿಕ್ರಯವಮಾಡಿದುದು ನಿಜವೇ ॥ ೮ ॥

ಎಂದುಕೇಳಲು ಬಸವದೇವನು । ಮಂದಹಾಸದಿ ಶೀರೆಯನುನಾ । ನಿಂದುನೆರೆನೋಡೊರೆವೆಯಮ್ಮದು ಪರರದೆಂಬುದನು॥ ಎಂದುಪೇಳಿದವಚನಕೇಳು । ತ್ತಂದುಧೀಮತಿಫೌಜುದಾರನು । ಮಂದಹಾಸದ ಚದುರಪೋಲೀಸಾಧಿಕಾರಿಯನು ॥ ೯ ॥

ಶೀರೆಯಂತರುವುದಕೆ ಕಳುಹಲು । ಚಾರುಮತಿಯುವಬಂದು ತವಕದಿ । ಶೀರೆಯನು ಮಡಗಿರ್ದಪೆಟ್ಟಿಗೆ ತೆಗೆದುನೋಡಲ್ಕೆ ॥ ಶೀರೆಶೀವ್ರದಿಮಾಯವಾಗಿರೆ । ಸಾರಗುಣಯುತನವಜವಾನನು । ಚೋರನಿರದೈತಂದು ನಡೆದಿಹ ಸಂಗತಿಯನುಸುರೆ ॥ ೧೦ ॥

ಆಗಳಾವರಫೌಜುದಾರನು । ಬೇಗಪರಮಾಶ್ಚರ್ಯಪೊಂದು।
ತ್ತೀಗಿದೇನಿದು ಚೋದ್ಯವೆನುತಾಲೋಚಿಸುತ್ತಿರದೆ ॥ ಬೇಗಚೋರ
ನು ಕದಿದತಾಣಕೆ । ಪೋಗಿಕೇಳುವನಡೆಯೆನುತ್ತಲಿ । ಪೋಗಿಯಂ
ಗಡಿವಡೆಯನಂ ವಿವರದಲಿಕೇಳಲ್ಕೆ ॥ ೧೧ ॥

ಅವನು ಶೀರೆಗಳೆಲ್ಲವನುಬಹು । ವಿವರದಿಂದೆಣಿಸುತ್ತಲವರಿಗೆ।
ಜವದಿಪೇಳಿದ ಶೀರೆಯುವೊಮ್ಮಳು ಕಳವದಾಗಿಲ್ಲ ॥ ನವಜವಾನನು
ಕೇಳುತೀವಚ । ನವನು ಶೀರೆಗಳಲ್ಲಿಯೊಂದನು । ತವಕದಿಂದಂ ತೆಗೆ
ದುಕೊಳುತೀತೆರದೊಳೆಸೆಯುತಿಹ ॥ ೧೨ ॥

ಶೀರೆಯಂ ಕದಿದಿರ್ಪನೆನುತಲಿ । ತೋರಿಸುತ್ತಿರುವನಿತರೊಳೆ
ಸುವಿ। ಚಾರಿಜನಗಳು ಕೂಡಿದರುಕಿಕ್ಕಿರಿವವೋಲಾಗಲ್ ॥ ಚಾರು
ತರದಿ ವಿಚಾರಿಸಲ್ಕಿವ । ಚೋರತನಮಾಡಿರ್ಪುದಿದುನಿಜ । ಮಾದೊ
ಡಂ ಘನಮಹಿಮರಾಗಿಹ ಬಸವಸ್ವಾಮಿಗಳ ॥ ೧೩ ॥

ಪರಮನಾಮವ ಪೇಳಿಕೊಂಡುದ । ಕಿರದವರುಮೀತಸ್ಕರನ
ಘನ । ತರದ ಸಂಕಟದಿಂದಲುಳಿಸಲ್ಕೀಗಳಿಂತಪ್ಪ ॥ ಪರಮತರಮಾ
ಹತ್ಮ್ಯವನುತೋ । ರಿರುವರಿದು ನಿಜವೆನುತೆಜನಗಳು । ಹರುಷದಿಂದ
ಲಿ ಸಾರಿಸಾರಿಯೆ ಪೇಳುತಿರಲಂದು ॥ ೧೪ ॥

ಇಂತುಪೇಳಿದವಾಕ್ಯಗಳನು ಸ । ಮಂತುಕೇಳುತೆ ಫೌಜುದಾ
ರನು । ಭ್ರಾಂತಿಯಲ್ಲವಕೊರೆದು ಪರಮಚ್ಚರಿಯಪೊಂದುತ್ತೆ ॥
ಕಂತುಹರಸಮರೂಪರಿವರ । ತ್ಯಂತಮಹಿಮಾಶಾಲಿಗಳು ನಿಜ ।
ವಿಂತುತಿಳಿಯುತ್ತಂತರಂಗದೆ ಭಕ್ತಿಯಾಂತಳೆದು ॥ ೧೫ ॥

ಪರಮಸಂಭ್ರಮದಿಂದ ಶ್ರೀಗುರು । ಚರಬಸವಯೋಗಿಗಳ
ಚರಣ । ಕ್ಕಿರದೆ ಕರಗಳಮುಗಿದು ಕೊಂಡಾಡಿದನು ವಿನಯದಲಿ ॥
ಹರಪದಾಂಬುಜಭೃಂಗ ಸಜ್ಜನ । ವರದತುಂಗಕೃಪಾಸುಧಾರಸ ।
ಶರಧಿ ನತಜನಕಮರಭೂರುಹ ದೀನರಕ್ಷಕನೆ ॥ ೧೬ ॥

ಅಲಘುಶ್ರೀಯತಿವರ್ಯನಿನ್ನಯ । ತೊಳಪಪದದರ್ಶನದಿ ಜನ್ಮ ವು । ಫಲಿತವಾದುದು ನಾವುಪುಟ್ಟಿದಕೀಗಸಾರ್ಥಕವು ॥ ಕಲಿಮಲಾ ಪಹನಿಮ್ಮಸದ್ಗುಣ । ಮಲಿನಗುಣಪಾಪಾತ್ಮರಿಗೆತಾ । ಸುಲಭವೇ ನಿಮ್ಮಂತೆ ಸುಕೃತಿಗಳಾರು ಲೋಕದೊಳು ॥ ೧೭ ॥

ಎಂದುಕೊಂಡಾಡುತ್ತ ವಿನಯದೊ । ಳಂದು ಪೂಮಾಲೆಯಸ ಮರ್ಪಿಸಿ । ವಂದಿಸುತನಿಂತಿರ್ದು ಚೋರನಬಳಿಗೆಕರೆಬಾಗಳ್ ॥ ಮುಂದೆಯಿಂತಹಕಾರ್ಯವನುನೀ । ನೆಂದುಗೈಯಲಿಬೇಡವೆನುತಾ । ನಂದದಿಂ ಬುದ್ಧಿಯನುಪೇಳುತೆ ಗೃಹಕೆಕಳುಹಿಸುತೆ ॥ ೧೮ ॥

ಗುರುವರನೆ ನಾನಿಮ್ಮಮುಖದಿಂ । ವರಗೃಹಸ್ಥಾಶ್ರಮದ ಧರ್ಮವ । ನರಿದುಕೊಳಬೇಕೆಂಬ ಬಯಕೆಯು ಪುಟ್ಟಿಹುದುಮೀಗ॥ ಹರುಷದಿಂದೊರೆದೆನ್ನಜನ್ಮವ । ನಿರದೆಧನ್ಯವಗೈಯಬೇಕೆನು । ತುರುತರದವಿನಯದೊಳು ಕರಗಳಮುಗಿದು ಬೇಡಿಕೊಳೆ ॥ ೧೯ ॥

ಧೀರಧೀಮತಿಘೌಜುದಾರರೆ । ಧಾರುಣಿಯೊಳೀಯಾಶ್ರಮದ ಘನ । ಸಾರವರಿವುದು ಪ್ರತಿನರನಕರ್ತವ್ಯವಾಗಿಹುದು ॥ ಭೂರಿ ವಿವರದೊಳುಸುರುವೆನುಮುದ । ವೇರಿ ಕೇಳುವುದೇಕಚಿತ್ತದಿ । ಮಾ ರಹರನಿಮಗೀವನತುಳ ಸುಕುಶಲವಿದುಸತ್ಯಂ ॥ ೨೦ ॥

ಕ್ರಮದೆಪರತರಬ್ರಹ್ಮಚರ್ಯಾ । ಶ್ರಮದೊಳುರುಗುರುಕುಲ ದೊಳಿರ್ದು । ಶ್ರಮದೆವೇದಾಧ್ಯಯನವೆಸಗಿ ಸುಗುರುವಿನಪ್ಪಣೆಯ॥ ಸುಮನದಿಂಪಡೆಯುತ್ತಭುವಿಯೊಳು । ಸುಮುದದಿಂಪರಬೊಮ್ಮ ನಿಂದಲಿ । ಕ್ರಮದೆನಿರ್ಮಿತವಾದಮಾನವತಂತುವಿಚ್ಛೇದಂ ॥೨೧॥

ಆಗದೊಲು ಪಿತೃರುಣವಿಮೋಚನ । ಕಾಗಿ ವರಗಾರ್ಹಸ್ಥ್ಯವ ನುಮನು । ರಾಗದಿಂಕೈಕೊಳಲುಬೇಕೆನುತಿರ್ಪ ಶ್ರುತಿಮತದೆ ॥ ರಾಗ ದಿಂದ ಸ್ವಜಾತಿಯೊಳೆಘನ । ವಾಗಿ ಮಿಸುಪಸಲಕ್ಷಣದ ಮೇಣ್ । ರೋಗವಿಲ್ಲದಕನ್ಯೆಯನು ವಿಧಿವತ್ ಪರಿಗ್ರಹಿಸಿ ॥ ೨೨ ॥

ನಿರುತವರಶ್ರುತಿಸೂಕ್ತಪರಿಯೊಳು । ಪರಮನಿತ್ಯಾದಿಕಸುಕ
ರ್ಮವ । ಸುರುತರದಗುರುವರನ ಮಾತಾಪಿತರಸೇವೆಯನು ॥ ವರ
ಸದಾಚಾರತ್ವಮಂ ಪಿಡಿ । ದರಿದುನಡಸುತಸತತ ತನ್ನಯ । ಪರಮ
ಸಂಸ್ಕೃತಳಾದ ಸುಗುಣಿಸುಧರ್ಮಪತ್ನಿಯೊಳು ॥ ೨೩ ॥

ವಿತತಸಂತಾನಾರ್ಥವಾಗಿಯೆ । ರುತುಸಮಯವರಿದಿರದೆಕೂ
ಡು । ತ್ತತುಳ ವಿಷ್ಣುರ್ಯೋನಿಯಿಂತೆನುತಿರ್ಪಸಾರತರ ॥ ಶ್ರುತಿಯ
ಗರ್ಭಾದಾನಸೂಕ್ತವ । ನತಿಹಿತದೆಪಠಿಸುತ್ತಮನದೊಳು । ಸತತ
ನಿಜಸುಖಕೆಂಬುದಸು ತೊರೆಯುತ್ತಲಿದುಜಗದೆ ॥ ೨೪ ॥

ಪರಮಶಿವಶಕ್ತ್ಯೈಕ್ಯವೆಂದರಿ । ದಿರದೆ ಹರುಷದಿರಮಿಸಿ ಪುತ್ರರ।
ಭರದೆಪಡೆದುರು ಪಿತೃರುಣಪಂಕಳೆದು ಮುದವಾಂತು ॥ ಪರಮರಾ
ಮನಳತ್ರಿಗೌತಮ । ಮೆರೆವಜನಕಾದಿಗಳ ತೆರದೊಳು । ಧರೆಯೊಳ
ಗೆತಾನೇಕಪತ್ನೀವ್ರತವಕಾಯುತ್ತೆ ॥ ೨೫ ॥

ಅನವರತಗುರುದೇವತಾಘನ । ವಿನುತತೀರ್ಥಸುಯಾತ್ರೆಮೋ
ಣುರು । ಮಿನುಪಧರ್ಮಾಚರಣ ವರಸಂಸಾರಭರಣಾದಿ ॥ ಘನತೆಕಾ
ರ್ಯಂಗಳಿಗೆಮಾತ್ರಂ । ಸನುಮತದೆ ಪರಧರ್ಮವನು ತಿಳಿ । ದನಿಶ
ದ್ರವ್ಯಾರ್ಜನೆಯನೆಸಗುತ ಸ್ವಾರ್ಥಕಲ್ಲದಲೆ ॥ ೨೬ ॥

ದೇವತಾಭಿಕ್ಷಾರ್ಥವಾಗಿಯೆ । ಭಾವಶುದ್ಧಿಯೊಳ್ಪಾಕಗೈಯು
ತ । ಸಾವಧಾನದಿಭುಜಿಸಿ ಶಿವಸಂಸ್ಕೃತವದಲ್ಲದಿಹ ॥ ಆವುದನು
ಸ್ವೀಕರಿಸದಲೆಮಿಗೆ । ಪಾವನದ ನಿಜಧರ್ಮಮಂ ಘನ । ಭಾವ
ಜಾಂತಕರೂಪ ಗುರುಪಿತೃಮಾತೃಗಳಪರಮಾ ॥ ೨೭ ॥

ನುಡಿಗಳನುನಡೆಸುತ್ತಪೊರೆಯುವ । ಪೊಡವಿಪತಿಗಾಗ್ರಹವ
ಪುಟ್ಟಿಸ । ದೆಡೆವಿಡದೆ ತಾನೀವಸುಂಧರೆಯೊಳಗೆ ಸ್ಥಿರವಾಗಿ ॥ ಸಡ
ಗರದೊಳಿರುತಿರ್ಪನೆನುತಂ । ದೃಢಮನದೆ ಧನವಿದ್ಯೆಗಳನುಂ । ಬಿಡ
ದೆಕೂಡಿಡುತಿರ್ದು ಪರುಕಿಸೆ ತಾನುಕ್ಷಣಜೀವಿ ॥ ೨೮ ॥

ಎಂದುಸತ್ಪಾತ್ರದೊಳು ಧನವನು । ಚಂದದಿಂತ್ಯಾಗವನುಮಾ
ಡಿ ವ । ಸುಂಧರೆಯೊಳುರು ಧರ್ಮಸಂಗ್ರಹವೆಸಗಿತಾಮುದದೆ ॥
ಇಂದುಕಾಲಕೆತಕ್ಕತೆರದೊಳು । ಪೊಂದಿಕೊಳುತಲಿವರ್ತಿಸಿದೊಡಂ।
ಸಂದಜೀವಕ್ಕಿಂತ ಮಿಗಿಲಾಗಿರ್ದುಜಗದೊಳಗೆ ॥ ೨೯ ॥

ಮೆರೆವನಿಜಧರ್ಮವನು ತ್ಯಜಿಸದೆ । ದುರಿತಕರನಿಷ್ಠುರವನಾ
ಡದೆ । ಪರಮತರಪರಲೋಕಚಿಂತೆಯ ಮರೆಯದಂತಿರುತೆ ॥ ಉರು
ತರದಕಷ್ಟವದುಮೊದಗಲ್ । ನಿರುತಧೈರ್ಯವಬಿಡದೆ ದೃಢದಿಂ ।
ಗುರುತರದ ಸತಿಸುತರನತಿಕ್ರಮಿಸದೊಲು ಚತುರತೆಯಿಂ ॥ ೩೦ ॥

ಉತ್ತಮದರೀತಿಯೊಳಗಾಳುತ । ಲತ್ಯಧಿಕಸಂಪದವು ದೊರೆ
ಯಲು । ದಾತ್ತರೀತಿಯೊಳೆಸೆವಪರಿಮಳಕುಸುಮದೊಲು ಪಿರಿದು ॥
ಸ್ತುತ್ಯವಹಸದುಹೃದಯನಾಗುತೆ । ಚಿತ್ತಕತಿಭಯವೀವ ಕಷ್ಟಗ।
ಳೊತ್ತಿಬರಲುರುಶಿಲೆಯಪರಿಯೊಳು ಕಠಿನತರವಾದ ॥ ೩೧ ॥

ಚಿತ್ತಮುಳ್ಳವನಾಗಿ ಬಾಲ್ಯದೊ । ಳುತ್ತಮದ ವಿದ್ಯೆಗಳಕಲಿ
ಯುತ । ಮತ್ತೆಯವ್ವನದೊಳಗೆ ಧನವನುಗಳಿಸಿ ಭೋಗಿಸುತೆ ॥ ಸತ್ಯ
ಜಸಗಳಪಡೆದು ಜರೆಯೊಳು । ಚಿತ್ತಜಾರಿಯಸ್ಮರಣರತನಾ । ಗುತ್ತ
ಲಂತ್ಯದಿ ಭಕ್ತಿಯೊಳು ಶಿವನೊಳಗೆ ಬೆರೆಯುವುದು ॥ ೩೨ ॥

ಪರಮಸಜ್ಜನಸಂಗ ಸತ್ಯಾ । ದರಣೆದಿಟನುಡಿ ಭೂತದಯೆ
ಕ್ಷಮೆ । ಪಿರಿದುಸವಿನುಡಿ ಸುದಯಸಾತ್ವಿಕವೃತ್ತಿಸರಳತ್ವ ॥ ಉರುತ
ರದಧೀರತ್ವದೃಢಮನ । ನೆರೆವಿವೇಕಸುಶೀಲ ಘನಜಸ । ವರಸದಾ
ಚಾರತ್ವಮಿಂದ್ರಿಯನಿಗ್ರಹವಹಿಂಸೆ ॥ ೩೩ ॥

ಇಂತಖಿಲಸದ್ಗುಣದೆಕೂಡಿ ಸ । ಮಂತುಕಾಲವವ್ಯರ್ಥಕಳೆ
ಯದೆ । ಸಂತತದಲುದ್ಯೋಗವಂಬಿಡದಿಹ ಪರದಸುಖವ ॥ ಸಂತಸದೆ
ಸಾಧಿಸುತ ಬಹುಪರಿ । ಯಂತರಂಗದೆ ಮಂದತನವ ನಿ । ರಂತರಂ
ತೊರೆಯುತ್ತಗುರುತರ ಜಾಗರೂಕತೆಯಿಂ ॥ ೩೪ ॥

ಅನಿಶಪರಮಪ್ರಯತ್ನವೆಸಗುತ । ಲನುಪಮದನೀತಿಯೊಳು
ದೃಢದಿಂ । ಘನತೆಕಾರ್ಯಂಗಳನು ಜಯಿಸುತ ಸಜ್ಜನರಪಥವ ॥
ಅನವರತಮೀರದಲೆ ಶೀಲದೊ । ಳನುಕರಿಸಿ ಪರದಾರವರ್ಜಿತ ।
ನೆನಿಸಿ ವರಜ್ಞಾನಾದಿಶಿವವಿಷಯದೊಳು ತೃಪ್ತಿಯನು ॥ ೬೫ ॥

ನಿರುತಪೊಂದದೆ ತರುಗಳಂತೆಯೆ । ವರಸ್ವಕಾರ್ಯವನುಳಿದು
ಹರುಷದೊ । ಳುರುತರದ ಸುಪರೋಪಕಾರವನೆಸಗುತಾತ್ಮಸ್ತುತಿ ॥
ಪರರನಿಂದೆಗಳನ್ನುಗೈಯದೆ । ನೆರೆಯತಿಥಿಯಭ್ಯಾಗತರ ಸ । ತ್ಕರಿ
ಸುತಲಿ ನಂಬಿರ್ದಜನಗಳತೊರೆಯದಂತಿರುತೆ ॥ ೬೬ ॥

ದುರಿತಕೃತ್ಯಗಳೆಸಗದವಿರತ । ಪರರಗುಣಪರಮಾಣುಸದೃಶ
ವ । ದಿರಲುಪರ್ವತದಂತೆ ಶ್ಲಾಘಿಸುತಿರುತ ಧರೆಯೊಳಗೆ ॥ ಪಿರಿದು
ಮರಣಾವಸ್ಥೆಯೊದಡು । ದುರುಳನೊಳುಬೇಡದಲೆ ಬೇಡಿದ । ನರರಿ
ಗೆಂದಿಗು ನಾಸ್ತಿಯನ್ನದೆಯೀಯುತಂಸರ್ವಾ ॥ ೬೭ ॥

ಅಲಘುದೈವಾಧೀನವೆಂದರಿ । ದಲಸಭಾವದೊಳಿರದೆಸಂತತ ।
ಪಲತೆರದ ಪುರುಷಪ್ರಯತ್ನವ ಗೈಯುತಲಿಮತ್ತಂ ॥ ಇಳೆಯೊಳಗೆ
ಸತಿಪುತ್ರಬಾಂಧವ । ಬಳಗವೆಲ್ಲವನಿತ್ಯಮೆನುತಲಿ । ತಿಳಿದವರೊಳತಿ
ರಾಗವನುತೋರದಲೆ ಸಂತತದೆ ॥ ೬೮ ॥

ತನ್ನದೇಹವಸುಖದೊಳಿಡುತಂ । ತನ್ನಮಾನವಕಾಯ್ದುಕೊ
ಳುತಂ । ಭಿನ್ನಗುಣದಿಂ ಮಿತ್ರಸ್ವಾಮಿದ್ರೋಹವೆಸಗದಲೆ ॥ ಉನ್ನ
ತದ ಶಿವಕಥೆಯಶ್ರವಣವ । ನನ್ನಿಯಿಂ ಪಗಲಿರುಳುಕೇಳುವ ।
ಸನ್ನುತದಬಯಕೆಯನುಪೊಂದುತಹಿತವಗೈದರ್ಗೆ ॥ ೬೯ ॥

ಘನಕೃತಜ್ಞತೆ ತೋರುತವನಿಯೊ । ಳನಿಶಮುಳಿದಾಶ್ರಮಿಗ
ಳಿಗೆಬಹು । ವಿನಯದಿಂಪೋಷಿಸುತಲೆಡರಿನೊಳ್ಬಿಡದೆಧರ್ಮವನು ॥
ಅನುಸರಿಸಿ ವರಗೃಹಿಣಿಯೊಡನತಿ । ಸನುಮತದೆ ಗೃಹಮೇಧಿಯಾ
ಗುತ । ಲನುಪಮಪುರಾತನರಪದ್ಧತಿ ಪಾಲಿಸುತ ಸತತ ॥ ೭೦ ॥

ಧರಣಿಯೊಳುಮೊದಲಿರ್ದ ಪೂರ್ವಜ । ರುರುತರದ ಪರಮೇತಿ
ಹಾಸವ । ನಿರದೆಮುನನವಗೈದು ಪುರುಷಾರ್ಥಗಳಪೊಂದುತ್ತ ॥ ನೆರೆ
ವಿರಾಜಿಪಪುರುಷನೇಗೃಹಿ । ಗುರುತರದಕಾರ್ಯಗಳನೆಸಗುತ । ಪರಮ
ಪಾತಿವ್ರತವಕೈಗೊಂಡವಳೆ ವರಗೃಹಿಣಿ ॥ ೪೧ ॥

ನಿರುತಕೈಯ್ಯಾಸೆಯನುಮಾಡದ । ಲಿರುವವನೆನಿಜಮಂತ್ರಿ
ಪಿತೃಗಳ । ಹರುಷದಿಂಪೊರೆವವನೆ ನಿಜಧಾರ್ಮಿಕನುಮೆನಿಸುವನು॥
ಪರಮದೈವವ ದೃಢಮನಸಿನೊಳು । ನೆರೆಭಜಿಸುತಿರ್ಪವನೆಭಕ್ತನು ।
ಮರೆವವಡಲಾಸೆಯನು ತೊರೆದಿರ್ಪವನೆ ಕಡುಶೂರಂ ॥ ೪೨ ॥

ಬಿಡದೆವರಧರ್ಮವನು ತಿಳಿದುರು । ಬಡವರಂಬಳಲಿಸದವರೊ
ಳಿ । ರ್ದೊಡವೆಗಾಶೆಯ ಗೈಯದವರೊಡನಿರ್ಪವನೆ ಧನಿಕಂ ॥ ಎಡೆ
ಬಿಡದೆ ಪಂಚಾಗ್ನಿಮಧ್ಯದೆ । ದೃಢಮನದೆ ಘನಮೃಡನೊಳಗೆಮನ ।
ವಿಡುತ ದೇಹವಕ್ಷೀಣಗೊಳಿಸುವ ಕಾರ್ಯಮೇನುಂಟು ॥ ೪೩ ॥

ಅಧಿಕತರದಾಯಾಸಮಿಲ್ಲದೆ । ವಿದಿತಮಾಗಿಹ ಸರ್ವಸುಖಗಳ ।
ಮುದದೆಇಹದೊಳು ಭೋಗಿಸುತ ಪರದೊಳಗೆನಿರುತದೊಳು ॥ ಬಿದು
ಧರನೊಳೈಕ್ಯವನುಪೊಂದುತ । ಪದುಳದಿಂನಿಜಸುಖವಪಡೆಯುವ ।
ಸದಮಳಗೃಹಸ್ಥಾಶ್ರಮಕೆ ಮಿಗಿಲಾದತಪಮುಂಟೆ ॥ ೪೪ ॥

ಧರೆಯೊಳಗೆಪೂರ್ವದೊಳುರಾಜಿಪ । ವರಜನಕರಾಜತ್ರಿಗೌತ
ಮ । ನಿರಘವಿಶ್ವಾಮಿತ್ರ ಭಾರದ್ವಜಸುಕೌಂಡಿನ್ಯ ॥ ಮೆರೆವವರ
ರಘುರಾಮಪ್ರಭೃತಿಗ । ಳುರುಗೃಹಸ್ಥಾಶ್ರಮವವಹಿಸಿಯೆ । ಪರ
ಮಪಾವನರೆನಿಸಿದರು ನಿರುತದೊಳು ಜಗವರಿಯೆ ॥ ೪೫ ॥

ವಸುಧೆಯೊಳು ಕಲ್ಯಾಣನಗರಿಯೊ । ಳಸಮಬಸವೇಶ್ವರನು
ಪೂರ್ವದೊ । ಳೆಸೆಯುವ ಗೃಹಸ್ಥಾಶ್ರಮವ ಸ್ವೀಕರಿಸುತಲಿಮತ್ತಂ॥
ವಸುಧೆಪತಿಬಿಜ್ಜಳಗೆ ಘನತರ । ಜಸವಡೆದವರ ಸಚಿವನಾಗುತ ।
ಸಸಿನೆಯಿಂಸ್ಥಿರಮನದೆ ಭಕ್ತಿಯನಾಚರಿಸುತನಿಶಂ ॥ ೪೬ ॥

ಪರಮುಚರರೇನೇನುಬೇಡಿಡ । ದುರುತರದೆಕಾಡಿದಡು ಹರುಷ ದಿ। ತ್ವರಿತದಿಂದೀಯುತ್ತ ತಣಿಸುತಲವರಘನಕೃಪದೆ ॥ ಉರೆಪಪಾ ಡಂಗಳನುಗೆಲಿದತಿ । ಧರೆಯಭೋಗವತೀರ್ಚಿಮುದದಿಂ। ಹರನೊ ಳಗೆಕೂಡಿದನು ಜಲಶರಧಿಯೊಳುಬೆರಿವವೊಲು ॥ ೪೭ ॥

ಭಕ್ತಿಯಿಂದಲೆ ಜಗದೆಕೀರ್ತಿಯು । ಭಕ್ತಿಯಿಂದಲೆ ಶಕ್ತಿದೊರೆ ವುದು । ಭಕ್ತಿಯಿಂದಲೆ ಸರ್ವವಸ್ತುವುಸಾಧ್ಯಮಾಗುವುದು ॥ ಭಕ್ತಿ ಯೇ ಧರ್ಮಕ್ಕೆಮಾತೆಯು । ಭಕ್ತಿಯೇ ಪಾವನಕೆಪಾವನ । ಭಕ್ತಿ ಯೇ ಗಾರ್ಹ್ಯಸ್ಥರಿಗೆ ಘನಮುಕ್ತಿಸಾಧನವು ॥ ೪೮ ॥

ಭಕ್ತರಸುಚಾರಿತ್ರವನು ಘನ । ಭಕ್ತಿಯಿಂಕೇಳಿದೊಡೆಭರದಿಂ । ಮುಕ್ತಿಯಾಗುವದ್ಯೆದೆ ಭಕ್ತಿಯದಿಲ್ಲದಿಹನರಗೆ ॥ ಮುಕ್ತಿಯೆಲ್ಲಿಹುದೆ ನುವ ವರವೇ । ದೋಕ್ತದೊಲು ಪರಮಾತ್ಮನೊಲುಮಿಗೆ। ಭಕ್ತಿಯೇ ಬಹುಮುಖ್ಯಕಾರಣವಾಗಿ ತೋರುವುದು ॥ ೪೯ ॥

ಭಕ್ತಿಗೈವಡೆಬೇಕು ಶಕ್ತಿಯು । ಶಕ್ತಿಯೆಂದಡೆಸತಿಯುಮೇಣ್ನ ರ । ಶಕ್ತಿಯೆನೆ ಸನ್ಮತಿಯುಮತ್ತಂ ಶಕ್ತಿಯೆನೆಬಲವು ॥ ಶಕ್ತಿಘನಮು ದರಿಂದಜಗದೊಳು । ಭಕ್ತಿಯಾಚರಿಸುವೊಡೆಗುರುತರ । ಶಕ್ತಿಯಾಗಿ ಹ ವರಗೃಹಸ್ಥಾಶ್ರಮವನ್ವೀಕರಿಸಿ ॥ ೫೦ ॥

ಪರಮುಗುರುಚರಲಿಂಗದೊಳು ಘನ । ತರದ ಬಸವಪ್ರಮಥ ರಂದದೆ। ಪಿರಿದುಭಕ್ತಿಯದಳೆದು ವರಸತಿಪತಿಗಳೊಂದಾಗಿ ॥ ನಿರುತತಿ ಥಿಯಭ್ಯಾಗತರನತಿ । ಹರುಷದಿಂ ಸತ್ಕರಿಸಿಜಗದೊಳು । ಪರತರದ ನಿಜಸುಖವಪಡೆವುದಮರೆತು ವಿರತಿಯನು ॥ ೫೧ ॥

ಪೊಂದುತಿಹನರರನ್ನು ನೋಡಲು । ಚಂದದಿಂ ನಿಜಗೃಹದ ಮುಂದೆಯೆ। ಸಂದಮೃತಸಾಗರವದಿರಲದತ್ಯಜಿಸಿ ಮೂರ್ಖತೆಯಿಂ॥ ಒಂದುಶತಮೈಲುಗಳ ದೂರಿ । ರ್ಪಂದವಿಲ್ಲದ ಕೂಪದಲ್ಲಿಹ । ಮುಂಪವಾಗಿಹ ಲವಣಜಲಕೆಳಿಸಿದಪರಿಯದಿಹುದು ॥ ೫೨ ॥

ಪರಮಗೃಹವರಸೂನು ರತಿಯೊಲು । ಮೆರೆವಸತಿಯೊಳುರತಿ
ಯು ನಿಜಸಖ। ಪಿರಿದುನಯವಿನಯದೊಳು ಪೇಳಿದುದೆಲ್ಲವಂಗೈವ॥
ಚರನಿಕರಬಂಧವರ್ಗೆಮಾನವು। ಪರಮತರದಮೃತಾನ್ನಭೋಜನ।
ಶರಣಸಂಗವದಿರೆ ಗೃಹಸ್ಥಾಶ್ರಮವು ಘನಧನ್ಯಂ ॥ ೫೩ ॥

ಎಂದುಬಹುಸರಸೋಕ್ತಿಯಿಂದಲಿ । ಯಿಂದುಧರಸಮರೂಪ
ರೊರೆದುದ । ನಂದುಕೇಳುತೆ ಫೌಜುದಾರನು ಹರುಷದಿಂದುಬ್ಬಿ ॥
ತಂದೆಯೇತಾವೊರೆದಬೋಧೆಯ । ನಿಂದುಕೇಳಿ ಕೃತಾರ್ಥನಾದೆನು।
ಯೆಂದುವಂದಿಸಿ ಪರಕೆಪಡೆಯುತ ನುತಿಸುತೈದಿದನು ॥ ೫೪ ॥

ಪರಮತಾರಾಗಣದಮಧ್ಯದಿ। ಮೆರೆವಚಂದ್ರಮನಂತೆಮೇಣ॥
ಕ್ಷರಗಳಲಿ ಷಟ್ಚಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತ ನಿಖಿಲಪುರಾಣಮಧ್ಯದಿ। ಹರನಭಕ್ತರು
ಮುದದಿಕೇಳುವುದೇಳನೆಯಸಂಧಿ ॥ ೫೫ ॥

ರಾಜಧರಮಿತ್ರನತಪಾದೆ ಕನಕಾಂಗಿ ಕುಶಲಪ್ರದೆ ವಿಷಾಗ್ನಿಭಯನಾಶಿನಿ ಭವಾನಿ। ರಾಜಕುಲವೌಳಿಯುವರಾಜನುತೆ ಶಿಷ್ಟಜನಶೋಕಹರೆ ಯಕ್ಷಸತಿಮುಖ್ಯಗಣಸೇವ್ಯೆ ॥ ರಾಜರಿಪುವೇಣಿ ಮನುವಂದ್ಯೆ ಮುನಿಪೂಜ್ಯೆ ಘನಶಾಂತೆ ಬುಧರಕ್ಷಿಣಿ ಕಳಾಮಯೆ ಸುಚಿತ್ತೆ । ತೇಜಮಯೆ ವೈಭವೆ ಸುಧೀಪ್ರದೆ ನಿರಂತರ ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೫೬ ॥

ಸಂಧಿ ೭ ಕ್ಕಂ ಪದ ೩೮೧ ಕ್ಕಂ ಮಂಗಲಂ
ಮಹಾ ಶ್ರೀ. ಶ್ರೀ.



॥ ಶ್ರೀ ಗಣಾಧಿಪತಯೇನಮಃ ॥

# ಎಂಟನೆಯ ಸಂಧಿ.



ಸೂಚನೆ:— ಬಸವಯೋಗಿಗಳಸಮುದಾನವ ।
ಮಿಸುಪಪರಮಪ್ರಸಾದಮಹಿಮವ ।
ನೆಸಗಿ ಪುಸುರಿದ ವೀರಶೈವದಲಕ್ಷಣವಮುದದಿಂ ॥

ಆವನಂ ಹರಿಯಜಸುರರ್ಕಳು । ತೀವಿದಾನಂದದೊಳುಸತತಂ। ಸೇವೆಗೈವರೊ ಯಾವನಂಶೃತಿತತಿಗಳತಿಮುದದಿಂ ॥ ಆವಕಾಲದಿ ಸ್ತೋತ್ರಮಾಳ್ಪವೊ । ಯಾವನಂಯತಿವರರುಕಾಂಬರೊ । ಯಾವ ನುರುತರಮಹಿಮನಾಶಿವದೇವಗೊಂದಿಪೆನು ॥ ೧ ॥

ಮೆರೆವವಸ್ತ್ರದಹಳ್ಳಿಯೆಂಬುವ । ಪುರದೊಳಿಗೆ ಕಡುಬಡವ ನೋರ್ವನು । ಪಿರಿದುಸಂತಸದಿಂದೆ ತನ್ನಯಸುತನಪರಿಣಯವ ॥ ಭರದಿನೆರವೇರಿಸಲು ಲಗ್ನದ । ಪರಮಸಾಹಿತ್ಯಗಳನೆಲ್ಲವ । ನಿರದೆ ಸಿದ್ಧವಗೊಳಿಸಿ ಗೋಧಿಯಮಾತ್ರತರದಿರ್ದಂ ॥ ೨ ॥

ಗೋಧಿಯನುತರುವುದಕೆ ಕೈಯ್ಯೊಳ । ಗಾದಡೊಂದೂಕಾಸು ಮಿಲ್ಲದೆ । ಭೋದಯಾನಿಧಿದೇವನಾನೀಗೆಂತೆಸಗಲೆನುತೆ ॥ ಸಾದರದಿ ಮೊರೆಯಿಡುತಮನಘನ । ಭೇದಿಸುವ ಚಿಂತೆಯೊಳಗಿರುತಿರೆ । ಸಾಧು ಜನರುಗಳವನಪರಿಯಂ ನೋಡಿಮನಮರುಗಿ ॥ ೩ ॥

ಚಿಂತೆಯುನುನೀನೇಕೆಗೈವೆ ಸ । ಮಂತುಶಪಪುರದೊಳಗೆ ಶೋಭಿಪ । ಕಂತುಹರಸಮರೂಪ ಚರಬಸವಾರ್ಯರೊಳುಪೋಗಿ ॥ ಅಂತರಂಗದೊಳುಳ್ಳನಿನ್ನಯ । ಚಿಂತೆಯನು ಶಾಂತಿಯೊಳು ಘನತರ । ಕಾಂತಿಮಯರಾದವರ ಸನ್ನಿಧಿಯೊಳಗೆ ಬಿನ್ನೈಸೆ ॥ ೪ ॥

ನಿನ್ನವ್ಯಸನವು ದೂರವಾಗು । ತ್ತುನ್ನತದ ಸುಖದೊರೆವುದಿದು ನಿಜ । ನಿನ್ನುತಡವಾಡದಲೆ ಪೊರಡುವದಿರದೆಯವರಿಂದು ॥ ಚೆನ್ನ ಸೆವ ಯಡರಾಮಿಸಂತೆಯ । ನನ್ನಿಯಿಂ ತೀರ್ಚಿಸಿಕೊಳುತ್ತಲಿ । ಯಿ ನ್ನುವತಶಹಪುರಕೆ ದಯವಾಡಿಸುವರನಿತರೊಳೆ ॥ ೫ ॥

ಅವರಿರುವತಾಣಕ್ಕೆಪೋಗುತೆ । ಜವದಿ ಪೇಳಿಕೊಳೆಂದುಪೇಳ। ಲ್ಕವನು ನಿಶ್ಚಯವಾದಸಂಗತಿಯಿರ್ಪುದೆಂದರಿದು ॥ ಭವನಪ್ರಿಯ ಬಸವಾರ್ಯರಿರ್ದೆಡೆ । ಗವಸರದಿ ಪೊರಮಟ್ಟುಪೋಗ । ಲ್ಕವರು ಸಂತೆಯೊಳೆಲ್ಲಜವಳಿಯ ವಿಕ್ರಯಕೆವಾರಿ ॥ ೬ ॥

ಒಂದುಚೀಲದತುಂಬಗೋಧಿಯ । ನಂದುಕ್ರಯಕೆಕೊಳುತ್ತ ತಮ್ಮಯ । ಚಂದವಾಗಿಹ ಹಯದಮೇಲಿರದೇರಿಕೊಳುತ್ಯೆದೆ ॥ ಸಂದಸ್ವಗ್ರಾಮಕ್ಕೆ ಬರುತಿರ । ಲಂದು ವಸ್ತ್ರದಹಳ್ಳಿಬಡವನು । ಬಂದುಮುಖದಿದಿರಿನೊಳು ನಿಲ್ಲುತಲೇನುಸ್ವಾಮಿಗಳೆ ॥ ೭ ॥

ಮೆರೆಯುತಿರ್ಪನವಾರಸುತದ ಸು। ಚರಿತ ಚರಬಸವಯ್ಯತಾತ ನು । ಪಿರಿದೆಸೆವ ಯಡರಾಮಿಸಂತೆಯೊಳಿರ್ಪರೊಯೆಂತು ॥ ಭರದೊ ಳಪ್ಪಣೆಕೊಡಿಸಬೇಕೆನೆ । ಪರಮಶ್ರೀಗಳು ಮುದದೊಳವನಂ । ಕುರಿ ತು ನಿನಗೀಗವರು ಬೇಕಾಗಿರ್ಪುದೇತಕದು ॥ ೮ ॥

ಅವರೊಳಿರ್ಪಾಕಾರ್ಯವಾವುದು । ಜವದಿ ನಸುವುಸುರೆನುತಕೇ ಳ । ಲ್ಕವನುವಿನಯದಿ ಸ್ವಾಮಿಗಳೆನಾನಿಮ್ಮಸನ್ನಿಧಿಯೊಳ್ ॥ ವಿವ ರದಿಂದಂ ಪೇಳುವೆನುನಾಂ । ತವಕದಿಂದಲಿ ಯನ್ನವರತನು । ಭವ ನ ಲಗ್ನವಸಾಗಿಸಲು ಮನದೊಳಗೆನಿರ್ಧರಿಸಿ ॥ ೯ ॥

ವಿಧವಿಧದಸಾಮಗ್ರಿಯೆಲ್ಲವ । ಮುದದಿಸಿದ್ಧವ ಪಡಿಸಿಕೊಂ ಡಿಹೆ । ನದರೊಳಗೆ ಬಹುಮುಖ್ಯವಾಗಿಹ ಗೋಧಿವಾತ್ರವನು ॥ ಒದಗಿಸಲು ಕೈಯ್ಯಲ್ಲಿಧನವಿ । ಲ್ಲದಲೆ ಬಹುಚಿಂತೆಯನುಗ್ಯೆಯುವೆ ನದನುಕೇಳಲಿಕವರನಿಮ್ಮ ವಿಚಾರಿಸಿದೆನೆನುತೆ ॥ ೧೦ ॥

ಪೇಳಲಾಗದಕವರುತೇಜಿಯ । ಮೇಲಿರುವಗೋಧಿಯನುತೋ
ರಿಸಿ । ಕೇಳುದೀನನಸೆಯವರಬಳಿ ಯಿನ್ನೇಕೆಪೋಗುವದು ॥ ಕಾಲಹರ
ನಿನಗಿಲ್ಲೆಕೊಡುವನು । ಪೇಳುವುದುಮತ್ತೇನು ನಿನಗನು । ಕೂಲಮಾ
ಗಿವಿರಾಜಿಸುತಲಿರ್ಪೀಹಯವನೀಗ ॥ ೧೧ ॥

ಹರುಷದಿಂ ಪೊಡಕೊಂಡುಪೋಗುತೆ । ತ್ವರಿತದಿಂದೀಗೋಧಿ
ಚೀಲವ । ನಿರದೆತೆಗೆದುಕೊಳುತ್ತಲೆನ್ಮೃಯ ಕುದುರೆಯಂಬೇಗ ॥
ತರುವುದೆನುತಂದೊರೆಯಲಾಗಳ್ । ಭರದಿಯವರೊರೆದಂತೆ ಗೈದವ ।
ನುರುತರದ ಹರುಷದೊಳುತನ್ನಯ ಪರಮಮಿತ್ರರಿಗೆ ॥ ೧೨ ॥

ಅರುಪಲೀಸಂಗತಿಯನವರುಗ । ಳರರೆಯಂತಹಮೂರ್ಖನೀ
ನಾ । ಗಿರುವೆ ನಿನಗಿರದೀಗ ಗೋಧಿಯಮುದದೊಳಿತ್ತವರು ॥ ಪರ
ಮಚರಬಸವಯ್ಯನವರೇ । ಪರರುಯಿನ್ನಾರಿರರುನಿನಗೇ । ಮೆರೆವ
ಮಹಿಮರ ಪರಿಚಯವದಿರ್ದಂತೆಕಾಣಿಸದು ॥ ೧೩ ॥

ಅವರುಪರಿಕಿಸೆ ಸಹಜದಾನಿಗ । ಳವರುಡಾಂಭಿಕರಲ್ಲ ಭುವಿ
ಯೊಳ । ಗವರತೆರ ದಾನವನುಗೈವವರಿರುವರತಿವಿರಳಂ ॥ ಅವರಕು
ದುರೆಯುನವರಿಗೊಪ್ಪಿಸಿ । ತವೆಯನುಗ್ರಪಡೆದುಮೋದದಿ । ಜವದಿ
ನೀಬಾರೆಂದುಪೇಳಲ್ಕಾಗಕಡುಬಡವಂ ॥ ೧೪ ॥

ಗುರುತರದಬಸವಾರ್ಯರಿರ್ದಾ । ಪರಮಠಾಣಕೆಬಂದು ಕುದು
ರೆಯ । ನಿರದೆವಪ್ಪಿಸಿ ತಾನೆಚರಬಸವಯ್ಯನವರಂತೆ ॥ ಅರಿಯೆ
ನಾಂನೀವೆಂಬುದನು ಘನ । ಕರುಣದಿಂ ಕ್ಷಮಿಸುವುದು ನಾನಿ । ನ್ನು
ರುತರದ ತವಚರಣಸ್ಮರಣೆಯೊಳಿರ್ಪೆನಿರುತದೊಳು ॥ ೧೫ ॥

ಎಂದುಬೇಡಿಕೊಳಲ್ಕೆ ಹರುಷದೊ । ಳಿಂದುಧರಸಮರೂಪರೆನಿ
ಸಿವ । ಸುಂಧರೆಯೊಳತಿಶೋಭಿಸುವ ಚರಬಸವಯೋಗಿಗಳು ॥ ಅಂ
ದುಶ್ರೀಪರಮೇಶನಿನಗಾ । ನಂದವನುಸಂತತದೊಳೀಯಲಿ । ಯೆಂದು
ಪರಸುತಲವರ ಸ್ವಗ್ರಾಮಕ್ಕೆ ಚಿತ್ತೈಸಿ ॥ ೧೬ ॥

ವಸುಧೆಯೊಳುಘನಶ್ರೀಷ್ಠತರವಾ । ಗೆಸೆವ ಶ್ರಾವಣಮಾಸ
ಬಂದಿರ । ಲಸಮುಶಿವಭಕ್ತರ ಸುಚಾರಿತ್ರಗಳ ಶ್ರವಣವನು ॥ ಸಸಿ
ನೆಯಿಂದಲಿಗೈದುಶೋಭಿಪ । ಪಶುಪತಿಯವರಕೃಪೆಯಪಡೆವುದು।
ಕುಶಲಮತಿಗಳ ಪರಮತರಕರ್ತವ್ಯಮೆಂದರಿದು ॥ ೧೭ ॥

ಅಂದುಚರಬಸವಾರ್ಯ ಪರಮವ । ಸುಂಧರೆಯೊಳವತರಿಸಿ
ಮಹದಾ । ನಂದದಿಂ ಘನತರಪವಾಡಂಗಳನು ಮಿಗೆಯೆಸಗಿ ॥
ಇಂದುಭಾಸ್ಕರರಿರುವನಕಘನ । ಸಂದಕೀರ್ತಿಯವಡೆದು ಸಂತತ।
ಮಿಂದುಧರನಂತಿರದೆರಾಜಿಪ ಪರಮುಕಲ್ಬುರುಗಿ ॥ ೧೮ ॥

ಶರಣಬಸವೇಶನ ಪುರಾಣವ । ಮೆರೆವತಮ್ಮಯಮಠದೊಳಿಡಿ
ಸಲು । ಪರಮುನಾಯ್ಕಲ್ ಬಸವರಾಜಸುಪಂಡಿತರ ಕರಸಿ ॥ ಭರದಿ
ಪ್ರಾರಂಭವನುಗೊಳಿಸಲು । ಹರುಷದಿಂದಾಪುರದಸುತ್ತಲು । ಮಿರು
ವಭಕ್ತಾದಿಗಳುಬಂದು ಪುರಾಣಶ್ರವಣವನು ॥ ೧೯ ॥

ಗೈದುಮೋದದಿ ತೆರಳುತಿರಲಾ । ಗಾದಯಾನಿಧಿ ಶರಣಬಸವ
ನ । ಮೋದಕರವರ ನಾಮಕರಣೋತ್ಸವವುಬಾರಲ್ಕೆ ॥ ಸಾಧುಚರ
ವರರಿಂಗೆತೃಪ್ತಿಯ । ನೈದೆಗೈಯಲು ಬಸವಯೋಗಿಗ।ಳೈದುಶೇರಿನ
ಭಕ್ಷ್ಯಭೋಜ್ಯಗಳನ್ನು ಮಾಡಿಸಿರೆ ॥ ೨೦ ॥

ಇನಿತುಮಿತಪರಮುಪ್ರಸಾದದೊ । ಳನುನಯದೆ ಪರಿಕಿಸಲು
ಮುನ್ನೂರ್। ಜನರು ಘನತೃಪ್ತಿಯನುಪೊಂದುತಲಚ್ಚರಿಯವಡೆ
ದು ॥ ಏನುಪರಮತರಪ್ರಸಾದವ। ದೇನುಬಸವಾರ್ಯರಪವಾಡವ।
ದೇನು ಮಿತಪರಮುಪ್ರಸಾದದೊಳಮಿತಜನತೃಪ್ತಿ ॥ ೨೧ ॥

ಎಂದುಘನಜನವೃಂದವದು ಮುದ। ದಿಂದ ಬಸವಾರ್ಯರಿಗೆ
ಜಯಜಯ । ವೆಂದು ಜಯಘೋಷವನು ಮಿಗೆಯುಂದದಲಿಗೈಯ
ಲ್ಕೆ ॥ ಅಂದುಬಸವಸ್ವಾಮಿಗಳುಮುದ। ದಿಂದಲೀಪರಮುಪ್ರಸಾದದ।
ಸಂದಮಹಿಮೆಗೆಕಾರಣನು ಶ್ರೀಶರಣಬಸವೇಶಂ ॥ ೨೨ ॥

ಎನುತಭಕ್ತಾವಳಿಗೆ ಹರುಷದಿ । ವನುನಯದೊಳಪ್ಪಣೆಯ
ಕೊಡಿಸ । ಲ್ಕನಘಭಕ್ತರು ಬಸವಯೋಗಿಗಳನ್ನುಕೂರ್ತಾಗಳ್ ॥
ಚಿನುಮಯಸರೂಪಿಗಳೆಯಮಗೀ । ಘನತರದಭುವನದೊಳು ಶೋ
ಭಿಪ । ವಿನುತವಾಗಿಹ ವೀರಶೈವದಲಕ್ಷಣವನಿರದೆ ॥ ೨೩ ॥

ಹರುಷದಿಂದಂಬೋಧಿಸೀಗಳ್ । ತ್ವರಿತದಿಂದ ಕೃತಾರ್ಥರಾ
ಗುವ । ತೆರನವಾಳ್ಪುದೆನುತ್ತೆ ಬೇಡಲ್ಕಾಗಚರವರರು ॥ ಪರಮ
ಭಕ್ತರೆತಮ್ಮಮನದಂ । ತರುಹುವೆನುಲಾಲಿಪುದುಚಿತ್ತವ । ನಿರಿಸಿ
ನಿಗಮಾಗಮಗಳುಲಿಯುವತೆರದಿ ವಿವರದೊಳು ॥ ೨೪ ॥

ಹರನುರಚಿಸಿದ ನಿರುಪಮದಘನ । ಧರಣಿಯೊಳು ವರವೀರಶೈ
ವನು । ಸರುವಶ್ರೇಷ್ಠನೆನುತ್ತೆ ಭುವಿಯೊಳು ಸರ್ವಸಜ್ಜನರಿಂ॥ ನಿರು
ತದಲಿನುತಿಗೊಳುತ ಶೈವರೊ । ಳುರುವರಿಷ್ಠನುವಾಗಿ ಕರ್ಮವ ।
ಸಿರದುಗೈಯುವಶೈವರೊಲು ಬಹುಕ್ರಿಯೆಗಳಿಂದಲ್ಪ ॥ ೨೫ ॥

ಫಲವನುಂಪಡೆಯದಲೆ ಲಘುಕ್ರಿಯೆ । ಗಳೊಳೆಪರತರಭಕ್ತಿ
ಯಿಂಘನ । ಫಲವಪಡೆವವನಾಗಿ ಗುರುವಿಂದೀಕ್ಷೆಯಂಪಡೆದ ॥
ಬಳಿಕವಜ್ಜನಭೋಜನಗಳೊಳು । ಮಲವುಮೇಣ್ಮೂತ್ರವನು ತ್ಯಜಿ
ಸುವ। ವಿಳಸಿತದಸಮಯದೊಳಗಶುಚಿಯಭಾವವನುತೊರೆದು ॥೨೬॥

ಪುರಹರನಮಂತ್ರವನುಪಠಿಸುತ । ಪರಮಲಿಂಗಾಂಗಗಳಸಮ
ರಸ । ವರಿದು ಘನತರಲಿಂಗಭೋಗಿಸಿದುದನು ಭೋಗಿಸುತೆ ॥ ನೆರೆತ್ರಿ
ಕಾಲದೊಳೆಸೆವಲಿಂಗವ । ಸಿರಿದುಭಕ್ತಿಯೊಳರ್ಚಿಸುತ್ತಂ । ಪರಮ
ಲಿಂಗದಲೋಪದೊಳಗಸುತ್ಯಾಗವನು ಬಿಡದೆ ॥ ೨೭ ॥

ಸಸಿನೆಯಿಂಕೈಕೊಳುವುದುಚಿತವು । ವಸುಧೆಯೊಳಗಿದರಿಂದ
ಧಿಕವಾ । ಗೆಸೆವಪ್ರಾಯಶ್ಚಿತ್ತಮಿಲ್ಲೆಂದರಿದುಕೊಳುತಿರದೆ ॥ ಅಸ
ಮಚರಗುರುಶೂಲಿಶರಣರ । ಮಿಸುಪಶಿವನಿರ್ಮಾಲ್ಯಭಸಿತಗ । ಳಸ
ಮನಯನನ ನಿಂದೆಗಳಸ್ಮೈರಿಸದೆ ರೋಷದಲಿ ॥ ೨೮ ॥

ಒಡನೆಕರ್ಣವಮುಚ್ಚಿಕೊಳುತಲಿ । ನುಡಿದಜಿಂಹೆಯಭರದಿ
ಶೀಳುತ । ಮೃಡನಪೊರತಿನ್ನಿತರದೇವಾದಿಗಳತೃಣೀಕರಿಸಿ ॥ ಒಡಲೊ
ಳಗೆ ಶಿವಚಿನ್ಹ ಮಿಲ್ಲದ । ಜಡಭವಿಗಳೊಡನೊಂದೆಯಾಸನ । ಸಡಗ
ರದ ಸಹಭೋಜನಾದಿಗಳನ್ನು ನಡೆಸದಲೆ ॥ ೨೯ ॥

ಶಿವಮತವ ವೃದ್ಧಿಯನುಪೊಂದಲು । ಮವಿರತದಿ ತನುಮ
ನಧನಂಗಳ । ಜವದಿಸೂರೆಗೊಡುತ್ತ ಜೀವರೊಳ್ದಯವತೋರುತ್ತ ॥
ಭುವಿಯೊಳಗೆ ಹಿತದಿಂದಪರಿಕಿಸೆ । ಭವಕೆಕಾರಣವೆನಿಪಪಂಚನೆ ।
ತವೆಯನೃತಚಂಚಲವು ನಿರ್ದಯಭೇದಧಿಕ್ಕಾರ ॥ ೩೦ ॥

ಎನಿಪದೋಷಗಳನ್ನು ತ್ಯಜಿಸುತೆ । ವಿನುತಮಾಹೇಶ್ವರರಕಾ
ಣುತ । ಮಿನುಪ ಸಾಕ್ಷಾತ್‌ಪರಮಶಿವನೆಂದರಿದುಕೊಳುತಾಗಳ್ ॥
ಸನುಮತದಿಯೆದ್ದುಪೋಗಿವಂದಿಸಿ । ವಿನಯದಿಂದವರ್ಗೊಡಿತಿರುಗು
ತ್ತನುನಯದಿ ಕ್ರಿಯವಚನಮಂ ನುಡಿದೆಸೆವಗದ್ದುಗೆಯಂ ॥ ೩೧ ॥

ಭರದೊಳಿಕ್ಕುವುದನ್ನಪಾನಗ । ಳುರುಮುದದೊಳರ್ಪಿಸುವು
ದೆಂಬುವ । ದುರಿತಹರವರಮುಕ್ತಿಸೋಪಾನಗಳ ಯುಕ್ತತೆಯಿಂ ॥
ಹರಮತಕೆ ವ್ಯತಿರಿಕ್ತಮಾಡುದ । ನಿರದೆವರ್ಜಿಸಿ ಪ್ರೇತಮೊದಲಾ ।
ಗಿರುವ ರೂಢಿಯಪಂಚಸೂತಕಗಳನುಪಾಲಿಸದೆ ॥ ೩೨ ॥

ಭುವಿಯೊಳಗೆ ಶಿವಕರವನೀಯುವ । ತವೆಸುಪಂಚಾಚಾರನಿ
ಷ್ಠೆಯ । ನವಿರತದಿಕೈಕೊಂಡು ದಾಸತ್ವಾದಿಷಡ್ವಿಧದ ॥ ಶಿವಕರದ
ಸಜ್ಜನತೆಯಿಂದಲಿ । ಜವದಿದೇಶಸುಕಾಲಕಲ್ಪಿತ । ವಿವಿಧಲೌಕಿಕ
ನಡತೆಗಳಮೀರುತ್ತ ಭ್ರಾಂತಿಯನು ॥ ೩೩ ॥

ತ್ವರಿತದಿಂಪರಿಪೂರ್ಣಪೋಡಿಸಿ । ನಿರುತಸ್ವಾತಂತ್ರ್ಯಯನಾಂ
ತರು । ತರದ ಪಶುಪತಿಯಾತ್ಮರುಗಳಿಗೆ ಭೇದಭ್ರಾಂತಿಯನು ॥ ಧರೆ
ಯೊಳೆಂದಿಗುತೋರದವನಾ । ಗಿರುತಪರಮಪ್ರಾಣಲಿಂಗವ । ಮೆರೆವ
ಶಿವಲಿಂಗದೊಳಗೈಕ್ಯವಗೊಳಿಸಿ ಸಂತಸದಿ ॥ ೩೪ ॥

ಸಲೆಮೆರೆಯುತಿರುತಿರ್ದುಮೇದಿನಿ । ಯೊಳಗೆ ಘನತರವೀರಶೈ
ವಸು । ವಿಳಸಿತದಧರ್ಮಂಗಳಿಂದುರುದುರಿತಸಂಕುಳವ ॥ ಘಳಿಲನೇ
ನೀಗುತ್ತ್ಥನ್ಯತೆ । ದಳೆದು ಭಯವಂನೀಗಿಸಂತತ । ಮಲಘುತರ
ಲಿಂಗಾಂಗಸಂಗಾದ್ವೈತಭಾವನೆಯೊಳ್ ॥ ೩೫ ॥

ಧೀರತನದಿಂಬಲಿದುಭುವಿಯೊಳು । ಸಾರತರಶಿವಪೂಜೆಬಲ
ದಿಂ । ಮೀರಿದಸುಸಾಮರ್ಥ್ಯಮಂ ಪಡೆದಧಿಕಧೈರ್ಯದೊಳು ॥
ಚಾರುತರಸಂಪನ್ನನಾಗುತ । ಪಾರನುತಿನಿಂದೆಗಳಿಗೆರಗದೆ । ಭೂರಿ
ಶಾಂಭವವಿದ್ಯೆಯೊಳಗನವರತ ರಮಿಸುತ್ತೆ ॥ ೩೬ ॥

ಧರಣಿಯೊಳುನಿಗ್ರಾಹನುಗ್ರದ । ಪರಮಸಾಮರ್ಥತೆಯಪಡೆ
ಯುತ । ಗುರುತರದದಾಸೋಹಭಾವದೊಳಿರ್ದು ಸಂತತದಿ ॥ ವರ
ಜಗತ್ಪೂಜ್ಯತೆಯಪಡೆದುರು । ತರದರವಿಕಿರಣದೊಲು ಜಗದೊಳು ।
ಮೆರೆವವನೆ ಶ್ರೀವೀರಶೈವನುಮೆನಿಸಿಕೊಳ್ಳುವನು ॥ ೩೭ ॥

ಧಾರಿಣಿಯೊಳವತರಿಸಿಮೆರೆಯುವ । ವೀರಶೈವರುಮೆಲ್ಲರಾಜಿ
ಪ । ವೀರಶೈವದಲಕ್ಷಣವ ತಿಳಿದದರಪರಿಯಂತೆ ॥ ಭೂರಿತೋಷದಿ
ವರ್ತಿಸುತವರ । ಮಾರಹರನಕೃಪೆಯವಡೆದುರು । ಧೀರತನದಿಂ
ನಿರುತಭುವಿಯೊಳು ಬೆಳಗುವುದುಮ್ಮುಚಿತಂ ॥ ೩೮ ॥

ಎಂದುಸುರಲಾಕ್ಷಣದಿ ಭಕ್ತ । ವೃಂದವದು ಶ್ರವಣವನುಗೈ
ದಾ । ನಂದಶರಧಿಯೊಳ್ಕೆದೆ ಲೋಲಾಡುತ್ತ್ಭಕ್ತಿಯೊಳು ॥ ಇಂದು
ಧರರೂಪಿಗಳೆ ಮನಮಿ । ಟ್ಟಿಂದುತಮ್ಮಯ ಪರಮಬೋಧವ ।
ಚಂದದಿಂದಾಲಿಸಿ ಮಹಾಕೃತಕೃತ್ಯರಾದೆವುನಾವ್ ॥ ೩೯ ॥

ಎನುತುಸುರಲಾಪರಮಶ್ರೀಗಳು । ಮನನಿರಿಸಿ ಶ್ರವಣವನು
ಗೈದುದ । ಕನುನಯದೊಳದರಂತೆ ನಡೆದುಕೊಳುತ್ತ್ನೀವೆಲ್ಲರ್ ॥
ಅನಘನುರುಕೃಪೆವಡೆದು ಜಗದೊಳು । ಘನತರದ ಸಂತಸದಿಬಾಳು
ವು । ದೆನುತಲಾಶೀರ್ವದಿಸಿ ಭಕ್ತರನಾಗಬೀಳ್ಕೊಟ್ಟರ್ ॥ ೪೦ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ। ಕ್ಷರಗಳಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತ ನಿಖಿಲಪುರಾಣಮಧ್ಯದಿ । ಹರನಭಕ್ತರು ಮುದದಿಕೇಳುವುದೆಂಟನೆಯಸಂಧಿ ॥ ೪೧ ॥

ಅಷ್ಟಮದನಾಶಿನಿ ಮಹಾಧ್ವರವಿಭಂಗೆ ಪುರುಷಾರ್ಥಸುಖದಾತೆ ಪರದೇವತೆ ಗಣಾಂಬೆ । ಕಷ್ಟಕುಲಭೂಮಿಜಕುಠಾರಿಕೆ ಭಗೇಶ್ವರಿ ಸುಲಕ್ಷಣೆ ಜಯೋತ್ಸವೆ ಪುರಾತನಿಗಣಾನಿ ॥ ದುಷ್ಟಜನಭಂಜನಿ ಕಪರ್ದಿನಿ ಸುವಾಸಿನಿ ಮುಕುಂದೆ ಸುರನಾಯಕಿ ಷಡಾಸ್ಯೆ ತ್ರಿಪುರಘ್ನೆ । ಇಷ್ಟಫಲದಾಯಕಿ ನಟೇಶ್ವರಿ ನಿರಾಮಯೆ ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೪೨ ॥

ಸಂಧಿ ೮ ಕ್ಕಂ ಪದ ೪೩೩ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಓಂ ಪರಬ್ರಹ್ಮಣೇನಮಃ ॥

# ಒಂಭತ್ತನೆಯ ಸಂಧಿ.



ಸೂಚನೆ:— ಅಲಘುಚರಬಸವಾರ್ಯಕದಳೀ ।
ಫಲದಮಹಿಮವತೋರಿ ಸ್ತ್ರೀಯರಿ ।
ಗೊಲವಿನಿಂದರುಹಿದನು ಸ್ತ್ರೀಧರ್ಮವನು ವಿವರದೊಳು ॥

ಇಂದುಧರ ನಿರ್ಮಲನಿರಾಮಯ । ನಂದಿವಾಹನ ನಾಗಭೂಷ
ಣ। ಸ್ಕಂದಪಿತ ಸಹಸ್ರಾಕ್ಷ ಸರ್ವಾಧಾರಸರ್ವೇಶ ॥ ಸಿಂಧುಶಯನ
ಸಖ ತ್ರಿಲೋಚನ । ಕಂದುಕಂಧರ ಕಾಲಸಂಹರ । ಚಂದದಿಂ ತವ
ಪರಮಪದಪಂಕಜಕೆ ವಂದಿಪೆನು ॥ ೧ ॥

ಪರಮ ಶ್ರೀಬಸವಾರ್ಯತಮ್ಮಯ । ಮೆರೆವಶಹಪುರಮಠದಿ
ಮುದದಿಂ । ದುರುತರದ ದಾಸೋಹವೆಸಗುತ ಸುಖದಿಮಿರುತಿರಲು ॥
ಪರತರನವಾರದೊಳುವಾಸಿಸಿ । ನಿರುತಸಚ್ಚರಿತದೊಳುನಡೆಯುತ ।
ನೆರೆಮೆರೆವತಮ್ಮನುಜ ಶ್ರೀರಾಚಯ್ಯನವರಿಂಗೆ ॥ ೨ ॥

ಕೆಲವುದಿನದೊಳೆ ಸುತನುಜನಿಸ । ಲ್ಕಲದೆ ಪನ್ನೆರಡನೆಯದಿನ
ದೊಳು । ನಲವಿನಿಂ ವರನಾಮಕರಣಮಹೋತ್ಸವಕ್ಕಾಗಿ ॥ ಮಲಹ
ರನಸಮರೂಪರೆನಿಸಿ । ಪ್ರಲಘುತರಜಂಗಮರತೃಪ್ತಿಯ । ಗೊಳಿಸ
ಬೇಕೆನುತೆಂದು ಸಾಸಿರಬಾಳೆಕಾಯಿಗಳ ॥ ೩ ॥

ತರಿಸುತವುಪಣ್ಣಾಗಲೋಸುಗ । ಭರದಿ ಪಿರಿದಾದೊಂದುಪಾತ್ರೆ
ಯೊ । ಳಿರದೆತುಂಬುತ ವಾಯುಪೋಗದತೆರದಿ ಮುಚ್ಚಿಡುತೆ ॥ ತ್ವರಿ
ತದಿಂ ಸಾಹಿತ್ಯವೆಲ್ಲವ । ಹರುಷದಿಂ ಸಿದ್ಧವನುಗೊಳಿಸು । ತ್ತಿರುತರ
ದಿರಾಜಿಸುವ ತಮ್ಮಗ್ರಜರಕರೆಯಲ್ಕೆ ॥ ೪ ॥

ನಲವಿನಿಂ ಶಹಪುರಕೆಪೋಗಿ ಸು । ತ್ತೊಳಪತೊಟ್ಟಿಲಸಂಭ್ರಮ
ಕೆತಾ । ನ್ನಿಲದೆ ದಯಮಾಡಿಸಲುಬೇಕೆನುತ್ತೈದೆ ಬೇಡಲ್ಕೆ ॥ ಅಲ
ಘುಚರಬಸವಾರ್ಯರಾಗಳ್ । ವಳಿತುನಡೆಯೆಂದೆನುತೆ ಮುದದಿಂ ।
ದಲಸಿಕೆಯನೆಸಗದಲೆ ಪೊರಡುತೆತಮ್ಮನುಜರೊಡನೆ ॥ ೫ ॥

ಮೆರೆಯುತಿರ್ಪನವಾರಮುಕಕತಿ । ತ್ವರಿತದಿಂದಾಗಮಿಸೆಮರು
ದಿನ । ಪರಿಪರಿಯತೆರದಡಿಗೆಯದು ಬಹುಸರವಮೂಗೈದೆ ॥ ಹರುಷ
ದಿಂಸಿದ್ಧವನುಗ್ಯೆಯಲು । ಸರುವಜನರುಗಳಾಗತಮ್ಮಯ । ಪರಮ
ಸ್ನಾನಶಿವಾರ್ಚನೆಯ ಪೂರೈಸಿಕೊಳುತಿರದೆ ॥ ೬ ॥

ಗಣಸಮೂಹವುಕೂಡೆಜವದಿಂ । ದನಘಜಂಗಮಪಾದಪೂಜೆ
ಯು । ಘನಮುದದಿ ನೆರವೇರಲಾಗೆಡೆಬಡಿಸುವುದಕಾಗಿ ॥ ಅನುನಯ
ದೊಳಣಿಗೈಯ್ದುಮಿಡುತಿರ । ಲನಿತರೊಳೆ ಕದಳೀಫಲಂಗಳ । ನೆನ
ಪುಬರಲಾಕ್ಷಣದಿಮೇಲಿನ ತೊಗಟೆಯನುಸುಲಿದು ॥ ೭ ॥

ಸಿದ್ಧಪಡಿಸಿಡಬೇಕೆನುತ್ತಂ । ನಿರ್ಧರಿಸಿಪಿರಿದಾದಪಾತ್ರೆಯೊ ।
ಳಿದ್ದಕಾಯಿಗಳನ್ನುತೆರೆಯುತನೋಡೆ ಮೊದಲಿರ್ದೋಲ್ ॥ ಶುದ್ಧಕ
ಸುಗಾಯಿಗಳವಾಗಿರೆ । ಹದ್ದುಮಿಲ್ಲದವ್ಯಸನಪೊಂದಿಪ್ರ । ಸಿದ್ಧ
ತಮ್ಮಗ್ರಜರಿಗೀಸಂಗತಿಯನೊರೆಯಲ್ಕೆ ॥ ೮ ॥

ಆಗಶ್ರೀಬಸವಾರ್ಯರುಗಳತಿ । ಬೇಗದಿಂ ಕಾಯಿಗಳನೆಲ್ಲವ ।
ಭೋಗಿಭೂಷಣರೂಪಬಸವನ ನಾಮಪಠಿಸುತ್ತೆ ॥ ರಾಗದಿಂತವೆತಮ್ಮ
ಪಾವನ । ಕೈಗಳಿಂದಂ ಮುಟ್ಟುತವುಗಳ । ನಾಗದೇವರ ಗೃಹದೊ
ಳಿಡಿಸುತ ದಶನಿಮಿಷತಡೆದು ॥ ೯ ॥

ಫಲಗಳನುಸುಲಿಯುವುದೆನುತ್ತಂ । ಲಲಿತವಚನದೊಳುಸುರ
ಲಾಗಳ್ । ನಿಲದೆದಶನಿಮಿಷಗಳತಡೆದವುಗಳನು ನೋಡಲ್ಕೆ ॥ ಫಲಗ
ಳವುಪರಿಪೂರ್ಣಪಕ್ವವ । ಘಳಿಲಿನೇಪೊಂದುತ್ತಶೋಭಿಸೆ । ಸುಲಿದು
ಗಣಸಂತೃಪ್ತಿಗೆಡೆಮಾಡಿದರು ಮುದದಿಂದೆ ॥ ೧೦ ॥

ಅಂದು ಜನರುಗಳೆಲ್ಲ ವಿಸ್ಮಯ । ಪೊಂದಿಶ್ರೀಗಳ ಪರಮಮಹಿ ಮವ । ನಿಂದುಪರಿಕಿಸಿನೋಡೆ ಜಗದೊಳಗತಿವಿಚಿತ್ರಮಿದು ॥ ಎಂದು ಪರಿಪರಿವಿಧದಿ ಬಹುಮುದ । ದಿಂದ ಮಿಗೆಕೀರ್ತಿಸುತ ತಮ್ಮಯ । ಮಂದಿರಕೆತೆರಳಿದರು ಜಯಘೋಷವನು ಗೈಯ್ಯುತ್ತೆ ॥ ೧೧ ॥

ಆಗತೊಟ್ಟೆಲಸಂಭ್ರಮಕ್ಕುರು । ರಾಗದಿಂದಾಗಮಿಸಿಕಾರ್ಯ ವ । ಬೇಗದಿಂಪೂರೈಸಿ ಘನತರಹರುಷವಂತಾಳ್ದ ॥ ನಾಗವೇಣಿಯ ರೆಲ್ಲಮನದೊಳು । ಭೋಗಿಭೂಷಣರೂಪ ಪರತರ । ಯೋಗಿಶ್ರೀಚರ ಬಸವಸ್ವಾಮಿಗಳಿಂದಲತಿಮೆರೆವ ॥ ೧೨ ॥

ಪರಮಸ್ತ್ರೀಧರ್ಮವನು ವಿವರದೊ । ಳರಿತುಕೊಳಬೇಕೆಂದು ಯೋಚಿಸಿ । ಚರಬಸವಯೋಗಿಗಳ ಘನಸನ್ನಿಧಿಗೆಚಿತ್ತೈಸಿ ॥ ಪಿರಿ ದುಭಕ್ತಿಯೊಳವರವರಪದ । ಸರಸಿಜಕೆವಂದಿಸುತಲೆದ್ದುರು । ಹರು ಷದಿಂ ಕರಗಳನುಜೋಡಿಸಿ ನಿಂತುಕೊಂಡಾಗಳ್ ॥ ೧೩ ॥

ಅಸಮಮಹಿಮರೆ ನಿಮ್ಮಮಹಿಮೆಗ । ಳುಸುರುವಡೆ ನಾಗೇಂ ದ್ರಗಳವ । ಲ್ಲೆಸೆವ ವಸುಧೆಯೊಳೆಮಗೆಸಾಧ್ಯವೆ ತಮ್ಮಮುಖದಿಂದ ॥ ಮಿಸುಪಸ್ತ್ರೀಧರ್ಮವನುನಾವುಗ। ಳೊಸೆದು ಗ್ರಹಿಸುವಪರಮಬಯ್ಕೆ ಯ । ನೆಸಗಿರುವೆವಪರಿಂದ ತಾವುಗಳೆಮ್ಮವಾಂಛಿತವ ॥ ೧೪ ॥

ಭರದೊಳೀಡೇರಿಸಲುಬೇಕೆನು । ತಿರದೆ ಬೇಡಿಕೊಳಲ್ಕೆಶ್ರೀಗ ಳು । ಪರಮಸ್ತ್ರೀಯರವಚನವಾಲಿಸುತಾಗ ಕೃಪೆದಳೆದು ॥ ಪಿರಿದೆಸೆ ವಭಗಿನಿಯರೆ ಹರುಷದಿ । ಪರಮತರಸ್ತ್ರೀಧರ್ಮಸಾರವ । ನೊರೆವೆ ನಿಮ್ಮಿಷ್ಟದೊಲು ಮನವಿಡುತಾಲಿಸುವುದೈದೆ ॥ ೧೫ ॥

ಧರಣಿಯೊಳು ಪರಬೊಮ್ಮನಿಂದಂ । ಪರಮಮಾನವಜಾತಿ ಯೊಳುಘನ । ತರಪ್ರಜೋತ್ಪಾದನೆಯಕತದಿಂ ನಿರ್ಮಿತರುಮಾದ ॥ ಕರಮೆಸೆವನಾರಿಯರುತಮ್ಮಯ । ಪಿರಿದುರಮಣೀಯತ್ವದಿಂದಂ । ನಿರುತತಮ್ಮೊಳಗಿರುವ ಭಕ್ತಿಜ್ಞಾನಗಾಂಭೀರ್ಯ ॥ ೧೬ ॥

ವಿತತಧೈರ್ಯಸ್ಥೈರ್ಯಸಾಹಸ । ನುತಸುಕರುಣತ್ವಾದಿಘನ ಗುಣ । ತತಿಗಳಿಂಭೂಷಿತೆಯರಾಗೀಜಗವಸಂತತದಿ ॥ ಹಿತದಿಬೆಳಗು ತರಣ್ಯಮಂಸಹಿ । ತತುಲರಾಜಿಪ ರಾಜಭವನವ । ನತಿಶಯದ ಸಾಹಸದಿಗೈಯುವ ಚತುರನಾರಿಯರ ॥ ೧೭ ॥

ಪರಮಮಹಿಮಂಗಳನು ಬಣ್ಣಿಸ । ಲುರುಗಪತಿಗಳವಲ್ಲ ಪರಿಕಿಸೆ । ನಿರುಪಮಿತನಿಷ್ಕಪಟಸಾಹಸಗಾರಮಿತಭಾಷಿ ॥ ಪಿರಿದುಸುಂದರ ನುರುಜಿತೇಂದ್ರಿಯ । ನುರುತರದ ದೇಶೋಪಕಾರಿಯು । ಮೆರೆವ ಗುರುಚರದೇವ ಪೂಜಾನಿರತ ಸುವಿವೇಕಿ ॥ ೧೮ ॥

ವಿತತನ್ಯಾಯಿಪರೋಪಕಾರಿಯು । ಸತತಸುಜ್ಞಾನಾದಿ ವರಗುಣ । ತತಿಗಳಿಂ ತವೆಕೂಡಿಧರೆಯೊಳು ರಾಜಿಸುತಲಿರ್ಪ ॥ ಯತಿಸುಬುಧವರಸಾಧು ಶ್ರೀಮಂ । ತತುಳ ಸಾಮ್ರಾಟಸಮ ವಿಕ್ರಮಿ । ಕ್ಷಿತಿಯೊಳುತ್ತಮತತ್ವಕೋವಿದಪ್ರಭೃತಿಗಳ ಜನ್ಮ ॥ ೧೯ ॥

ಧರೆಯಮೇಲಾಗಿರ್ಪುದವರೊಳು । ಮೆರೆಯುವೀ ಕಲ್ಯಾಣಗುಣಗಳು । ಬರಲು ಗರ್ಭವಪೊತ್ತಮಾತೃವೆ ಮುಖ್ಯಕಾರಣಳು ॥ ಪರಮ ಮಾತೆಯೊಳೀಗುಣಂಗಳು । ಮಿರದಪಕ್ಷದಿ ಚಾರುವ್ಯಕ್ತಿಗ । ಳುರುತರದ ಜನ್ಮವದುಪರಿಕಿಸೆ ಸಾಧ್ಯವಾಗದದು ॥ ೨೦ ॥

ಕೆಲರುಸಾಧ್ಯವದೆಂದುಪೇಳ್ವೊಡ । ದಲಘುತರದಾ ಕಂಟಕಂಗಳ । ಬಳಗದಿಂತೀವಿರ್ದ ತುರುಚೆಯಗಿಡದೊಳಗೆ ನೋಡೆ ॥ಲಲಿತದ್ರಾಕ್ಷೆಯ ಪಣ್ಣಪುಡುಕ । ಲ್ಕೆಳಸಿದಂತಾಗುವುದು ವದರಿಂ । ತೊಳಪಸ್ತ್ರೀಯರು ಸಕಲಸದ್ಗುಣ ಪೂರಿತೆಯರಾಗಿ ॥ ೨೧ ॥

ಚಾರುಪುತ್ರರವಡೆದು ಜಗದೊಳು । ಧೀರತನದಿಂ ಬೆಳಗುವುದು ವರ । ನಾರಿಯರಘನಧರ್ಮವದರಿಂ ಸ್ತ್ರೀಯರಿಗೆನೋಡೆ ॥ ಸಾರಯುತಗುಣಗಳ ಸಮೂಹವೆ । ಭೂರಿಭೂಷಣವಾಗಿತೋರ್ಪವು । ಧಾರುಣಿಯೊಳುರುರಾಜಿಸುತ್ತಿರ್ಪೆಲ್ಲ ಗುಣಗಳೊಳು ॥ ೨೨ ॥

ವಿತತಪಾತಿವ್ರತ್ಯಗುಣವದು। ಸತತ ಸರ್ವೋತ್ಕೃಷ್ಟಮೆನಿಪುದು। ಸತಿಗೆಪತಿಯೇದೈವವೆನುತಂ ಶೃತಿಗಳೊರೆಯುವವು ॥ ಪತಿಯವರ ಸೇವೆಯೊಳುಮುದದಿಂ । ದತುಳರತಳಾಗುತ್ತನಿರುತದಿ । ಪತಿಯಹಿತ ವನೆ ಕೋರುತಿರ್ಪವಳಾಗಿ ಭೋಜನವ ॥ ೨೩ ॥

ಎಸೆವಪತಿತಾನೆಸಗದಿರ್ಪನ । ಕಸಮುಭಕ್ತಿಯೊಳೆಸಗದಾಪತಿ। ಸಸಿನೆಯಿಂಪರದೇಶಕೈದಿದ ಸಮಯದೊಳುತಾನು ॥ ಮಿಸುಪಲಂಕಾ ರಾದಿಗಳನಸು । ನೆಸಗಿಕೊಳ್ಳದೆ ಪತಿಯುಸ್ನಾನವ । ನೆಸಗುವುದರೊ ಳಿಮಜ್ಜನವ ಕಡುಹಿತಕರದೊಳೆಸಗಿ ॥ ೨೪ ॥

ಪತಿಯುಭೋಜನಗೈಯ್ದನಂತರ। ಹಿತದಿಭೋಜನಗೈಯ್ವುದು ಚಿತವು । ವಿತತಗೃಹಕಾರ್ಯದೊಳುಮೇಣ್ಬರವೃದ್ಧಬಂಧುಗಳ ॥ ಅತುಲಸತ್ಕಾರದೊಳುನಿರುತಂ । ಹಿತದೆಪರರನ್ನುಪಚರಿಪುದರೊ। ಳತಿ ಮುದದಿ ಪತಿಚಿತ್ತವೃತ್ತಿಯನನುಸರಿಸುತ್ತಿರ್ದೆ ॥ ೨೫ ॥

ಸದಯಮಾನಸಳಾಗಿಸಂತತ । ಚದುರಪತಿವಾಕ್ಯವನುಮೀರ ದೆ। ಮುದದಿ ಪತಿನಿಂದೆಯನುಮೆಂದಿಗು ಗೈಯದಲೆಮತ್ತಂ ॥ ಹೃ ದಯಪೂರ್ವಕವಾಗಿಸರ್ವದ। ಸದಮಳದ ಪತಿಪೊರತುಜಗದೊಳು। ವಿದಿತರತಿಪತಿಯಾದೊಡಂ ಪರಪುರುಷನೊಳುಮನವ ॥ ೨೬ ॥

ಇರಿಸದಲೆಭರ್ತೃವಿನ ವರಗುರು । ಪರಮಮಿತ್ರಸುಭೃತ್ಯಬಂಧು ಗ । ಳಿರವರಿದು ಸದ್ವೃತ್ತಿಯಿಂದವರನ್ನುಪೋಷಿಸುತೆ ॥ ನಿರುತನಿಷ್ಕ ಪಟಸ್ವಭಾವದೊ । ಳಿರುತವರೊಳುರುಭಕ್ತಿತೋರುತ । ಪರಮತರಭ ರ್ತೃವಿನ ಮಾತಾಪಿತೃಗಳೊಳನಿಶಂ ॥ ೨೭ ॥

ಅಧಿಕಭಾಷಣವೆಸಗದುರುವಿನ । ಯದೊಳುಸೇವಿಸುತವರಘ ನತರ । ಹೃದಯಕತಿಮುದವೆಸಗುವುದೆವರಮೋಕ್ಷಸಾಧನವು ॥ ಸದ ಯದಿಂದೀನರಿಗೆ ಹಿತವನು । ಮುವದೊಳೆಸಗುತಲನಿಶಸತ್ಯದಿ । ಬಿದುಧರನ ಕೀರ್ತನೆಯಕೇಳುತ ಕಾಲಕಳೆಯುತ್ತಾ ॥ ೨೮ ॥

ನೀತಿಯಿಂನಡೆವವಳೆ ಜಗದ। ಜ್ಯೋತಿಯೆನಿಪಳು ನೀತಿಬಾಹಿರ। ಘೋತುಕಡುತರಹೇಶಿಯೆನಿಪಳು ಭೂತಲದಿನೋಡೆ॥ ನೀತಿಯಿಂ ಸೌಭಾಗ್ಯಸಂಪದ। ಸಾತಿಶಯಮೊದಗುವುದುನಿಜನಿದು। ನೀತಿಯಂ ತಿಲಮಾತ್ರಮೀರದೆ ಧನ್ಯರಾಗುವುದು ॥ ೨೯ ॥

ಪ್ರತಿದಿನದೊಳುದಯದಲಿಗೌರೀ। ಪತಿಯುಸ್ಮರಿಸುತಲೆದ್ದು ಭಕ್ತಿಯೊ। ಳತಿಹಿತದೆಮಜ್ಜನವಗೈಯ್ಯುರುಭಸಿತಮಂಧರಿಸಿ॥ ಪತಿಗೆಮೇಣ್ಗುರುಹಿರಿಯರಿಂಗತಿ। ಹಿತದಿವಂದಿಸಿ ಮನೆಗೆಲಸಗಳ। ನತಿಶಯದ ಹುರುಪಿನೊಳುಗೈಯುತ್ತೆಸೆವತೊತ್ತಾಗಿ ॥ ೩೦ ॥

ಮಿಸುಪತಿಥಿಯಭ್ಯಾಗತರಮನ। ಮೊಸೆದು ಸತತಾದರಿಸುತಂಮಿಗೆ। ಯೆಸೆಯುತಿರ್ಪತ್ತಿಗೆ ಸುನಾದಿನಿಯೊಡನೆಸಂತತದಿ॥ ಸಸಿನೆಯಿಂದಿರುತಿರ್ದುವಾದವ। ನೆಸಗದವಳಾಗುತ್ತಮುರು ಸಂ। ತಸದೆ ರಾಜಿಪ ಭಾವಮೈದುನರಸಮುಸೇವೆಯನು ॥ ೩೧ ॥

ಗೈದವರಪರಮಾನುರಾಗವ। ಸಾಧಿಸುತಪತಿಸದನದೊಳಗುರು। ಮೋದದಿಂತವೆ ದುಡಿವಚಾರಕರನ್ನುಸಂತತದಿ॥ ಸಾದರದಿಸುತರಂತೆ ಕಾಣುತ। ಹಾದರದಸ್ತ್ರೀಯಿರ್ಪಪಥದೊಳು। ಪಾದಗಳನಿಡದನಿಶ ಕದನವಮಾಡದವಳಾಗಿ ॥ ೩೨ ॥

ತಾನುಮನಿರತಶುಚಿಯೊಳಿರುತಂ। ಮಾನವಂಬಿಡದಾವವಿಧದಲಿ। ದಾನವಂದಾರಿದ್ರರಿಂಗೀಯುತ್ತಸಂತಸದಿ॥ ಸಾನುರಾಗದಿತವರುಮನೆಯನು। ಮಾನಸದಿಪಗಲೆಲ್ಲಬಯುಸದೆ। ದೀನಪತಿಯಾಗ್ಯಹವೆ ಭಾಗ್ಯದರಾಜಗೃಹವೆಂದು ॥ ೩೩ ॥

ತಿಳಿದುವರಪತಿಸೇವೆಯದುತನ। ಗಲಘುಧರ್ಮವದೆಂದುತಿಳಿಯುತೆ। ನಿಲದೆಮನೆತನದೆಲ್ಲಸಂಗತಿಗಳನು ಪ್ರತಿದಿನವು॥ ತಿಳುಪುವುದುಪತಿಗತುಳಹರುಷದಿ। ನಿಲಯದೊಳುಪತಿಯೊಡನೆಕ್ರೋಧದಿ। ಮುಳಿಸುಗೊಂಡೆದುರುತ್ತರವನೀಯುವುದುಕಡುಹೇಯಂ ॥ ೩೪ ॥

ಸತಿಪತಿಗಳತಿಪ್ರೇಮದಿಂದಲಿ। ಸತತವೊಂದೇಮನದಿಕೂಡಿರ।
ಲತುಳಸುಖವದುದೊರೆಯುವುದು ಸಂಸಾರದೊಳುನೋಡೆ ॥ ಕ್ಷಿತಿಯೊ
ಳೀಪರಿಯಿಲ್ಲದಿರುತಿಹ । ಮತಿವಿಹೀನರಬಾಳ್ವೆಯದುಸಂ । ತತದಿ
ಭಯಕರನರಕಕಿಂ ಕಡುಕಷ್ಟವಾಗುವುದು ॥ ೩೫ ॥

ಆದಕಾರಣ ತಾನುಶಾಸ್ತ್ರಗ । ಳೋದಿದವಳುರುಸುಂದರಳುಘ
ನ । ಭೂಧವನಮಗಳಧಿಕಳೆಂದುರುಹೆಮ್ಮೆಯನುಪಡದೆ ॥ ಸಾಧುಪ
ತಿಯುವನೊಂದುಕಾಲದಿ । ಹಾದಿತಪ್ಪುತನಡೆಯಲಾಕ್ಷಣ । ಸಾದರದಿ
ಯೇಕಾಂತದೊಳಗೀಮಾರ್ಗಸರಿಯಲ್ಲ ॥ ೩೬ ॥

ಎನುತೆಬುದ್ಧಿಯಪೇಳಿವಿನಯದಿ । ಘನಪತಿಯಮನವೊಲಿಪು
ದಿದುಪ್ರತಿ । ವನಿತೆಯರ ಕರ್ತವ್ಯವಾಗಿಹುದಿಳೆಯೊಳಗೆನೋಡೆ ॥
ವಿನುತವಾದೀಗುಣಗಳಿರಲವ । ಳನಘನುರುಕೃಪೆವಡೆದುಭುವಿಯೊ
ಳ । ಗನವರತಸುಖಿಸುವಳು ಪಾತಿವ್ರತೆಯುಮೆನಿಸುತ್ತೆ ॥ ೩೭॥

ಪತಿವ್ರತವೆ ಸ್ತ್ರೀಯರಿಗೆಭೂಷಣ । ಪತಿತರನುಪಾವನನವಮಾ
ಡುವ । ವಿತತತೀರ್ಥಗಳೆಲ್ಲ ಪಾತಿವ್ರತೆಯರುರುಮಿಸುಪ ॥ ಅತುಳ
ಪಾದಸ್ಪರ್ಶದಿಂದಲಿ । ವತಿಶಯದಿಪಾವಿತ್ರಪೊಂದುತ । ಕ್ಷಿತಿಯೊಳಗೆ
ಶೋಭಿಸವು ಪಾತಿವ್ರತೆಯರುರುಪಾದ ॥ ೩೮ ॥

ಧೂಳಿಯದುಶಿರದಲ್ಲಿಧರಿಸಲು । ಮೇಲುಯೋಗ್ಯವದಾದುದಿ
ಳೆಯೊಳು । ಶೀಲಸದ್ಗುಣ ಹದಿಬದೆಯರುರುಪಾದದರ್ಶನವು ॥ ಪೇ
ಳಲೇನೀಭೂಪ್ರದಕ್ಷಿಣ । ಲೀಲೆಯಿಂಮಿಗೆ ಗೈಯ್ವಪುಣ್ಯಕೆ । ಮೇ
ಲೆನಿಪಪುಣ್ಯವನು ಕೊಡುವುದುಧರೆಯೊಳಿದುಸತ್ಯಂ ॥ ೩೯ ॥

ಪರಮಪಾತಿವ್ರತೆಯರುರುತರ । ಕರದಿಸ್ಪರ್ಶಿಸಿದನ್ನಭುಜಿಸು
ವ । ಪರಮತರಪುಣ್ಯವದು ಚಾಂದ್ರಾಯಣವೆಮೊದಲಾದ ॥ ಮೆರೆವ
ವ್ರತಗಳನೆಸಗಿಪೊಂದು । ತ್ತಿರುವಪುಣ್ಯಕ್ಕಿಂತಲುಂಘನ । ತರದ
ಪುಣ್ಯವನೀವುದೆನುತಂ ಶೃತಿಗಳೊರೆಯುವುವು ॥ ೪೦ ॥

ಆದಕಾರಣದಿಂದ ಜಗದೊಳ । ಗಾದಿಯಿಂನೋಡುತ್ತ ಬರಲು ರು । ಸಾಧುಘನಪತಿವ್ರತೆಯರಿರ್ದಾತಾಣವೇಪಿರಿದು ॥ ಮೋದವೀಯುವ ಪುಣ್ಯಕ್ಷೇತ್ರವು । ಸಾದರದೊಳವರಿರುವಸದನವೆ । ಮೇದಿನಿಯೊಳುರುತರದ ಸ್ವರ್ಗವದೆನಿಸುವುದುನಿಜದಿಂ ॥ ೪೧ ॥

ಕ್ಷಿತಿಯೊಳಗೆ ಘನತರದ ಪಾತಿ । ವ್ರತೆಯರುರುತರಮಹಿಮೆಗಳನತಿ । ಹಿತದಿವರ್ಣಿಸಲುರಗಪತಿಗಳವಲ್ಲವೆನುತಿರದೆ ॥ ವಿತತಶ್ರುತಿತತಿ ಸತತಹರುಷದೊ । ಳತಿಶಯದಿ ಘೋಷಿಸುತಲಿರ್ಪವು । ಹಿತದೊಳಿದನೀವೆಲ್ಲತಿಳಿಯುತಲಸಮಭಾವನೆಯಿಂ ॥ ೪೨ ॥

ವಿದಿತಪಾತಿವ್ರತವನನುದಿನ । ಹೃದಯಪೂರ್ವಕವಾಗಿ ಜಗದೊಳು । ಚದುರತನದಿಂಪಾಲಿಸುತ ಬರುತಿರ್ಪುದದುಪರಮ ॥ ಸದುಹೃದಯರಾಗಿರ್ಪಸ್ತ್ರೀಯರ । ಸದಮಳದಕರ್ತವ್ಯವಾಗಿಹು । ದಿದನು ಕೃತಿಯೊಳುತಂದು ಧನ್ಯತೆವಡೆವುದದುಯೋಗ್ಯಂ ॥ ೪೩ ॥

ಎಂದುಬೋಧಿಸಲಾಗ ವರಸ್ತ್ರೀ । ವೃಂದವೆಲ್ಲವು ಪರಮಮಹಿಮರ । ಚೆಂದವಾಗಿಹ ಸರಸಬೋಧಾಮೃತವಸಲೆಸವಿದು ॥ ಅಂದು ಸಂತಸಭರಿತರಾಗುತೆ । ಕಂದಗೊರಳನರೂಪರಿಗೆಮುದ । ದಿಂದವಂದಿಸಿ ಸದಯಶ್ರೀಗಳೆ ಯಿಂದುನಾವುಗಳು ॥ ೪೪ ॥

ಅಸಮತರದಾತಮ್ಮಬೋಧವ । ಸಸಿನೆಯಿಂಮಿಗೆಕೇಳಿಶೋಭಿಪ । ವಸುಧೆಯೊಳು ಘನಧನ್ಯರಾದೆವೆನುತ್ತಲುಸುರಲ್ಕೆ ॥ ಬಸವಯೋಗಿಗಳಾಗನಿಮುಗುರು । ಶಶಿಧರನುಸಂತತದಿಸೌಖ್ಯವ । ನೊಸೆದುಕೊಡಲೆನುತ್ಯೆದೆಪರಸುತ ಕುಶಲದೊಳಗಿರ್ದಂ ॥ ೪೫ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೋಣಾಕ್ಷರಗಳಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತ ನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳುವುದು ವಂಭತ್ತನೆಯಸಂಧಿ ॥ ೪೬ ॥

ಸಂಧಿ ೯ ಕ್ಕಂ ಪದ ೪೯೬ ಕ್ಕಂ ಮಂಗಲಂ ಮಹಾ ಶ್ರೀ. ಶ್ರೀ.

॥ ಶ್ರೀ ಚಂದ್ರಶೇಖರಾಯನಮಃ ॥

# ಹತ್ತನೆಯ ಸಂಧಿ.



ಸೂಚನೆ— ಬಸವಯೋಗಿಗಳಗ್ನಿವೊದಲಾ ।
ದಸಮುಮಹಿಮೆಗಳೆಸಗಿ ತರುಣರಿ ।
ಗುಸುರಿದನು ವರಬ್ರಹ್ಮಚರ್ಯಾಶ್ರಮದಧರ್ಮವನು ॥

ಶ್ರೀವುಮಾವಲ್ಲಭನೆ ಶರ್ವನೆ । ಭಾವಜಾರಿಯೆ ಸರ್ವಜಗಕರ್ತ । ಪಾವನನೆ ಮನುಮುನಿಮಹಾಪ್ರಮಥಾಧಿನಾಯಕನೆ ॥ ಜೀವಿಗಳ ವಾಂಛಿತವನೀಯುವ । ಕೋವಿದನೆ ಮಂದರನಿವಾಸನೆ । ಯಾವಗಂ ಸಲೆನಿಮ್ಮಪದರಾಜೀವಕೊಂದಿಪೆನು ॥ ೧ ॥

ಒಂದುದಿನಬಸವಾರ್ಯಮಹದಾ । ನಂದದೊಳುಕುಳಿತಿರ್ಪಸಮಯದೊ । ಳಿಂದುಧರನಿಭ ಪರಮಬಸವೇಶ್ವರಪುರಾಣವನು ॥ ಚಂದದಿಂದಲಿರಾಜಿಸುತಜನ । ವೃಂದಕಾನಂದವನುಬೀರುತ । ಲಂದು ಘನಮೆಸೆಯುತ್ತಲಿರ್ದಿಹ ತಮ್ಮಮಠದೊಳಗೆ ॥ ೨ ॥

ಇಡಿಸಬೇಕೆಂದೆನುತೆ ಮನದೊಳ । ಗೊಡನೆಮೂಡಲು ಮುದದೊಳಾಕ್ಷಣ । ಜಡದೆ ಬಸವಪುರಾಣವಂ ಪ್ರಾರಂಭಗೊಳಿಸಿದರು ॥ ಎಡೆವಿಡದೆ ಪೌರಾಣಕಾರ್ಯವು । ಸಡಗರದಿನಡೆಯುತ್ತಲಿರೆ ವರ । ಮೃಡನಭಕ್ತರು ದೂರದೂರಪ್ರದೇಶದಿಂದಾಗಳ್ ॥ ೩ ॥

ಸಾರಯುತಪೌರಾಣಮಂ ಸುವಿ । ಚಾರದಿಂದಂಶ್ರವಣಗೈಯಲು । ಘೋರನಿರದ್ವೈತಂದು ಶ್ರವಣವಮಾಡಿಮುದವಾಂತು ॥ ಚಾರುಚರಬಸವಾರ್ಯರಿಟ್ಟಿಹ । ಭೂರಿದಾಸೋಹದೊಳುಸರ್ವರು । ಸ್ಮೇರಮುಖದಿಂಬಂದು ಭೋಜನವೆಸಗಿಪೋಗುತಿರೆ ॥ ೪ ॥

ಪೂತವಾದೀಕಾರ್ಯದೊಳಗತಿ । ಪ್ರೀತಿಯಿಂದಂ ಧರ್ಮದೀ
ಕ್ಷೆಗ । ಳೋತುಧರ್ಮದಲಗ್ನಗಳು ಮಿಗಿಲಾಗಿಜರುಗಿದವು ॥ ಈತೆರದ
ಪೌರಾಣಕಾರ್ಯ ಸು । ರೀತಿಯಿಂದಿರದೈದುತಿಂಗಳು । ಸಾತಿಶಯ
ದಿಂನಡೆಯುತಿರ್ದುದನೇನಬಣ್ಣಿಸಲಿ ॥ ೫ ॥

ಒಂದುದಿನಹರಳಯ್ಯಗಳಘನ । ಸಂದಕಾಯಕಗೈವಜನಗಳ
ವೃಂದವದು ಪೌರಾಣಕೇಳುವ ಬಯ್ಕೆಯನುಪೊಂದಿ ॥ ಚಂದಚಂ
ದದಪುಷ್ಪಫಲಗಳ । ಗಂಧದ್ರವ್ಯಾದಿಗಳಮನಕಾ । ನಂದಗೊಳಿಸುವ
ಪೂಜೆಸಾಮಗ್ರಿಗಳನೆಲ್ಲವನು ॥ ೬ ॥

ಪರಮಹರುಷದಿ ತೆಗೆದುಕೊಳ್ಳುತೆ । ಮೆರೆವತಮ್ಮಟೆ ಕಹಳೆ
ಗಳಭೋ । ರ್ಗರೆಸುತತಿದೀವಿಟಗೆಬೆಳಕಿಲಿ ಪಿರಿದುವೈಭವದೆ ॥ ಪರ
ಮಭಕ್ತಿಯದಳೆದುಬಸವೇ । ಶ್ವರನ ಜಯಘೋಷವನುಗೈಯುತ ।
ಉರುತರದಿಮೆರೆಯುತ್ತಲಿರ್ದ ಪುರಾಣಮಂಟಪದೊಳ್ ॥ ೭ ॥

ಭರದೊಳೈತರುವನಿತರೊಳೆ ನೆರೆ । ಕರದಿಪಿಡಿದಿಹ ದೀವಿಟಗೆಗ
ಳ । ಮಿರುಪುರಿಯು ಪೌರಾಣಮಂಟಪಕಿರದೆವ್ಯಾಪಿಸುತೆ ॥ ತ್ವರಿತ
ಜ್ವಾಲೆಯು ಸುತ್ತಪಸರಿಸು । ತಿರಲುಜನಸಂದಣಿಯುನೋಡುತ ।
ಉರುತರದೊಳೊದರಿದರು ಬೆಂಕಿಯುಬೆಂಕಿಯೆಂದೆನುತೆ ॥ ೮ ॥

ಬೆಂಕಿಯೆಂಬುವಧ್ವನಿಯು ಪಶುಪತಿ । ಕಿಂಕರನುತಾನೆನಿಸಿಜಗ
ದಿಕ । ಲಂಕವಿರಹಿತರಾದ ಬಸವಾರ್ಯರಿಗೆಕೇಳಿಸಲು ॥ ಬಿಂಕವೆಲ್ಲ
ವತೊರೆದುಮನದೊಳು । ಶಂಕರನಸ್ಮರಿಸುತ್ತಹರುಷದಿ । ಭೋಂಕ
ನಿರದೈತಂದು ಮಂಟಪದೊಳಗೆನೋಡುತ್ತ ॥ ೯ ॥

ಎಲ್ಲಜನಗಳಕುರಿತು ಭುವನದೊ । ಳೆಲ್ಲಪೂಜ್ಯತೆವಡೆದಬಸವ
ನ । ಸಲ್ಲಲಿತನಾಮವನು ಹರುಷದೊಳುಚ್ಚರಿಸಿರೆನುತೆ ॥ ಉಲ್ಲಸದೊ
ಳೊರೆದಾಗಗೌರೀ । ವಲ್ಲಭನಸಮರೂಪರೆನಿಸುತೆ । ವೊಳ್ಪಕಾರ್ಯ
ವಗೈಯ್ವ ಜಂಗಮಮೂರ್ತಿಯಂಕರೆದು ॥ ೧೦ ॥

ಭರದಿಜಲವನುತರಿಸಿ ಹರುಷದಿ । ಚರಣಧೂಳೋದಕವನೆಸ
ಗುತ । ಉರುಬಸವನಾಮವನು ಪಠಿಸುತಲಾಜಲವನಾಗಳ್ ॥ ಉರಿ
ಯುತಿರ್ಪಾಮಂಟಪದಮೇ । ಲಿರದೆ ಸಿಂಪಡಿಸಲ್ಕೆ ಘನವಾ । ಗುರಿ
ಯುತಿರ್ದಾವಹ್ನಿ ತೀವ್ರದಿತಾನೆಶಾಂತವನು ॥ ೧೧ ॥

ಪೊಂದಿಪ್ಪೋಗಲುಮಿಗೆನೆರೆದಜನ । ವೃಂದವದು ಪರಮಚ್ಚರಿಯ
ನಿರ । ದಂದುಪೊಂದುತಲೆರಡನೆಯ ಕಲ್ಯಾಣಪಟ್ಟಣದ ॥ ಇಂದುಧ
ರನಿಭನೆನಿಸಿಪರಮ ವ । ಸುಂಧರೆಯೊಳುರುಮೆರೆದಬಸವನೆ । ಯಿಂ
ದುಯವ್ಮ್ರಯ ಬಸವಯೋಗಿಗಳಾಗಿ ಬಂದಿರ್ಪಂ ॥ ೧೨ ॥

ಎನುತಲಪರಪವಾಡಮಂಸಲೆ । ಮನಸಿನಿಂಪೊಗಳುತ್ತಮುದ
ದೊಳು । ವಿನುತಬಸವಾರ್ಯರಿಗೆ ಘನಜಯವಾಗಲೆನುತಿರದೆ ॥ ಮನ
ಮೊಲಿದುಜಯಘೋಷವೆಸಗ । ಲ್ಕನುಪಮದ ಬಸವಾರ್ಯನಾಗಳ್ ।
ಚಿನುಮಯನಸ್ಮರಿಸುತ್ತಿದೆಲ್ಲವು ಶಿವನಘನಲೀಲೆ ॥ ೧೩ ॥

ಎಂದುಪೇಳುತಲೆಂದಿನಂದದಿ । ಸಂದಪೌರಾಣವನು ನಡೆಸಿರ ।
ಲಿಂದುಧರಭಕ್ತರುಗಳೆಲ್ಲರು ಮಾರನೆಯದಿನವೇ ॥ ಬಂದುನೋಡಲು
ಮಂಟಪವುಸಲೆ । ಯೆಂದಿನಂದದಿರಾಜಿಸುತ್ತಿರ । ಲಂದುಸುಟ್ಟಿಹ
ಕಲೆಯು ನಸುಮಾತ್ರವದುಕಾಣಿಸದೆ ॥ ೧೪ ॥

ಬಂದಭಕ್ತರವೃಂದವೆಲ್ಲವ । ದಂದುಶ್ರೀಗಳನುತಿಸುತಿರುತಿರ ।
ಲೊಂದುದಿನ ಜನರೆಲ್ಲಕೂಡಿ ಪುರಾಣಕಾರ್ಯವದು ॥ ಚಂದದಿಂಮು
ಗಿಯುತ್ತಬಂದಿತು । ಮುಂದೆಗಣಸಂತರ್ಪಣೆಯುಮಿಗೆ । ಯಂದ
ದಿಂದೆಸಗಲ್ಕೆ ಮೆರೆವೀಮಠದಬಾವಿಯೊಳು ॥ ೧೫ ॥

ಜಲವದಾದಡೊ ಬತ್ತಿಪೋಗುತ । ಉಳಿದನಸುಜಲ ಲವಣ
ಮಾಗುತೆ । ನಲವಿನಿಂದಾರಾಧನೆಗೆ ಬರುತಿರ್ಪಜನರಿಂಗೆ ॥ ಸುಲಲಿತ
ದಿನಿರ್ಮಲವದಾಗಿಹ । ಜಲವುವೇಳೆಗೆ ದೊರೆಯದಲೆಬಹು । ಬಳ
ಲುವಂತಾಗುವುದೆನುತಲತಿಚಿಂತಿಸುತ್ತಿರಲು ॥ ೧೬ ॥

ಅನಿತರೊಳಿಬಸವಾರ್ಯನೈತಂ। ದಿನಿತು ಜನಚಿಂತಿಸುವುದೇನಿ
ದು। ಸನುಮತದಿಪೇಳುವುದೆನುತ್ತಲಿ ಕೇಳಲಾಗಿರದೆ ॥ ಜನರುನೀಿ
ನತೊಂದರೆಯ ಬಹು। ವಿನಯದಿಂದಂ ಪೇಳಿಕೊಳಲಾ। ಗನುನಯ
ದೆಬಾವಿಯೊಳುಮಿರುತಿಹ ಕೆಸರತೆಗೆದ್ಯೆದೆ ॥ ೧೭ ॥

ಪರಮಪೂಜೆಯಸಲಿಸೆಗಂಗಿಗೆ। ಹರುಷದಿಂದಲಿಯಮಗೆಗಂಗೆ
ಯು। ಭರದಿಸಾಕೆನಿಪಂತೆ ದೊರೆಯುವಳೆನುತೆಪೇಳಲ್ಕೆ ॥ ಪುರದ
ಜನಗಳು ಬಾವಿಯೊಳಗಿರು। ತಿರುವಕೆಸರಂತೆಗೆದು ಭಕ್ತಿಯೊ। ಳುರು
ತರದಿ ಗಂಗೆಯನುಪೂಜಿಸಲಾಗದೇನೆಂಬೆ ॥ ೧೮ ॥

ನಿಲದೆಜಲವಿರದುಕ್ಕಿಬರುತಿರ। ಲೊಲವಿನಿಂ ಜನರೀಕ್ಷಿಸುತ್ತಿರೆ।
ಕೆಲವುನಿಮಿಷಗಳೊಳಗೆ ಬಾವಿಯುತುಂಬಿಮೇಲ್ವರಿಯೆ ॥ ಕೆಲವರಾ
ಜಲವೀಂಟಮೊದಲಿನ। ಜಲದಪರಿಯಿರದೀಗಲವಣವ। ನುಳಿದು
ಘನತರರುಚಿಯನೀವಮೃತದೊಲು ತೋರುವುದು ॥ ೧೯ ॥

ಇಂತೆನುತಲುದ್ಗಾರತೆಗೆಯೆ ಸ। ಮಂತುಜನರಿಗೆ ಜಲವುದೊರೆ
ಯ। ಲ್ಕಂತುಹರರೂಪಿಗಳ ಮಹಿಮವಿದೆಲ್ಲವೆಂದೆನುತೆ ॥ ಸಂತಸದಿ
ಜನಪೊಗಳುತಿರಲ। ತ್ಯಂತಸಂಭ್ರಮದಿಂದನಡೆದಿರು। ವಂತಪೌರಾ
ಣದಸಮಾಪ್ತಿಯಕಾರ್ಯವದುನಡೆಯೆ ॥ ೨೦ ॥

ಪರಮಗಣಸಂತರ್ಪಣೆಯು ಸುವಿ । ತರಣೆಯಿಂನಡೆದಿರಲು
ಪಂಕ್ತಿಯೊ । ಳಿರದೆಘೃತವದು ಕಡಮೆಬೀಳಲ್ಕಾಗಜನರುಗಳು ॥
ಪರಮಬಸವಾರ್ಯರಿಗೆ ತಿಳುಹಿಸೆ। ಪರುಷದಿಂಚಿಂತಿಸಲುಬೇಡಿರಿ।
ಹರನುನಿಮ್ಮಿಷ್ಟವನು ತೀವ್ರದೊಳಿರದೆಪೂರ್ಯೆಪಂ ॥ ೨೧ ॥

ಎಂದುಪೇಳುತ್ತಿರುವನಿತರೊಳಿ । ಚಂದದಿಂರಾಜಿಸುವದ್ವಾರ
ದ। ಮುಂದೆಇಪ್ಪತ್ತೈದು ತುಪ್ಪದಕುಂಭಗಳುಬಂದು ॥ ನಿಂದಿರುವು
ದನು ಬಂದಮಹಜನ। ವೃಂದವದುನೆರೆನೋಡಿ ತೀವ್ರದೊ। ಳಂದು
ನಿಬ್ಬೆರಗಾಗಿ ಮೂಗಿನಮೇಲೆ ಬೆರಳಿಟ್ಟು ॥ ೧೮ ॥

ಏನಿದೇನಿದು ಘನವಿಚಾರವು । ಯೇನಿದೇನಿದುವರಮಹತ್ವವು। ಯೇನಿದೇನಿದು ಪರಮಬಸವಾರ್ಯರಮಹಾನೈಷ್ಠೆ ॥ ಎನುತೆಜನ ಕೊಂಡಾಡಿಜವದೊಳು । ಜನರುತಂದಿಹಘೃತದಕೊಡಗಳ । ನನುನ ಯದೆಬಳಸುತ್ತ ಗಣಸಂತೃಪ್ತಿಗೊಳಿಸಿದರು ॥ ೨೩ ॥

ಈಪುರಾಣಸಮಾಪ್ತಿಕಾಲ । ಕಪಾರಭಕ್ತಾವಳಿಯುಮೇಣ್ನಗ। ಚಾಪರೂಪನಚರಸಮೂಹವು ನಾಲ್ಕುಸಾಸಿರವು ॥ ಈಪರಿಯೊಳತಿಶ ಯದಿಕೂಡಿರೆ । ಪಾಪಹರಮಾಹೇಶ್ವರುಗಳಿಂ । ಗಾಪರಾತ್ಪರರೂಪ ಬಸವಸ್ವಾಮಿಗಳುಮುದದಿಂ ॥ ೨೪ ॥

ಪ್ರತಿಚರನಿಗೊಂದೊಂದುಪಂಚೆಯ । ಜೊತೆಯನುಂಸ್ತ್ರೀಯ ರಿಗೆ ಶೀರೆಗ । ಳತಿಭಕುತಿಯಿಂದ್ಯೆದೆ ದಾನವನಿತ್ತುರಾಜಿಸುವ ॥ ಕ್ಷಿತಿ ಯೊಳಾಚಂದ್ರಾರ್ಕವಾಗಿಯೆ । ವಿತತಕೀರ್ತಿಯವಡೆದುಶೋಭಿಸು। ವತುಳಬಸವೇಶ್ವರನಕೃಪೆಗುರುಪಾತ್ರನಾಗೆಸೆದಂ ॥ ೨೫ ॥

ಇಂತುಪೌರಾಣದಸಮಾಪ್ತಿಯ । ಸಂತಕಾರ್ಯಗಳೆಲ್ಲಬಹು ಪರಿ । ಸಂತಸದಿಪರಿಪೂರ್ಣವಾಗಿಯೆ ಮುಗಿದುಪೋಗಲ್ಕೆ ॥ ಕಂತು ಹರರೂಪನಪುರಾಣದ । ಕಾಂತಿಯುತವಾರಾಧನೆಗೆಬಹು । ಸಂತಸದಿ ನವತರುಣನಿಕರವದಿರದೆ ಬಂದಿರಲು ॥ ೨೬ ॥

ಪರಮಚರಬಸವಾರ್ಯರೊಳು ಘನ । ತರದಭಕ್ತಿಯನಾಂತು ತರುಣರು । ಭರದೊಳವರುರುಸನ್ನಿಧಿಗೆ ಬಂದೆರಗಿಸ್ವಾಮಿಗಳೆ ॥ ಹರು ಷದಿಂನಾವುಗಳುತಮ್ಮಯ । ಪರಮತರವದನದೊಳುತವೆಘನ । ತರದೊಳೆಸೆಯುವ ಬ್ರಹ್ಮಚರ್ಯಾಶ್ರಮದ ಧರ್ಮವನು ॥ ೨೭ ॥

ಕೇಳಬೇಕೆಂದಿರುವೆವೆಮ್ಮಯ । ಮೇಲೆನಿಪವಾಂಛಿತವಭರ ದಿಂ । ಲೀಲೆಯಿಂಸಫಲವ ಗೊಳಿಪುದೆನುತ್ತೈದೆಬೇಡಲ್ಕೆ॥ನೀಲಕಂಧರ ರೂಪಯತಿವರ । ಲಾಲಿಸುತಲೀವಚನವನು ಸಲೆ । ಕೇಳಿರೈನವಯು ವಕರೇ ನಿಮಗೊರೆವೆನೆನದರಿರವ ॥ ೨೮ ॥

ಪರಶಿವನುರಚಿಸಿರ್ಪ ಧರಣಿಯೊ । ಳರಿಯೆ ಮೊದಲಿಂಜನ್ಮ
ತಾಳುತ । ಮೆರೆವನಿಖಿಲ ಪ್ರಾಣಿನಿಕರದೊಳೈದೆಪರಿಕಿಸಲು ॥ ಪರಮ
ಮಾನವಜನ್ಮವೇಬಹು । ಪರಿಯೊಳುರುತರ ಶ್ರೇಷ್ಠವೀಪರ । ತರದ
ಜನ್ಮವು ಪಾಪಪುಣ್ಯಗಳಿಂ ಧರಿತ್ರಿಯೊಳು ॥ ೨೯ ॥

ಎಸೆಯುತಿಹ ಕ್ರಿಮಿಕೀಟಪಶುಖಗ । ವಿಸರಜನ್ಮಾಂತರುಗಳಿಂ
ಮಿಗೆ । ಮಿಸುಪ ಮಾನವಜನ್ಮಪ್ರಾಪ್ತವದೆಂದುಶೃತಿತತಿಗಳ್ ॥
ಒಸೆದುಪ್ರತಿಪಾದಿಸುತಲಿರ್ಪವು । ವಸುಧೆಯೊಳು ಮಾನವಗೆಪರಿಕಿಸ
ಲಸಮತರದಾಬುದ್ಧಿಯಿಂದಲೆ ಶ್ರೇಷ್ಠಮೊದಗಿಹುದು ॥ ೩೦ ॥

ಬುದ್ಧಿಬಲದಿಂ ಧಾರಿಣಿಯ ಮೇ । ಲಿದ್ದಖಿಳಪ್ರಾಣಿಗಳ ತನ್ನ
ಯ । ಹದ್ದಿನೊಳಗವನಿಟ್ಟುಕೊಳ್ಳುವುದಲ್ಲದೆಯು ಮತ್ತಂ ॥ ಸಿದ್ಧ
ರೊಲು ಪ್ರತಿಸೃಷ್ಟಿಯನುಸಹ । ಸಿದ್ಧಗೈಯುವ ನಿರವೆಬಳಿಕ ಪ್ರ ।
ಸಿದ್ಧಮನುಜತ್ವವದು ಕಾಲಾಂತರದಿ ನೋಡಲ್ಕೆ ॥ ೩೧ ॥

ತೊಳಪದೇವತ್ವಕ್ಕೆ ಮುಟ್ಟುವ । ದಿಳೆಯೊಳತಿಶಯುಮಲ್ಲವದ
ರಿಂ । ವಿಳಸಿತದ ಮನುಜತ್ವವನು ಘನಸಾರ್ಥಕವಗೈಯ್ದು ॥ ಕೊಳು
ವದದು ಪ್ರತಿಯೋರ್ವ ಮಾನವ । ನಲಘುತರ ಕರ್ತವ್ಯವಾಗಿಹು ।
ದಿಳೆಯೊಳಗೆ ರಾಜಿಸುವ ಸಕಲಪ್ರಾಣಿವಿಸರಗಳ ॥ ೩೨ ॥

ಪರಮತರದಾಯುಷ್ಯಕಿಂ ಮಿಗೆ । ಮೆರೆವಮಾನವನಾಯು
ವೇಬಹು । ಪರಿಯೊಳತಿಯುಪಯೋಗಕರವಾಗಿರ್ಪುದದರಿಂದೆ ॥
ನರನ ಪರಮಾಯುವದು ಪೆರ್ಚುತ । ತೆರಳಿದಂತೀಜಗಕೆಬಹುಪರಿ।
ಪಿರಿದು ಶುಭಕರವಾಗುವುದು ನಿಜವಾದಡೆಯು ಬರಿದೆ ॥ ೩೩ ॥

ಸತತನಿದ್ರಾಹಾರಭೋಗದೊ । ಳತಿಶಯದೊಳಾಯುವನು ಕಳೆ
ಯದೆ । ಶಿತಿಗಳನ ನಾಮವನು ಸ್ಮರಿಸುತ ತನ್ನದೇಹವನು ॥ ಸತತ
ಹಿತದಿಂದಿಟ್ಟುಕೊಳ್ಳುತ । ಲತುಳಪುರುಷಾರ್ಥಗಳ ಸಾಧಿಸಿ । ಕ್ಷಿತಿ
ಯೊಳಗೆಜಸವಡೆದುಜೀವಿಪುದದುವೆ ಬಹುಮುಖ್ಯಂ ॥ ೩೪ ॥

ವಿತತಪುರುಷಾರ್ಥಗಳ ಪಡೆವೊಡೆ । ಸತತಪರತರ ಬ್ರಹ್ಮಚ
ರ್ಯ । ವ್ರತವೆಪರಮೋಪಾಯಮಾಗಿರುತಿರ್ಪುದದರಿಂದೆ ॥ ಹಿತದೊ
ಳಿದನುರೆ ಪಾಲಿಸುವನಿಗೆ । ಶಿತಿಗಳನು ತನ್ನೊಳಶದೊಳಿರ್ಪನಿ । ದತಿಶ
ಯದಮಾತಲ್ಲವೆನುತುರು ಶೃತಿತತಿಗಳನಿಶಂ ॥ ೩೫ ॥

ಪರಿಪರಿಯವಿಧವಾಗಿಘೋಷಿಸು । ತಿರುವುದನುಲಾಲಿಸುತಲ
ದರೊಲು । ನಿರುತದೊಳುಚರಿಸುತ್ತಸೌಖ್ಯವಪೊಂದಿ ನಲಿಯುವುದು॥
ಧರಣಿಯೊಳುಪ್ರತಿಯೋರ್ವ ಮನುಜನ । ಪರಮತರಕರ್ತವ್ಯಮಾಗಿ
ರು । ತಿರುವುದದರಿಂದರಿಯೆಜನನೇಂದ್ರಿಯದ ನಿಗ್ರಹಕೆ ॥ ೩೬ ॥

ಅನಿಶಶೃತಿಗಳು ಬ್ರಹ್ಮಚರ್ಯವ । ದೆನುತೆವುಲಿವುತಲಿರ್ಪವೆ
ಮ್ಮಯ । ತನುವದುವೆ ರಸರಕ್ತನೆಣಮಾಂಸಸ್ಥಿಮಜ್ಜೆಯು ಮೇಣ್॥
ಘನತರದಶುಕ್ಲಗಳುಮೆಂಬುವ । ತನುವಿಗತಿಯಾಧಾರವೆನಿಸುವ ।
ವಿನುತವಾಗಿಹ ಸಪ್ತಧಾತುಗಳಿಂದಲನವರತ ॥ ೩೭ ॥

ಪೋಷಿಸಲ್ಪಡುತಿರ್ಪುದದರಿಂ । ಲೇಸಿನಿಂ ನಾವಿವುಗಳತ್ಯಂ ।
ತಾಶೆಯಿಂದಂ ಬಿಡದೆರಕ್ಷಿಸಿಕೊಳ್ಳೆ ದೇಹವದು ॥ ಭಾಸುರಾರೋಗ್ಯತೆ
ಯಪೊಂದಿ ವಿ । ಶೇಷಕಾರ್ಯಗಳೆಲ್ಲವನ್ನು । ಲ್ಲಾಸದಿಂ ಸಾಧಿಸಿಕೊ
ಳ್ಳಲ್ಕನುವಾಗುವುದು ನೋಡೆ ॥ ೩೮ ॥

ವಿಳಸಿತದಘನಸಪ್ತಧಾತುಗ । ಳೊಳಗೆ ವೀರ್ಯವು ಶ್ರೇಷ್ಠ
ಮಾಗಿಹು । ದಿಳೆಯೊಳಿದನತಿಶ್ರಮದಿ ಸಲೆಕಾಪಾಡಿಕೊಳ್ಳದಿರೆ ॥ ಘಳಿ
ಲನುರುಮೃತ್ಯುವಿನ ಬಾಯಿಗೆ । ಸಿಲುಕುವೆವು ಜಗದೊಳಗೆಪರಿಕಿಸೆ ।
ಕೊಳಪವೀರ್ಯಕ್ಕಿಂತಲುಂ ಮಿಗಿಲಾದವರವಸ್ತು ॥ ೩೯ ॥

ಧರೆಯೊಳೆಲ್ಲಿಯು ದೊರೆಯಲಾರದು । ಪರಮವೀರ್ಯವದೆಸೆವ
ರಸಮೇಣ್ । ವರರಕುತಮಾಂಸಾದಿಗಳ ಘನಸತ್ವಮಾಗಿರುತೆ ॥ ಮೆರೆ
ವಕಾರಣದಿಂದೆ ನೋಡಲು । ತಿರೆಯೊಳಿವುಗಳೊಳೆಲ್ಲನಿರುತದಿ । ನೆರೆ
ಮಹತ್ವವದೆನಿಸಿರಾಜಿಸುತಿರ್ಪ ವೀರ್ಯವನು ॥ ೪೦ ॥

ತಿಳಿಯದಲೆಭ್ರಷ್ಟತ್ವವನುನಾವ್ । ಗೊಳಿಸಿಕೊಳೆ ಜೀವತ್ವ ದುರುತರ । ಪೊಳೆವತೇಜವನಿರದೆನಿರುತಂಪಿರಿದುನಾಶವನು ॥ ಗೊಳಿಸಿ ಕೊಂಡಂತಾಗುವುದುವರ । ತಿಲದೊಳಗೆತೈಲವದುವ್ಯಾಪಿಸಿ । ತೊಳ ಪತೆರದಲಿದೇಹದೊಳು ವೀರ್ಯವದುವ್ಯಾಪಿಸುತೆ ॥ ೪೧ ॥

ಬುದ್ಧಿಶಕ್ತಿಯವೃದ್ಧಿಗೊಳಿಸಿ ಪ್ರ । ಸಿದ್ಧಜೀವದಧಾರಣೆಗೆ ತನು । ಸದೃಢಕೆಸಂತತದಿ ಮುಖ್ಯಾಧಾರಮೆನಿಸಿದನು ॥ ಶ್ರದ್ಧೆಯಿಂ ದಂತಡೆಯೆ ಜಗದೊಳು । ಸಿದ್ಧಪುರುಷರೊಲಾತ್ಮಪ್ರಭೆಯದು । ಸಿದ್ಧವಾಗುತತಕ್ಷಣದೆ ಪೊರಸೂಸುವುದುದಿಟವೂ ॥ ೪೨ ॥

ಇಳೆಯೊಳೀವರಬ್ರಹ್ಮಚರ್ಯವು । ಘಳಿಲನಖಿಳವ್ಯಾಧಿಗಳ ನತಿ । ಬಲದಿನಿರ್ಮೂಲವನುಗೊಳಿಸುತ ದೇಹಕುರುತರದ ॥ ಬಲವ ನೀವುದು ಧಾರುಣಿಯೊಳುರು । ಪೊಳೆವದೀರ್ಘಾಯುವನುಕೊಡುವು ದು। ನಿಲದೆಕ್ಲೇಶವದಾದವೃದ್ಧಾಪ್ಯವನು ತಡೆಯುವುದು ॥ ೪೩ ॥

ಘೋರಮೃತ್ಯುವಕೊಲಗಿಸುವುದುರು । ಚಾರುಸರ್ವೇಂದ್ರಿಯ ಗಳಂಸಲೆ । ಸಾರಸುಖದೊಳಗಿಡುತಿಹುದು ಪುರಹರನಪರತರದ ॥ ಭೂರಿಶಕ್ತಿಯತಿಳಿದುಮುವನಂ । ಮೀರಿಸಂದರ್ಶನವಗೊಳಿಪೊಲ । ಪಾರಹಿತದಿಂದೆಸಗುವುದು ಶುಭಕಾರಿಯಾಗಿಹುದು ॥೪೪ ॥

ಧರಣಿಯೊಳು ಪ್ರತಿಸೃಷ್ಟಿಗೈಯುವ । ಪಿರಿದುಬುದ್ಧಿಯಶಕ್ತಿ ಯೀವುದು । ಕರಮೆಸೆವ ರವಿಶಶಿಗಳಿರ್ಪನಕುರುತರದಜಸವ ॥ ಸ್ಥಿರ ಗೊಳಿಸುತೆರಡನೆಯ ಪರಮೇ । ಶ್ವರನೊಯೆನಿಪೊಲು ಜಗದಿಬೆಳಗು ವ। ತೆರದಿಗೈಯುವಧಿದರಮಹಿಮೆಯ ವರ್ಣಿಸಲ್ಕರಿದು ॥ ೪೫ ॥

ಪರಮಬಲವಾರೋಗ್ಯವಾಯುವು । ಪಿರಿದುಧನತೇಜಸ್ಸು ವೀರ್ಯವು । ಮೆರೆವಶೋಭಾಪ್ರೀತಿಘನಸೌಂದರ್ಯವರಮತಿಯು ॥ ನಿರುತರಾಜಿಪ ಕೀರ್ತಿಪುಣ್ಯವು। ನಿರುಪಮದ ನಿಜಮೋಕ್ಷನಿವುಗಳು। ಸರುವಜಗದೊಳು ಬ್ರಹ್ಮಚರ್ಯದ ಪತನದಿಂದಿರದೆ ॥ ೪೬ ॥

ಜನದಿನಾಶವಪೊಂದಿನಿಜಸುಖ । ಭುವಿಯೊಳೆಂದಿಗು ದೊರೆ
ಯದೋಲಾ । ಗವಿಶತದೊಳಿಹಸರದಿ ಘನಘೋರಾದಿದುಃಖಗಳು ॥
ತನೆಯೊದಗಿಕಡೆಗತಿಭಯಂಕರ । ಜವನನರಕದಕೂಪದೊಳುಬಹು।
ಬವಣೆಯಿಂದಂಬೀಳ್ವ ಪರಿಪರಿ ನರಕಯಾತನೆಯಂ ॥ ೪೭ ॥

ಸತತಮನುಭವಿಸುತ್ತ ಜೀವಿಗ । ಳತಿಶಯದೆಕ್ಲೇಶವನುಗೊಳಿ
ಸುವ । ವಿತತಮಾಗಿಹ ವಿಧಿಯವಾಯೆಗೆಶಿಲ್ಕಿ ಗಾರ್ಧಪಥೋಲ್ ॥
ಸತತದೊಳುಮಿಣಪರಕೆ ಸುತ್ತುತ । ಗತಿಯಕಾಣದೆಕೆಟ್ಟುಪೋಪರು ।
ಒತದೊಳಿದನೆಲ್ಲವನು ತಿಳಿಯುತೆ ಬ್ರಹ್ಮಚಾರಿಗಳು ॥ ೪೮ ॥

ಪರಮಶುದ್ಧವದಾದ ಮನದಿಂ । ನಿರುತರಾತ್ರಿಯೊಳೋರ್ವನಾ
ಗಿಯೆ । ಮೆರೆವಸದನದಿ ಮಲಗುವುದು ಬೇರಾವಕಾರಣದಿಂ ॥ ಪರ
ಮವೀರ್ಯವು ಪತನವಾಗುವ । ತೆರದೆಸ್ತ್ರೀವ್ಯಸನಾದಿ ಕುತ್ಸಿತ । ದುರಿತ
ಕಾರ್ಯಂಗಳನು ಮನದೊಳಗೆಂದಿಗುಂ ತರದೆ ॥ ೪೯ ॥

ಜಗದಿನಾರಿಯರೂಪಲಾವ । ಣ್ಯಗಳಕುರಿತತಿ ವರ್ಣಿಸುವಮೇ
ಣ್। ಮಿಗಿಲೆನಿಪವರಬ್ರಹ್ಮಚರ್ಯವಘಾತಿಸುತ್ತಿರ್ಪ ॥ ಬಗೆಬಗೆಯ
ಶೃಂಗಾರಗ್ರಂಥಾ । ದಿಗಳಪಠನೆಯ ತೆಜಿಸುತನಿಶಂ । ಝುಗೆಝುಗಿಪ
ನಾರಿಯರಪಾಪದೃಷ್ಟಿಯಿಂ ನೋಡೆ ॥ ೫೦ ॥

ಘೋರಪಾಪವದೆಂದುಮನದಿ ವಿ । ಚಾರದಿಂ ತಿಳಿಯುತ್ತಲವಿ
ರತ । ಬೇರೆಪುರುಷರ ರತಿವಿಲಾಸದವಿಷಯ ಯೋಚಿಸದೆ ॥ ಸಾರಮಾ
ದಾವೀರ್ಯವದುತಾಂ । ಜಾರಿಪೋಗಲು ಯಾವವಿಧದಿಂ । ಭೂರಿಹಿತ
ಕರ ಬ್ರಹ್ಮಚರ್ಯವ್ರತವುನಿಜವಾಗಿ ॥ ೫೧ ॥

ನಾಶವಾದಂತೆನುತೆ ತಿಳಿಯುತೆ । ಲೇಸಿನಿಂಘನ ಸಜ್ಜನೆರಸಹ ।
ವಾಸದೊಳು ಬೆರೆಯುತ್ತೆ ಪರನಾರಿಯರಸಂತತದಿ ॥ ಭಾಸುರದವಾ
ತೆಯೊಲು ಭಾವಿಸು । ತಾಸುರದಿದುಶ್ಚಟಗಳೆಲ್ಲವ । ನಾಶಗೊಳಿಸೇಕಾ
ಗ್ರಚಿತ್ತದಿ ಮೆರೆವಗುರುಕುಲದ ॥ ೫೨ ॥

ಎಸೆವನಾಸಕೆಬಂದುಹಿತದಿಂ । ದಸಮುವೇದಾಧ್ಯಯನಪರತರ । ಪಶುಪತಿಯ ವರಪೂಜೆಕರ್ಮಾದಿಗಳನೆಲ್ಲವನು ॥ ಸಸಿನೆಯಿಂದಂ ತಿಳಿದುಭಕ್ತಿಯೊ । ಳಸಮನಯನನ ಮಂತ್ರಪಠನೆಯ । ನೆಸಗುತವಿರತ ಪರಮಗುರುಸೇವೆಯನು ಮಾಡುತ್ತೆ ॥ ೫೩ ॥

ಸತ್ಯಶೌಚಾದಿಗಳ ಬಿಡದುರು । ನೃತ್ಯಕರಕಾಮಾದಿರಿಪುಗಳ। ಚಿತ್ತದಿಂದೋಡಿಸುತೆ ಸ್ರಕ್ಚಂದನಸುತಾಂಬೂಲ ॥ ಮತ್ತೆ ವರವನಿತಾದಿ ವಿಷಯಗ । ಳತ್ತಮನವೆಳಸದಲೆ ನಿರುತದೊ । ಳುತ್ತಮದ ಲೌಕಿಕ ಸುವೈದಿಕಶಾಸ್ತ್ರಗಳನಿರದೆ ॥ ೫೪ ॥

ಸ್ಥಿರಮನದೊಳಭ್ಯಾಸಗೈಯುತೆ । ನಿರುತಭಿಕ್ಷಾನ್ನವನುಮುಣ್ಣುತ । ಮೆರೆವಪರತರಜ್ಞಾನಸಂಪತ್ತಿಯ ಸುಲಾಭವನು ॥ ನೆರೆಪಡೆದು ಘನಶಾಂತಿಯಿಂದಂ । ಪರಮನೈಷ್ಠಿಕಬ್ರಹ್ಮಚರ್ಯಾದ । ವರವ್ರತವ ಪೋಷಿಸುತಮೆರೆವೀ ದೇಹವನು ಸತತಂ ॥ ೫೫ ॥

ಜನರಸೇವೆಯೆ ಹರನಸೇವೆಯ । ದೆನುವನಿಗಮೋಕ್ತಿಗಳ ವಾಕ್ಯಗ । ಳನುಸರಿಸಿತನುವದಕೆತವೆಘನ ಮೀಸಲಾಗಿರಿಸಿ ॥ ಅನವರತ ದೀನರಿಗೆ ಕರುಣೆಯೊ । ಳನುನಯದೆ ಕಲ್ಯಾಣವನುಗೈ । ಯ್ವನಘನೊಳು ತ್ರೈಕರಣಪೂರ್ವಕಮಾದ ಭಕ್ತಿಯನು ॥ ೫೬ ॥

ತಳೆದುಜನರೇಳ್ಗೆಯೊಳು ಘನತರ । ಬಲದೆ ಕಂಕಣಬದ್ಧನಾಗು । ತ್ತಿಳೆಯೊಳಗೆ ವರಸತ್ಯಮೇಣುರುತರದಹಿಂಸೆಗಳ ॥ ಅಲಘುತರಮಹಿಮೆಗಳನವಿರತ । ನೆಲೆಗೊಳಿಸಿ ವರಸತ್ಯಧರ್ಮಕೆ । ನಿಲದೆಹಾನಿಯದೊದಗೆತನುವನು ತೃಣಕೆಕಡೆಯಾಗಿ ॥ ೫೭ ॥

ನೋಡುತೀದೇಹವನು ಭರದಿಂ । ಗಾಢಪ್ರೇಮದೊಳರ್ಪಿಸುತಲೀ । ರೂಢಿಯೊಳು ಘನಪೂಜ್ಯತೆಯಪೊಂದುತ್ತ ಮೆರೆಯುವುದು ॥ ನಾಡೆಜನರಸುಸಂಘಟನೆಯನು । ಮಾಡಲುರೆಯತ್ನವನುಗೈಯುತೆ। ನಾಡಿನೊಳಗೆಡೆವಿಡದೆ ಪರರುದ್ಧಾರಕಾರ್ಯದೊಳು ॥ ೫೮ ॥

ತವೆಮುದದಿತೊಡಗುತ್ತಲಬಲರು । ಬವಣೆಯಿಂದಂ ಬಂದು ನೊರೆಪೊಗ । ಲವರತನುವಿತ್ತಾದೊಡಂ ರಕ್ಷಿಸುತಲನವರತ ॥ ಅವನಿಯೊಳುಪರಮೋಪಕಾರ । ತ್ವವನುಮೇಣುರು ವೀರಧೀರ । ತ್ವವನು ಪಡೆದತಿನಿರ್ಭಯದಿ ಘನಘೋರತರವೂದ ॥ ೫೯ ॥

ಕ್ಲೇಶಗಳಿಗೆದೆಗೊಟ್ಟು ಸತ್ಯದಿ । ದೇಶಸಂಚಾರವನುಗೈಯುತ । ಬೇಸರವಪೊಂದದಲೆ ಜನಸೇವೆಯೊಳುಪಗಲಿರುಳು ॥ ಭಾಸುರದ ತನುಮನವ ಸವೆಸುತಲೀ । ಶರೀರದಸಾರ್ಥಕವನತಿ । ಲೇಸಿನಿಂದಂ ಗೊಳಿಸಿ ಜಗದಿಕೃತಾರ್ಥತೆಯವಡೆದು ॥ ೬೦ ॥

ಜಸದಿರಾಜಿಪ ಜನ್ಮವೇಸಲೆ । ವಸುಧೆಯೊಳು ಘನಧನ್ಯಧನ್ಯವು । ಯೆಸೆಯುವೀತಿರೆಯೊಳಗೆಪರಿಕಿಸೆ ಪೂರ್ವಕಾಲದೊಳು ॥ ಮಿಸುಪ ಶುಕಭೀಷ್ಮಾಂಜನೇಯ ಸು । ಜಸವಡೆದ ಶ್ರೀಶಂಕರಾಚಾರ್ಯಸಮ ಯತಿಮಹವೀರಘನ ವೈರಾಗ್ಯದಿಂಮೆರೆದ ॥ ೬೧ ॥

ಚೆನ್ನಬಸವೇಶ್ವರರೆಮೊದಲಾ । ದುನ್ನತದ ವೀರರ್ಕಳವಿರತ । ಚೆನ್ನಿಸೆವ ಘನಬ್ರಹ್ಮಚರ್ಯವ್ರತವಕೈಕೊಂಡು ॥ ಸನ್ನುತದ ವಿಕ್ರಮಿಗಳೆನಿಸುತ । ನನ್ನಿಯಿಂಮಹಿಮೆಗಳಬೀರುತ । ಪನ್ನಗಾಧರನಂತೆ ಜಗದೊಳು ಮನ್ನಣೆಯವಡೆದು ॥ ೬೨ ॥

ಅನವರತಘನಕೀರ್ತಿಶಾಲಿಗ । ಳೆನಿಸಿಯಾಚಂದ್ರಾರ್ಕವಿಳೆಯೊಳ । ಗನುಸಯದೆಬೆಳಗುತ್ತಲಿರ್ಪರುಹಿತದಿ ಜಗವರಿಯೆ ॥ ವಿನುತಮಾದಿದರುರುಮಹತ್ವವ । ಮನನೊಲಿದು ವರಹೃದಯದೊಳಗಿ । ಟ್ಟನಿಶಬಿಡದಾಚರಿಸುತಿಹ ಪರದೊಳಗೆಸೌಖ್ಯವನು ॥ ೬೩ ॥

ನಿಲದೆಪಡೆದುರುಜನ್ಮಸಾರ್ಥಕ । ಗೊಳಿಸಿಕೊಂಡುರುಭೀಷ್ಮಶುಕರೊಲು । ವಿಳಸಿತದಜಸವಡೆದು ಬೆಳಗುವದದುವೆಪ್ರತಿಯೋರ್ವ ॥ ತೊಳಪಸದುಹೃದಯದಸುತರುಣರ । ದಲಘುತರಕರ್ತವ್ಯಮಾಗಿಹು । ದಿಳಿಯೊಳಿದರಮಹತ್ವವನುಬಣ್ಣಿಸಲಿಕಸದಳವು ॥೬೪॥

ಎಂದೊರೆಯಲಾಕ್ಷಣದಿ ತರುಣ । ವೃಂದವೆಲ್ಲವು ಪರಮಶ್ರೀಗ
ಳು । ಮಂದಹಾಸದೊಳೊರೆದ ಬೋಧಾಮೃತವನಾಲಿಸುತೆ ॥ ಅಂದು
ಹರುಷದೊಳುಬ್ಬಿತಿರೆಯೊಳು । ಮಿಂದುಧರನಂತೆಸೆವ ಕರುಣಾ ।
ಸಿಂಧುಚರಬಸವಾರ್ಯರಿಗೆ ಜಯಜಯವೆನುತ್ತಾಗಳ್ ॥ ೬೫ ॥

ಮುದದಿ ಜಯಘೋಷವನುಗೈಯುತ । ಸದಯಶ್ರೀಚರವರ
ರಿಗೊಂದಿಸೆ । ಸದುಹೃದಯನವತರುಣರಾಗಿರುತಿರ್ಪ ನಿಮಗೆಲ್ಲ ॥
ಬಿದುಧರನು ಸಂತತದಿಸೌಖ್ಯವ । ಮುದದೊಳೀಯಲೆನುತ್ತಲಾಶೀ ।
ರ್ವದಿಸಿ ತನ್ಮಯ ಮಠದೊಳಾನಂದದೊಳಗಿರುತಿರ್ದರ್ ॥ ೬೬ ॥

ಪರಮತಾರಾಗಣದ ಮಧ್ಯದಿ ಮೆರೆವಚಂದ್ರಮನಂತೆಮೇಣ ।
ಕ್ಷರಗಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲ ಪುರಾಣಮಧ್ಯದಿ । ಹರನಭಕ್ತರು
ಮುದದಿಕೇಳ್ವುದು ಹತ್ತನೆಯ ಸಂಧಿ ॥ ೬೭ ॥

ಗೌತಮಿ ವೃಷಧ್ವತಿ ವಿಧೂತಕಲಿವ್ರಾತೆ ಶಿವದೂತಿ ಗಣನಾಯಕಿಜಯಂತಿ ನಿಜ
ಶಾಂತೆ । ಭೂತಗಣಸನ್ನುತ ಪದಾಂಬುರುಹೆ ಕರ್ಬುರಿ ಸುಧರ್ಮಗತೆ ಸತ್ಯವರಚಂಡ
ಕರಮೂರ್ತಿ ॥ ಪ್ರೇತವನಚಾರಿಣಿ ದಿಗಂಬರೆ ನಿರಾಮಯೆ ಜಗದ್ಭರಿತೆ ಮಾತೃಕೆ
ಮತಿಪ್ರದೆ ಮಹಾದು । ಭೀತಿಹರೆ ಬಾಲೆ ವಿಧುಪೂಜಿತೆ ನಿರಂತರ ಮೃಡಾಣಿ ಸಲ
ಹೆನ್ನ ನೆಲೆಮಾತೆ ಮಹದೇವಿ ॥ ೬೮ ॥

ಸಂಧಿ ೧೦ ಕ್ಕಂ ಪಧ ೫೩೭ ಕ್ಕಂ ಮಂಗಲಂ
ಮಹಾ ಶ್ರೀ. ಶ್ರೀ.



॥ ಶ್ರೀ ಓಂಕಾರಾಯ ನಮಃ ॥

# ಹನ್ನೊಂದನೆಯ ಸಂಧಿ.



ಸೂಚನೆ ॥ ಮೆರೆವ ಕೊಡಚಿಗಿ ಗ್ರಾಮದೊಳು ಚರ ।
ವರನು ನೀರಿನ ಮಹಿಮೆದೋರುತೆ ।
ಸರುವಜನಗಳಿಗೊರೆದ ಮಾನವ ಧರ್ಮವನು ಮುದದಿಂ ॥

ಶ್ರೀಮದಗಣಿತಮಹಿಮ ನಿರುಪಮ । ನಾಮಶೀಮಾರಹಿತನಿ
ರವಯ । ಕಾಮಸುಖದುಃಖಾದಿ ವರ್ಜಿತನಿತ್ಯಸಂತೃಪ್ತ ॥ ವ್ಯೋಮ
ವ್ಯೋಮಾತೀತಶೃತಿಸುತ । ಧಾಮಮಂಗಲಲಿಂಗ ನಿಷ್ಕಲ । ರಾಮ
ಣೀಯಾಮಳಮಹಾ ಶಿವದೇವಪಾಲಿಪುದು ॥ ೧ ॥

ಪರಮಶ್ರಾವಣಮಾಸದೊಳುಘನ । ತರಮೆಸೆವಕೊಡಚಿಗೆಯ
ಭಕ್ತರು । ಪಿರಿದುರಾಜಿಪ ಶರಣಬಸವೇಶನಪುರಾಣವನು ॥ ಹರುಷ
ದಿಂದಿಟ್ಟದನು ಮುಗಿಸುವ । ವರಗಣಾರಾಧನೆಗೆಯುರುತರ । ಮೆರೆವ
ಚರಬಸವಾರ್ಯರನು ಬರಮಾಡಿಕೊಂಡಿರಲು ॥ ೨ ॥

ಆಗಪೌರಾಣದಮಹೋತ್ಸವ । ಕಾಗಿಜನರತಿನೆರೆಯೆ ಮುದ
ದಿಂ । ದಾಗಳಾಗ್ರಾಮದೊಳುನೀರಿನ ಕೊರತೆಘನಮಿರಲು॥ಬೇಗದಿಂ
ಮಿಗೆ ಕೂಡಿಭಕ್ತರು । ಹೇಗೆಗೈಯುವುದೆನುತೆ ವ್ಯಸನದಿ । ಶ್ರೀಗುರು
ವಿನುರುಧ್ಯಾನವೆಸಗುತ ತಮ್ಮೊಳಗೆ ತಾವೆ ॥ ೩ ॥

ಪಿರಿದುಯೋಚಿಸುತಾಗ ಬಸವಾ । ರ್ಯರಿಗೆ ಜವದಿಂದರುಪಲ
ವರಂ । ದರರೆ! ನೀವಿದಕಾಗಿಯೀಪರಿ ಚಿಂತಿಸುವುದೇಕೆ ॥ ಹರಶರಣ
ಶ್ರೀಶರಣಬಸವನು । ಭರದಿತನ್ನಯ ಕಾರ್ಯವನುತಾ । ನಿರದೆನೆರ
ವೇರಿಸಿಕೊಳುವ ನಿಜವೆನುತೆಪೇಳುತ್ತೆ ॥ ೪ ॥

ನಿಮ್ಮಗ್ರಾಮದಬಾವಿಗೀಗಳೆ । ಯೊಮ್ಮನದಿಪೋಗೋಣನಡ
ಯೆಂ । ದುಮ್ಮಸದೊಳುಸುರುತ್ತಭಕ್ತರಗೂಡಿಭರದಿಂದೆ ॥ ಸಮ್ಮು
ದದೊಳಾಗಮಿಸಿಭಕ್ತರ । ಸಮ್ಮುಖದಿನಿಂದಾಗನೀವುಗ । ಳಿಮ್ಮವ
ಚನವನೆಮ್ಮಬಾವಿಯಪೂಜೆಯಂಗೈದು ॥ ೫ ॥

ಸೊಗಸಿನಿಂಮಿಗೆಕಾಯಿಕರ್ಪೂ । ರಗಳನರ್ಪಿಸಿರೆಂದುಪೇಳಲು।
ವೊಗುಮಿಗೆಯಭಕ್ತಿಯೊಳು ಜನಗಳುಕೇಳುತಾಗಿರದೆ ॥ ಅಗಹರನ
ಸಮರೂಪರೊರೆದೊಲು । ಮಿಗಿಲೆನಿಪಪೂಜೆಯನುಗೈದವ । ರುಗಳು
ಸರ್ವರುತಿರುಗಿಬಂದರು ತಮ್ಮಗೃಹಗಳಿಗೆ ॥ ೬ ॥

ಮರುದಿನವೆ ಬೆಳಗಾಗುವುದರೊಳೆ । ಪಿರಿದುಬಾವಿಯುತುಂಬಿ
ತುಳುಕು । ತ್ತಿರಲು ಪೌರಾಣದಸಮಾಪ್ತಿಯಕಾರ್ಯವದುಸುಖದಿ॥
ಜರುಗಿದಾನಂತರದಿನೋಡಲು । ಭರದಿಹಿಂಗುತಪೋಗಿಮೊದಲಿನ ।
ತೆರದಿ ನೀರಿರ್ಪುದನುಕಂಡುರುತರದವಿಸ್ಮಯವ ॥ ೭ ॥

ಜನಗಳೆಲ್ಲರುಪೊಂದಿಜಗದೊಳ । ಗನುಪಮಿತಪೂಜ್ಯತೆಯವ
ಡೆಯುತೆ । ಮಿನುಪಶ್ರೀಚರಬಸವತಾತನ ಮಹಿಮವಿದುಮೆನುತೆ ॥
ಅನುನಯದಿಕೊಂಡಾಡಿಜಯಜಯ । ವೆನುತೆಜಯಘೋಷವನುಗೈ
ಯುತ । ಘನಹರುಷದಿಂದವರ ಪದಪಂಕಜಕೆ ವಂದಿಸುತೆ ॥ ೮ ॥

ಮಾರಹರರೂಪಿಗಳೆತಮ್ಮಯ । ಸಾರಬೋಧಾಮೃತವು ಭುವಿ
ಯೊಳು । ಭೂರಿಖ್ಯಾತಿಯವಡೆದುದೆನುತಲಿ ಸರ್ವಜನರುಗಳು ॥
ಮೀರಿಕೊಂಡಾಡುತ್ತಲಿರ್ಪರು । ಚಾರುತಮ್ಮಯವದನದಿಂಮುದ ।
ವೇರಿ ಮಾನವಧರ್ಮವನು ನೆರೆಕೇಳಬೇಕೆಂಬ ॥ ೯ ॥

ಪರಮಬಯಕೆಯುಮನದಿ ಮೊಳೆದೋ । ರಿರುವಕತದಿಂದೆಮ್ಮ
ಮೇಲುರು । ತರದಕರುಣವನಿಡುತಲಪ್ಪಣೆಕೊಡಿಸಬೇಕೆಂದು ॥ ಸರಸ
ವಚನದಿಕೇಳಿಕೊಳಲಾ । ಚರವರನು ನಿಮ್ಮಿಷ್ಟದೊಲುನಾ । ನೊರೆವೆ
ಸರ್ವರುಲಾಲಿಸುವುದೆಂದುಸುರಲನುವಾದಂ ॥ ೧೦ ॥

ಈಶನಿಂ ನಿರ್ಮಿತವದಾಗಿಹ । ಭಾಸುರಸುಸೃಷ್ಟಿಯೊಳು ನೋಡೆ ವಿ । ಶೇಷವಿಧಮಾಗಿರ್ಪ ನಿಖಿಲಪ್ರಾಣಿಕೋಟಿಗಳೋಳ್ ॥ ಈಶನಂ ಸಹತಿಳಿದು ಜಗದಿ ದಿ । ನೇಶನೊಲು ಮೆರೆದೆರಡನೆಯ ಪರ । ಮೇಶನೆನಿಸುವ ಪರಮಜ್ಞಾನಾಧಿಕ್ಯದಿಂ ಕೂಡಿ ॥ ೧೧ ॥

ಮೆರೆವ ಮಾನವಜನ್ಮವೇ ಬಹು । ಸರುವಶ್ರೇಷ್ಠವಡೆನುತೆ ಶೃತಿತತಿ । ನಿರುತಘನತರ ಘೋಷಿಸುತ್ತಿರುತಿರ್ಪುದಲ್ಲದೆಯುಂ ॥ ಧರಣಿಯೊಳಗೆ ಸೆವೆಲ್ಲಧರ್ಮಗ । ಳುರುತರದೊಳನುಮೋದಿಸುತಲಿರು । ತಿರುವಕತದಿಂದಿದುವೆ ಸರ್ವೋತ್ಕೃಷ್ಟಮಿದು ಸಿದ್ಧಂ ॥ ೧೨ ॥

ಈತೆರದ ಪರಮೋಚ್ಚಜನ್ಮದಿ । ಭೂತನಾಥನ ಕರುಣದಿಂದೀ । ಭೂತಳದೊಳವತರಿಸುತೀ ಜನ್ಮದ ಸುಸಾರ್ಥಕವ ॥ ಸಾತಿಶಯದಿಂ ಪಡಿಸಿಕೊಳ್ಳಲು । ಪೂತಜ್ಞಾನಾಧಿಕ್ಯದಿಂ ಮಿಗೆ । ವೋತುರಾಜಿಸುತಿರ್ಪ ಪ್ರತಿಮಾನವನ ಕರ್ತವ್ಯಂ ॥ ೧೩ ॥

ಪ್ರತಿನರನು ತನ್ನಯ ಸುಜನ್ಮವ । ಕ್ಷಿತಿಯೊಳಗೆ ಸಲೆ ಸಾರ್ಥಕವನತಿ । ಹಿತದಿ ಭರದೊಳು ಗೊಳಿಸಿಕೊಳಬೇಕಾದೊಡೀ ಭುವಿಯೊಳ್ ॥ ವಿತತಮಾನವಧರ್ಮವಂ ವರ । ಮತಿಯೊಳರಿದದರೊಲು ಸುದೃಢದಿಂ । ಸತತಮಾಚರಿಸುವುದೆ ಘನಸಿದ್ಧಾಂತಮಾಗಿಹುದು ॥ ೧೪ ॥

ಮೆರೆವ ತ್ರೈಲೋಕಂಗಳನು ಮಿಗೆ । ಹರುಷದಿಂ ಸೃಷ್ಟಿಸುವ ಮಹೇಶಾ । ಪರಮತ್ರಿಭುವನಗಳನು ಪಾವನಮಾಡುವಾ ನಿರಘ ॥ ನಿರುಪಮಿತಪರಮೇಶನೋರ್ವನೆ । ಯಿರುವನಿದು ತಿರೆಯೊಳಗೆ ರಾಜಿಪ । ಸರುವಶಾಸ್ತ್ರಗಳಿಂದ ಶತಸಿದ್ಧಾಂತಮಾಗಿಹುದು ॥ ೧೫ ॥

ಧಾರಿಣಿಯೊಳೀಶ್ವರನು ನಮ್ಮಯ । ಚಾರುಲೋಚನಗಳಿಗದೆಂದುಂ । ತೋರನದರಿಂದವನು ಮಿಲ್ಲವೆನುತ್ತೆ ನುಡಿಯುವುದು ॥ ಘೋರದುರಿತವದಾಗಿಹುದು ಸಲೆ । ಸಾರತಾರಾಗಣವುಪಗಲೊಳು । ತೋರವವು ಮೆಣೆಮ್ಮ ಮುಖವೇ ಎಮಗೆ ತೋರದದು ॥ ೧೬ ॥

ಪೂತಮಾತಾಪಿತರಮೂಲಕ । ಮೋತುಸಮ್ಮುತ್ಪತ್ತಿಯಾಗಿಹ। ರೀತಿಯನುನಾವುಗಳುಕಾಣೆವು ಸತ್ಯವಿಷಯವನುಂ ॥ ಖ್ಯಾತಕಾರ್ಯದ ಮೇಲಿನಿಂದೀ । ಭೂತಳದೊಳನುಮಾನವನು ನಾವ್। ಸಾತಿಶಯದಿಂ ದಿರದೆಮಾಡಿಯೆ ಮಾಡಬೇಕೆನುತೆ ॥ ೧೭ ॥

ದೊರೆವಡೆದಘನ ನ್ಯಾಯಶಾಸ್ತ್ರವು । ನಿರುತಘೋಷಿಸುತಿರ್ಪು ದದುಮೀ ।। ಧರೆಯೊಳಗೆ ಕತೃವಿನವಿನಹಾಕಾರ್ಯಮುದುಮೆಂದುಂ ॥ ಪರಿಕಿಸಲು ಸಂಭವಿಪುದಿಲ್ಲವು । ಪರಮಕಾರ್ಯವದಾಪಘಟವುಂ । ಮೆ ರೆವಕರ್ತಕುಲಾಲನಿವರೀರ್ವರುಗಳಿರದನಿಶಂ ॥ ೧೮ ॥

ಎಂತುಕಾಂಬುತಲಿರ್ಪರದರೊಲ।ನಂತಮಾದೀವಿಶ್ವಕಂಡಡು । ಸಂತತದೊಳಾಕರ್ತಕಾಣಿಸದಿರ್ಪುದಿದು ನಿಜವು ॥ ಭ್ರಾಂತಿಯಿಲ್ಲದೆ ಘಟದಮೇಲೆಸ । ಮುಂತುಮೆರೆವ ಕುಲಾಲನೊಳಗೆನಿ । ತಾಂತನಸ್ತಿ ತ್ವವದು ಸಿದ್ಧವದಾದಪರಿಯಂತೆ ॥ ೧೯ ॥

ಪಿರಿದುಮೆರೆಯುತ ಕಾಂಬುತಿರ್ಪೀ । ಪರಮವಿಶ್ವದಮೇಲಿನಿಂ ದೀ । ಶ್ವರನ ಶ್ರೀಷ್ಠ್ಯಸ್ತಿತ್ವವದು ಸಲೆಸಿದ್ಧಮಾಗುವುದು ॥ ಧರೆಯೊಳ ಖಿಲಜನಂಗಳಿದನುರು । ತರದೊಳರಿದೀಶ್ವರನುಮಿರ್ಪುದು । ಸರುವ ಸಿದ್ಧವದಾದುದೆನುತಲಿ ತಿಳಿದು ಪ್ರತಿಯೋರ್ವ ॥ ೨೦ ॥

ನರನುದೇವರುಮಿಲ್ಲವೆಂಬುವ । ದುರಿತಕರವಚನವನುತಮ್ಮ ಯ । ವರಜಿನುಮದೊಳಗೆಂದು ಮುಚ್ಚರಿಸದಲೆ ಸಂತಸದಿ ॥ ಪರಮ ಸರ್ವೇಶ್ವರನೊಳತಿಶಯ । ನಿರುತಭಕ್ತಿಯನಿಟ್ಟು ತಿರೆಯೊಳು । ಪರಮ ತರದಾಸ್ತಿಕ್ಯಮತಿಯಿಂ ವರ್ತಿಸುವುದದುವೆ ॥ ೨೧ ॥

ಪರಮಮಾನವಧರ್ಮವೆಂಬುವ । ಮೆರೆವಕಟ್ಟಡಕಿರದೆಬಂಧು ರ । ತರವದಾದಡಿಗಲ್ಲಿನಂತಿರುತಿರ್ಪುದಿದು ದಿಟವು ॥ ದುರಿತಕರನಾಸ್ತಿ ಕವನುಡಿಯುವ । ನರಗೆ ನಿಜಸುಖದೊರೆಯದೆಂದುಂ । ನಿರುತಘೋ ರವದಾದ ನರಕದಿಬೀಳ್ವ ಕೊಳಲುವನು ॥ ೨೨ ॥

ಎಸೆಯುತಿರ್ಪೀಶ್ವರನ ಜನಗಳು । ರಸೆಯೊಳಗೆಜಗದೀಶ ಶಂಕರ । ಪಶುಪತಿಪರಬ್ರಹ್ಮವಿಷ್ಣು ಮಹೇಶರಘುರಾಮ ॥ ಬಸವವಿಠ್ಠಲ ವೀರಭೀರಂ । ಶಶಿಧರಂ ಗಾಡ್ ಅಲ್ಲಮೊದಲಾ । ದೆಸೆವನಾಮಂಗಳ ಲಿಕರೆಯುತಲಿರ್ಪುದಿದು ಖ್ಯಾತಂ ॥ ೨೩ ॥

ದೇವರಂ ಜಗದೊಳಗೆಜನಗಳ । ದಾವನಾಮದಿಕರೆದೊಡಂ ತವೆ । ಭಾವಿಸಲು ನಾಮಗಳವೆಲ್ಲವದೊಂದೆಯಾಗಿಹವು ॥ ಸಾವಧಾನದಿ ಸಲೆವಿಚಾರಿಸ । ಲೀವಸುಧೆಯೊಳು ತಂಡುಲವನೀರ । ದಾವಗಂ ರೈಸಕ್ಕಿಚಾವಲ್ ಬಿಯ್ಯಮೆಂದೆನುತೆ ॥ ೨೪ ॥

ಕರೆಯುತಿರ್ಪುದು ಮಿಗೆಪ್ರಸಿದ್ಧವ । ದಿರುವಕತದಿಂದಾವವಚನದಿ । ಕರೆದೊಡಾವರವಸ್ತುಮಾತ್ರವದೊಂದೆಯಿರ್ಪಂತೆ ॥ ಪರಮ ಜಗದೀಶ್ವರನಿಗಗಣಿತ । ಮೆರೆವನಾಮಗಳಿರುವ ಕತದಿಂ । ಪಿರಿದುಭಕ್ತಿಯೊಳಾವನಾಮದಿ ಕರೆದೊಡಂ ನೋಡೆ ॥ ೨೫ ॥

ಒಂದೆಯಾಗಿಹುದಿದರೊಳಗೆನಸು । ಸಂದೆಗವ್ವದೇನಿಲ್ಲ ಭುವಿಯೊಳು । ಮಂದಮತಿಯುತ ಜನಗಳಿದರುರುತತ್ವತಿಳಿಯದಲೆ॥ ಸಂದಜಗದೀಶ್ವರನನಾಮದೊ । ಳೊಂದುಘನಮತ್ತೊಂದು ಮಿಗೆಕೀಳೆಂದುವಿಪರೀತಾರ್ಥಗಳನತಿ ಕಲ್ಪಿಸಿಕೊಳುತ್ತೆ ॥ ೨೬ ॥

ಎನ್ನದೇವರುಶ್ರೇಷ್ಠಮೆನುತಲಿ । ನಿನ್ನದೇವರು ಕೀಳುಮೆನುತಲಿ । ವುನ್ನತದಿಕಾದಾಡುತಿರ್ಪರು ತಮ್ಮತಮ್ಮೊಳಗೆ ॥ ಚೆನ್ನೆಸೆಯುತಿಹದೇವರೊಳಗುಂ । ಭಿನ್ನತೆಯತೋರುತ್ತಲೀಪರಿ । ಬನ್ನಬಡುತಿಹನರರಿಗತಿಧಿಃಕಾರಧಿಃಕಾರಂ ॥ ೨೭ ॥

ದೇವರಿಗೆಬಡಿದಾಡುತಿರ್ಪುರು । ಗಾವಿಲರನೇನೆಂಬೆ ಪಾವನ । ಭಾವದೊಳುಸಲೆಸರ್ವಶಕ್ತನುಮಾದ ದೇವನೊಲು ॥ ಭಾವಿಸುತಲತಿಭಕ್ತಿಯಿಂ ತಾ । ನಾವನಾಮದಿ ಕರೆದೊಡಂಮಹ । ದೇವನಾನಾಮದೊಳೆಸಲೆ ಪ್ರತ್ಯಕ್ಷನಾಗಿರದೆ ॥ ೨೮ ॥

ತನ್ನಮನದಿಷ್ಟಾರ್ಥವನುಮಿಗೆ । ನನ್ನಿಯಿಂದೀಯುವನುನಿಜ ಮಿದು । ರನ್ನವಸಿರಲಿಪೂರ್ವದೊಳುಮೀತೆರದಿ ನಡೆದಿರ್ಪ ॥ ಸನ್ನುತಿ ತಿಹಾಸಂಗಳೆನಿತೋ । ಚೆನ್ನಸೆಯುತಿರುತಿರ್ಪವವಿರತ । ಮಿನ್ನು ದೇವ ರೊಳಾರುಮೆಂದುಂ ಭಿನ್ನಭೇದಗಳ ॥ ೨೯ ॥

ಎಣಿಸದಲೆಲೋಕದೊಳು ಜನಗಳು । ವಿನುತಭಕ್ತಿಯೊಳಾವನಾ ಮ್ಮದೊ । ಅನುಪಮಿತಜಗದೀಶನಂ ಸಲೆಕರೆದಡದುಮೊಂದೇ ॥ ಎನು ವಭಾವನೆತಳೆದುಸರ್ವರು । ಸನುಮತದಿತವೆನಡೆದುಕೊಳುವುದೆ । ಮಿ ನುಪಮಾನವಧರ್ಮಕುರುಭೂಷಣವದೆನಿಸುವುದು ॥ ೩೦ ॥

ಧರೆಯೊಳೆನಿತೋನಾಮದಿಂದಲಿ । ನೆರೆಪ್ರಸಿದ್ಧಗಳಾದದೇವರು । ಮಿರುವರದರೊಳಗಾವನಾಮದ ದೇವರೊಂದರಲಿ ॥ ಪಿರಿದುಭಕ್ತಿಯ ತಳೆದುಮಂತ್ಯದ । ವರೆಗುಮಾನಾಮವನೆ ಪಠಿಸುತ । ಪರಮಪದವಿ ಯಪೊಂದ್ಲುವುದು ಮಾನವನಕರ್ತವ್ಯಂ ॥ ೩೧ ॥

ಸರುವಶಕ್ತನುಮಾದಜಗದೀ । ಶ್ವರನುಲೀಲಾಮಾತ್ರದಿಂದಲಿ । ಧರಣಿಯೊಳಗೆಮ್ಮೆಲ್ಲರನುನೆರೆ ಸೃಷ್ಟಿಸಿರುತಿರ್ಪಂ ॥ ತಿರೆಯೊಳೆನಿತು ಜನಂಗಳಿರ್ಪರೊ । ಪರಿಕಿಸಲ್ಕಾಜನಗಳೆಲ್ಲರಿ । ಗಿರದೆಯಾಪರಮೇಶ್ವ ರನೆಪಿತನಾಗಿ ರಾಜಿಪನು ॥ ೩೨ ॥

ನಾವುಸರ್ವರುಪಿತನುಮಾದಾ । ಭಾವಜಾರಿಯ ಪರಮಕೃಪೆ ಯಿಂ । ದೀವಸುಧೆಯೊಳುಜನಿಸಿರಾಜಿಸುತಿರ್ಪ ಕತದಿಂದೆ ॥ ಭಾವಿಸ ಲುಸುಸಹೋದರರುನಿಜ । ಮೋವಿನಮ್ಮೆಲ್ಲರನುಮಾಜಗ । ದೇವ ನ್ನೊಂದೇವಿಧದಿಕಾಂಬನು ಬೇಧಮಿಲ್ಲದಲೆ ॥ ೩೩ ॥

ಪಿತಗೆನಾಲ್ವರುಸುತರುಮಿರಲಾ । ಸುತರೊಳಗೆಕಾದಾಡಿಯೋ ರ್ವನಿ । ಗತಿಶ್ರಮವನೆಸಗಿದೊಡೆ ಪಿತನದಕೇಳಿತತ್‌ಕ್ಷಣದಿ ॥ ಖತಿಯ ಗೊಳ್ಳುವತೆರದೊಳಾಪಶು । ಪತಿಯು ಪರಮಸಹೋದರರುಮಾ । ಗತಿ ಶಯದಿಮೆರೆವೆಮ್ಮಗಳೊಳಾರಾದರೋರ್ವನನು ॥ ೩೪ ॥

ಪಿರಿದುಪೀಡಿಸಲಾಗಳೆಮ್ಮೆ। ಲ್ಲರಿಗೆಪಿತನಾಗೆಸೆವ ಜಗದೀ। ಶ್ವರ ಸುಮೂಕ್ಷಣಕೋಪಮಂ ತಳೆಯುತ್ತಪೀಡಿಸಿದ ॥ ನರಗೆಯೋಗ್ಯವ ದಾದಶಿಕ್ಷೆಯ । ನಿರದೆವಿಧಿಸುವನಿದುಪ್ರಸಿದ್ಧವು । ಧರೆಯೊಳಿದುಪ್ರತ್ಯ ಕ್ಷಕಾಣಿಸದಿರ್ದೊಡಂ ನೋಡೆ ॥ ೩೫ ॥

ಆವವಿಧದೊಳಗಾದಡಂ ಮಹ । ದೇವಶಿಕ್ಷೆಯನೀವೆಯೀವ ನು । ಯೀವಸುಧೆಯೊಳುಗೀಕ್ಷಿಸಲುಮೀಪರಿಯ ವಿಷಯಗಳಿಂ ॥ ಶೀ ವಿರಾಜಿಪುದಾಹರಣೆಗಳ । ಪಾವವಿಧದಿಂ ಕಡಮೆಯಿಲ್ಲವು । ವೋವಿ ತಿಳಿದಿದನಿರದೆಜಗದೊಳು ಮೆರೆವನಾವೆಲ್ಲ ॥ ೩೬ ॥

ಪರಮಜಗದೀಶ್ವರನಕರುಣವ । ನೆರೆಪಡೆದುಸುಖಮಾಗಿಜೀವಿ ಸಿ । ಪರಮಪದವಿಯಪಡೆಯಬೇಕಾದಡೆ ಮಹಾದಯದಿಂ ॥ ತಿರೆ ಯೊಳಿರುತಿಹ ಜನಗಳೆಲ್ಲರ । ವರಸಹೋದರರೆಂದುಭಾವಿಸಿ । ನಿರುತ ಮೂರಿಗುನಸುಶ್ರಮವಕೊಡದೊಲು ಸುನೋದದೊಳು ॥ ೩೭ ॥

ಚರಿಸುತಿರಬೇಕಿದರಪರಿಯೊಳು । ನೆರೆಚರಿಸದಿರುತಿರ್ಪನರನೊ ಳು । ಪರಮತರಮನುಜತ್ವವಣುಮಾತ್ರವದುಮಿಲ್ಲದಲೆ ॥ ಪಿರಿದುದೈ ತ್ಯತ್ವವನುಪೊಂದೀ । ಧರೆಯೊಳಗೆನಸುಸೌಖ್ಯಮಿಲ್ಲದೆ । ಪರಮಜಗ ದೀಶ್ವರನಕೋಪಕೆ ಭಾಗಿಯಾಗುವನು ॥ ೩೮ ॥

ಪಶುಪತಿಯಸೃಷ್ಟಿಯೊಳುಸರ್ವರು । ನಸುಕಡಮೆಯಿಲ್ಲದೆ ಸ ಮಾನರು । ಮಿಸುಪನಮ್ಮಸಹೋದರರೊಳಾರಾದರವನೋರ್ವಂ ॥ ವಿಷಮಮತಿಯಿಂ ಚರಿಸುತೀವರ । ರಸೆಯೊಳಗೆಓನತ್ವಪೊಂದ । ಲ್ಕಸಹನದಿಮಿಗೆ ಸಂಕುಚಿತದೃಷ್ಟಿಯೊಳುನೋಡದಲೆ ॥ ೩೯ ॥

ವಿಶವಿಶಾಲದೃಷ್ಟಿಯಿಂದವ । ನಿರುವಸ್ಥಿತಿಯಂ ತಿಳಿದುಮ ನದೊಳು । ಮುರುಗಿಯುನ್ನತಸ್ಥಿತಿಗೆ ತರುವಸಹಾಸವಂಗೈವ ॥ ನರನೆ ಸರ್ವೋತ್ತಮನುಮಿನ್ನುಂ । ನೆರೆರಸಾತಲಕಿರದೆದೂಡುವ । ನರನೆ ಸಲೆ ಪ್ರತ್ಯಕ್ಷ ರಾಕ್ಷಸಿಯೆನಿಸಿಕೊಳ್ಳುವನು ॥ ೪೦ ॥

ಪತಿತರನುಪಾವನನವಮಾಡುವ । ಹಿತಕರದಗುಣವದುವೆ ಜಗ
ದೊಳು । ವಿತತಮಾನವಧರ್ಮದೊರೆಗಲ್ಲಾಗಿ ರಾಜಿಪುದು ॥ ಪ್ರತಿನ
ಳನ್ನುಮೀತೆರದಿನೆಡೆದಡೆ । ಕ್ಷಿತಿಯೆಸ್ವರ್ಗವದಾಗಿ ಸಂತತ । ಮತಿಶಯ
ದಿಬೆಳಗುವುದರೊಳು ಸಂದೆಗವದೇನಿಲ್ಲಂ ॥ ೪೧ ॥

ಈತೆರದಿನಾವುಗಳುಪ್ರೀತಿಯೊ । ಳೋತುಸುಸಹೋದರತೆಯಿಂ
ದಲಿ । ಭೂತಳದಿವಾಸಿಸುವ ನಮ್ಮೆಲ್ಲರುಗಳಲಿಮೆರೆವ ॥ ಆತುಮೋ
ದ್ಧಾರಾರ್ಥವಾಗಿಯು । ಸಾತಿಶಯದಿಂದೈಕ್ಯಮತ್ಯವ । ನೋತುಮಿಗೆ
ನೆಲೆಗೊಳಿಸಲೋಸುಗವಾಗಿಯುಂ ಸತತ ॥ ೪೨ ॥

ಶಿವಕರದಘನವಿಶ್ವಬಂಧು । ತ್ವವನುಪ್ರಸರಿಸಲೋಸುಗಂತವೆ।
ಧವಳಕೀರ್ತಿಯ ಜ್ಞಾನಯುಕ್ತಮಹಾವಿಭೂತಿಗಳಿಂ ॥ ಭುವನದೊ
ಳುನಿರ್ಣಯವಗೊಳಿಸಿದ । ಪ್ರವಿಮಳದಭಿಪ್ರಾಯಗಳೆ ಬಹು । ತವ
ಕದಿಂ ಮತಮೆಂದು ವ್ಯವಹಾರದೊಳು ಬಂದಿಹವು ॥ ೪೩ ॥

ಧರೆಯೊಳಗೆಸಂಸ್ಥಾಪಿಸಿರುತಿಹ । ವರಮತಾಚಾರ್ಯರುಗಳತಿಹಿ
ತ । ಕರದಬೋಧನದೊಳಗೆಯಮುಗುರುಭಿನ್ನತೋರಿದಡಂ ॥ ನೆರೆವಿ
ಚಾರಿಸಿನೋಡಲವರುಗ । ಳುರುತರದ ಬೋಧಾಮೃತದಘನ । ತರದ
ಸಾರವದೊಂದೆವಿಧವಾಗಿಹುದು ವಿಖ್ಯಾತಂ ॥ ೪೪ ॥

ಪೂತಮತಗಳಸ್ಥಾಪಿಸಿದ ಸುವಿ। ಭೂತಿಗಳುಮೀಗೊಂದುಸಮ
ಯದಿ । ಭೂತಳದಿಜನ್ಮಿಸಿದಡವರುಗಳೆಲ್ಲರಿರದೊಂದೇ ॥ ನೀತಿಯು
ಕ್ತಸುತತ್ವಮಾರ್ಗವ । ನೋತುಬೋಧಿಸುತಿರ್ದರಿವರೊಳು । ಸಾತಿಶ
ಯದೋಕ್ತಿಗಳುಮೇನಿಲ್ಲಾರಯಲು ಜಗದಿ ॥ ೪೫ ॥

ವರವಿಭೂತಿಗಳೆಸೆದಕಾಲದ। ಪರಿತಿತಿಯವಾಚ್ಯಾರ್ಥವನುಸ್ವೀ
ಕರಿಸಿ ಲಕ್ಷಾರ್ಥವನು ದೂರೀಕರಿಪಕತದಿಂದೆ ॥ ಧರೆಯೊಳುರುತರ
ಮೆರೆವ ಮತಗಳೊ । ಳಿರದೆಭಿನ್ನವು ತೋರುವುದುಮೀ । ತೆರದಿನೋ
ಡುವುದಿದುವೆ ಪಿರಿದಪರಾಧವಾಗಿಹುದು ॥ ೪೬ ॥

ರಸೆಯೊಳಮರರುಮಾಗಿಸಂತತ । ಮಿಸುಪಸರ್ವವಿಭೂತಿಗಳು ಮೀ । ವಸುಮತಿಯಮಾನವರ ಸಲೆಸನ್ಮಾರ್ಗರನ್ನಾಗಿ ॥ ಎಸಗುವ ಸುಕೃತದಿಂದೆಮಿಗೆಮನ । ಮೊಸೆದುಮೊಂದೇ ಧ್ಯೇಯಮಂತಳೆ । ದಸ ಮಬೋಧಾಮೃತದಿತವೆಯುದ್ಧಾರವೆಸಗಿಹರು ॥ ೪೭ ॥

ಧರೆಯೊಳೆನಿತು ಮತಂಗಳಿರ್ಪವೊ । ಪರಿಕಿಸಲ್ಕಾಮತಮ ತಾಂತರ । ದುರುರಹಸ್ಯವದೆಲ್ಲಮೊಂದೇಲಾಗಿತೋರುವುದು ॥ ಪರಮ ವೈಷ್ಣವಶೈವಮೇಣ್ಪಾರ । ತರಸನಾತನಿಹಿಂದುಜೈನಸು । ಮೆರೆವ ಬೌದ್ಧಮಪಮ್ಮದೀಯ ಕ್ರೈಸ್ತಮೊದಲಾದ ॥ ೪೮ ॥

ಮತಮತಾಂತರದವರುಮೀವರ । ಕ್ಷಿತಿಯೊಳೊಂದೆಸಮಾನ ಮಾಗಿಹ । ವಿತತಮಾನವಧರ್ಮಮಂ ಬಿಡದನುಸರಿಸಿನಡೆವರ್ ॥ ಅತುಳಮಾದಾದಯವದಿಲ್ಲದ । ಮತವುಭುವನದೊಳೆಲ್ಲಿಯಿಲ್ಲವು । ಪ್ರತಿಮತಕೆ ದಯವದುವೆಪ್ರಾಣಸ್ವರೂಪಮಾಗಿಹುದು ॥ ೪೯ ॥

ಪರಮಬಸವನು ದಯವದಿಲ್ಲದ । ಧರುಮನಾವುದುಮೆಂದು ಪೇಳಿದ । ಸರಸವಚನವೆಯಿದಕೆ ಪಿರಿದುಪ್ರಮಾಣಮಾಗಿಹುದು ॥ ಧರೆಯೊಳಗೆಕೆಲಜನರುಮಿದರುರು । ತರದತತ್ವವತಿಳಿಯದಲೆಬಹು । ತೆರದಿವಿಪರೀತಾರ್ಥಗಳಮಿಗೆ ಕಲ್ಪಿಸಿಕೊಳುತ್ತೆ ॥ ೫೦ ॥

ಮತಗಳೊಳುನೀಚೋಚ್ಚಭಾವವ । ನತಿಶಯದಿತಳೆಯುತ್ತಲೆ ಮ್ಮಯ । ಮತಮದುವೆಘನಶ್ರೇಷ್ಠನಿಮ್ಮಯ ಮತವುಕೀಳೆಂದು ॥ ಅತಿಶಯದಿನಿಂದಿಸುತಬಹುಪರಿ । ಮತಿಯದಿಲ್ಲದೆ ತಮ್ಮತಮ್ಮೊಳೆ । ಸತತಸಲೆಬಡಿದಾಡುತಿಹಗಾಂಪರನದೇನೆಂಬೆ ॥ ೫೧ ॥

ತಿರೆಯೊಳೀಪರಿಯೆಸಗದನಿಶಂ । ಸರುವಮತದವರೆಲ್ಲಮಿಗೆದೃ ಢ । ತರದಪ್ರೇಮದಿ ತಮ್ಮತಮ್ಮಯಮತದ ಪರಿಯಂತೆ ॥ ಪರಮವಿ ಶ್ವಾಸದೊಳು ನಡೆದಡೆ । ಹರನ್ನುತಮ್ಮಯಮತದೊಳೇ ಘನ । ಕರುಣ ದಿಂ ನಿಜರೂಪುದೋರುತೆ ನಿಜಪದವನೀವಂ ॥ ೫೨ ॥

ಕೆಲಜನರುಪರಮತದಮೋಹದ । ಸೆಳವಿನಲಿಸಿಲ್ಕುತ್ತೆ ತಮ್ಮ ಯ । ಶೊಳಪಮತಮಂತ್ಯಜಿಸಿ ಮುದದಿಮತಾಂತರವಪೊಂದಿ॥ ನಿಲ ದೆವುಭಯಭ್ರಷ್ಟರಾಗು । ತ್ತಲಘುತೊಳಲುತಲಿರ್ಪುದನುನಾ । ವಿಳ ಯೊಳೀಕ್ಷಿಸುತಿರ್ಪೆವಿದುಕಡು ಹೇಯವರ್ತನವು ॥ ೫೪ ॥

ತನ್ನಧರ್ಮವೆವಸುಮತಿಯೊಳ । ತ್ಯುನ್ನತದ ಶ್ರೀಯಸವಕೊ ಡುವುದು । ಮಿನ್ನುಪರಧರ್ಮವದುಘನತರ ಕ್ಲೇಶದಾಯಕವು ॥ ಎನ್ನುತಲಿ ಶೃತಿತತಿಗಳನಿಶಂ । ನನ್ನಿಯಿಂದುಸುರುತ್ತಲಿರ್ಪುದ। ಮಾನ್ಯಮಂಮಾಡುತ್ತೆ ಪರಮತಭ್ರಾಂತಿಯಂ ತೊರೆದು ॥ ೫೫ ॥

ಪ್ರತಿನರನುತನ್ನಯಸುಧರ್ಮದೊ । ಳತಿಶಯದನಂಬುಗೆಯ ನಿರದಿ । ಟ್ಟತುಳಸೌಖ್ಯವಪಡೆವುದೇ ಮನುಜತ್ವಲಕ್ಷಣವು ॥ ಕ್ಷಿತಿ ಯೊಳೊಂದೇ ಮತವದಾಗದೆ । ಸತತಭಿನ್ನತೆಯಿಂದಲೀಬಹು । ಮ ತಗಳಾಗುವಸಂಭವವದೇನಿತ್ತು ಜಗದೊಳಗೆ ॥ ೫೬ ॥

ಎಂದುಪ್ರಶ್ನಿಸಬಹುದು ನೀವುಗ । ಳೊಂದೆತಾಯಿಯಗರ್ಭ ದಿಂಮಿಗೆ । ಚಂದದಿಂದುದಯಿಸಿದ ಸುಸಹೋದರರುನಾಲ್ವರೊಳೇ ॥ ಇಂದುಪರಿಕಿಸಲೋರ್ವನಿಗೆಪುಳಿ । ಸಂದಸಿಹಿಮತ್ತೋರ್ವನಿಗೆಮೇ। ಣಂದವಹಕಟುಲವಣಮುಳಿದೀರ್ವರಿಗೆ ಘನರುಚಿಯು ॥ ೫೭ ॥

ತೋರುವಂದದಿಭಿನ್ನರುಚಿಯಿಂ । ಚಾರುಮಾನವರೆಲ್ಲರೊಳು ಮೀ। ಧಾರಿಣಿಯೊಳೋರೋರ್ವನಿಗೆಯೊಂದೊಂದು ಮತದೊಳಗೆ ॥ ಮೀರಿದಭಿರುಚಿಯಿರ್ಪಕತದಿಂ । ದೀರಸೆಯೊಳಿರ್ಪಾವಧರ್ಮವು। ಸಾರತರಮಾದುದುಮೆನುತ್ತಲಿ ತಮ್ಮಮನಕ್ಕೈದೆ ॥ ೫೭ ॥

ತೋರಿಬರ್ಪುದೊತೋಷದೊಳುಮಾ।ಸಾರಮತವನೆಸ್ವೀಕರಿಸ ರಿದು । ಧಾರಿಣಿಯೊಳವಿರತಪ್ರಸಿದ್ಧವದಾದ ಸಂಗತಿಯು ॥ ಮಾರ ಹರನುರುನಿಯಮದಿಂದಲಿ । ಚಾರುನರರೊಳುಭಿನ್ನರುಚಿಯದು । ತೋರಿಬರ್ಪುದು ಜಗದೊಳಿದಕಾರೇನುಮಾಡುವದು ॥ ೫೮ ॥

ಆದಕತದಿಂದೀಕ್ಷಿಸಲುಮೀ। ಮೇದಿನಿಯೊಳತಿಮತಗಳಾಗುತೆ।
ಸಾದರದಿವ್ಯವಹಾರದೊಳುಬಂದಿರ್ಪುದಿದು ಸಹಜಂ ॥ ಈದಯಾಮ
ಯುಮತಗಳಂ ಘನ । ಮೋದದಿಂ ಸ್ವೀಕರಿಸಿದಖಿಲರ। ಭೇದಮಿಲ್ಲ
ದೊಳೀಕ್ಷಿಪುದು ಸುಸಹೋದರರತೆರದಿ ॥ ೫೯ ॥

ಎಲ್ಲಮತದವರೀರಹಸ್ಯವ । ಬಲ್ಲವರುತಾವಾಗಿಭೂತಲ। ದಲ್ಲಿ
ರುವಜನರೆಲ್ಲರೆಮ್ಮವರೆಂದು ಬಾಳಿದೊಡೆ ॥ ಎಲ್ಲರಂತಃಕರಣದಲ್ಲಿ
ಯು । ಸಲ್ಲಲಿತಸಮಭಾವವುದಯಿಸ। ಲೊಲ್ಲದೇ? ಮತಭೇದವಳಿ
ಯದೆ ? ಸುಖವುಸಾಧಿಸದೇ ? ॥ ೬೦ ॥

ಅರಿಯುವಂದದಿತತ್ವವನುಮಿಗೆ । ತೊರೆಯುವಂದದಿಸ್ವಾರ್ಥ
ವನುಪರಿ । ಹರಿಸುವಂದದಿ ಪರರಕಷ್ಟವಭೇದಗಳನುಳಿದು ॥ ಧರೆ
ಯಸೃಜಿಸಿದದೇವನೇನೀಂ । ನಿರುತಸದ್ಬುದ್ಧಿಯನು ಜವದಿಂ । ಕರು
ಣಿಸೈನಮಗೆಂದುಬೇಡುವುದನಿಶನೀವೆಲ್ಲ ॥ ೬೧ ॥

ನರರೊಳಗೆಕೆಲಸ್ವಾರ್ಥಿಗಳುನೆರೆ। ಮರೆತುಮಿಗೆಪೊರೆದವನಪೊ
ರೆವನ । ಗುರುವಚನಪಾಲಿಸದೆಮನಬಂದಂತೆ ಚರಿಸುವರು ॥ ಹರ
ಹರಾಗುರುಪಾವನಾದಡು । ಪರಮತೀಯರಹಿಂಸಿಸಿರಿನೀವ್ । ಪರ
ಮತದ್ವೇಷವನುಸಾಧಿಸಿರೆಂದು ಸಾರಿಹನೇ ॥ ೬೨ ॥

ಎತ್ತನೋಡಲಧರ್ಮವೃದ್ಧಿಯು । ಯೆತ್ತನೋಡಲಸೂಯ
ನಿಂದೆಯು । ಮುತ್ತಿಕೊಂಡಿಡೆ ಪರಮತದ್ವೇಷಾಗ್ನಿದಹಿಸುತಿದೆ ॥
ಎತ್ತಲುಂಮತವೈರಿಗಳಭಯ । ವೆತ್ತಲುಂ ಕ್ಷಾಮಾದಿಗಳಭಯ ।
ವೆತ್ತಲುಂ ಸಮರಗಳಕೋಲಾಹಲವೆ ತುಂಬಿಹುದು ॥ ೬೩ ॥

ಒಮ್ಮತದೊಳಿದನರಿದುನರರುರು । ತಮ್ಮಧರ್ಮವಬಿಡದೆಚರಿ
ಪುದು । ತಮ್ಮದೇವನತಮ್ಮಮನಬಂದಂತೆಪೂಜಿಪುದು॥ತಮ್ಮವರುಪ
ರರೆಂದು ಗಣಿಸದೆ । ತಮ್ಮವೊಲುಪರಿಗಣಿಸಿ ಸಕಲರ । ನೊಮ್ಮನದಿ
ದೀನರನುಪೊರೆವುದು ಸರ್ವಸುಖಕರವು ॥ ೬೪ ॥

ಧರ್ಮಮಾರ್ಗದೊಳಡಿಯಿಡಲು ದು । ಷ್ಕರ್ಮಭಾರವುಬಾಧಿಪುದೆ? ಸ । ದ್ಧರ್ಮತೇಜದಬೆಳಕಿನಲಿ ಕಲಿಧರ್ಮವುಳಿಯುವುದೆ? ॥ ಧರ್ಮದಿಂರಿಪುಭಯವು ತಪ್ಪದೆ? । ಧರ್ಮದಿಂಕ್ಷಾಮವದುಮುಡಗದೆ? । ಧರ್ಮದಿಂಸರ್ವೇಶರಕ್ಷಿಸದಿಹನೆಯದರಿಂದಂ ॥ ೬೫ ॥

ಪ್ರತಿನರನುಮೀಭುವಿಯೊಳಿರುತಿಹ । ಮತಗಳನುನಿಂದಿಸದೆಸಲೆಪರ । ಮತಸಹಿಷ್ಣುಗಳಾಗಿಸರ್ವರು ಸುಖದಿಬಾಳುವುದೆ ॥ ಸತತಮುಚಿತವದಾದವಿಷಯವು । ಮತಿರಹಿತಮಾದಾದುರಾಗ್ರಹ । ಕ್ಷಿತಿಯೊಳದುಶೋಭಿಸದು ಸಮ್ಯಕ್‌ಧರ್ಮವಿದುನೋಡೆ ॥ ೬೬ ॥

ಕೆಲರುಮತಶ್ರೇಷ್ಠತೆಯ ಪೊಗಳುತೆ । ನಿಲದೆದುಷ್ಕಾರ್ಯಗಳಗೈದುರು । ತೊಳಲುವರುಸಂತತದೊಳಿದು ಕಡುಹೇಯವರ್ತನವು॥ ಇಳೆಯೊಳತ್ಯುಚ್ಚತೆಯುದೊರೆವುದು। ತೊಳಪಮತದಿಂಮಾತ್ರವಲ್ಲವ। ದಲಘುತರಸದುಗುಣಸದಾಚಾರಗಳ ವರ್ತನೆಯಿಂ ॥ ೬೭ ॥

ದೊರೆವುದಿದುಸಿದ್ಧಾಂತಮಾದುದು । ವರಮತದೊಳುದಯಿಸಿದಮಾತ್ರಕೆ । ಪರಮಶ್ರೇಷ್ಠತೆಬರ್ಪುದೆಂಬುದು ಪಿರಿದುಪುಸಿಸಿದ್ಧಂ ॥ ಸರುವದಾಪರಹಿತವನೆಸಗುತೆ । ಪಿರಿದು ವಿಶ್ವಕುಟುಂಬಿಯಾಗುತ । ಮೆರೆವವನೆಸಲೆಶ್ರೇಷ್ಠವರ್ಣದ ನರನುಮೆನಿಸುವನು ॥ ೬೮ ॥

ನರನಪರತರ ದೇಹವೃದ್ಧಿಗೆ । ಸರಸಜಲಮಾಹಾರವಾಯುಗಳಿರದವಶ್ಯಕಮಿರ್ಪತೆರದೊಳು ನಿಖಿಲಮಾನವರ ॥ ಪರಮತರಸುಖಶಾಂತಿಗಳಿಗುರು । ತರದನೀತಿಯು ಪಿರಿದವಶ್ಯಕ । ಮೆರೆವನೀತಿಯು ವಿಮಳಮಾನವಶಾಸ್ತ್ರಮಾಗಿಹುದು ॥ ೬೯ ॥

ಆವಕಾಯಕವಾವಕೆಲಸವ । ದಾವಧರ್ಮವದಾವಕರ್ಮವು। ಯಾವದೇಶವದಾವಕೋಶವು ಯಾಗಲೀಪರಮ ॥ ಪಾವನದನೀತಿಯನುತ್ಯಜಿಸು । ತ್ತಾವಮನುಜನು ಶಾಂತಿಸುಖಗಳ । ನೀವಸುಧೆಯೊಳುಪಡೆಯಲದು ದುಸ್ಸಾಧ್ಯಮಾಗಿಹುದು ॥ ೭೦ ॥

ಪರಮಮನುಜನಮಾನವತ್ವವು। ಪರಿಕಿಸಲುಸರ್ವತ್ರಮೊಂದೇ।
ಇರುವುದಿದುದಿಟ ದೇಶಕಾಲ ಪರಿಸ್ಥಿತಿಯಕತದಿಂ ॥ ಪಿರಿದುರಾಜಿಪ
ವೇಷಭಾಷೆಗ । ಳಿರದೆಬಗೆಬಗೆಯಾಗಿ ತೋರ್ದಡು । ಮೆರೆವಮಾನ
ವನಂತರಂಗಿಕ ಭಾವನೆಗಳೆಲ್ಲ ॥ ೭೧ ॥

ಸತತವೊಂದೇಯಾಗಿತೋರ್ಪವು । ಪ್ರತಿನರನಪರಮಂತರಂಗ
ದೊ । ಳತಿಶಯದಿಜನಿಪಾಶೆಯಾಮಿಷ ಹರುಷವಿಷಯಾದಿ ॥ ವಿತತ
ಗುಣತತಿಯಿಂಡಕೂಡಿದ । ಮತಿಯುತಸುಮಾನವರಹಿತಕರ । ದತುಳ
ನಡತೆಗಳತಿಶಯದಿ ನಿರ್ಧರಿಸಿ ದೃಢದಿಂದೆ ॥ ೭೨ ॥

ಇದುವೆನೀತಿಯುಮಿದುಮನೀತಿಯು । ಯಿದುವೆಸರಿಸರಿಯಲ್ಲ
ಮಿದುಮೇ । ಣಿದುವೆಘನಮೊಳಿತಿದುವೆಕೆಟ್ಟುದುಮೆನುತೆ ನಿರ್ಧರಿಪ॥
ಸದಮುಳದಕರ್ತವ್ಯವೇಘನ । ಬುಧನಿಕರನುತನೀತಿಶಾಸ್ತ್ರದ । ವಿದಿತ
ಗುರಿಯಾಗಿರ್ಪುದಿದುಲೋಕದೊಳು ವಿಖ್ಯಾತಂ ॥ ೭೩ ॥

ನರನುಮುದಯಿಸಿದಂದಿನಿಂದಿದು । ವರೆಗೆಕೆಲವುಸುನೀತಿಪುರು
ಷರು । ಪರಿಪರಿಯರೀತಿಯೊಳುಮನುಜನ ನೀತಿನೆಲೆಗಟ್ಟಂ ॥ ಸರಸ
ದಿಂ ನಿರ್ಧರಿಸಲಿಕೆಘನ । ತರಪ್ರಯತ್ನವನೆಸಗಿ ಶ್ರೇಯಸ । ವಿರದೆ
ಮಿಗೆದೊರೆಕಿಸುತ ಧರೆಯೊಳು ಮೆರೆದಮಹಿಮರೊಳು ॥ ೭೪ ॥

ವೇದಮತದಮಹರ್ಷಿಗಳು ಘನ । ಬೋಧವೆಸಗಿದ ಬೌದ್ಧಮ
ಹವೀ । ರಾದಿರೇಣುಕಶಂಕರಾಚಾರ್ಯೇಸುಕ್ರೈಸ್ತಸಮ ॥ ಸಾಧುಪೈ
ಗಂಬರರುಸಿದ್ಧಿಯ । ಸಾಧಿಸಿದರಾಮಾನುಜರು ಮೇ । ಣಾದಯಾಮ
ಯಮೂರ್ತಿಮಧ್ವಾಚಾರ್ಯ ಬಸವೇಶಂ ॥ ೭೫ ॥

ಈಮಹಾಮಹಪುರುಷರುಗಳೆ । ಲ್ಲೀಮಹಿಯೊಳಿರುತಿರ್ಪ ಮ
ನುಜರ । ಭೂಮಹಿತಕ್ಲೇಶಗಳನೀಕ್ಷಿಸಿ ಮಿಗೆಮರುಕಗೊಂಡು ॥ ಕೋ
ಮಲಧಮನದಿಂದಲವರಿಗೆ । ಕಾಮಿತಾರ್ಥವುದೊರೆಯಲೋಸುಗ ।
ಭೂಮಿಯೊಳಗಿಂತಿರಲಿಬೇಕೆಂತಿರಲಿಬೇಕೆನುತೆ ॥ ೭೬ ॥

ಹರುಷದೊಳುಮೊಂದೊಂದುರೀತಿಯೊ। ಳಿರದೆಭದ್ರವದಾದನೀತಿಯ। ಪರಮುತರನೆಲೆಗಟ್ಟನಿರ್ಧರಿಸಲಿಕೆ ಸಾಹಸದಿಂ ॥ ನೆರೆಪ್ರಯತ್ನವನೆಸಗಿಜಸವಂ। ದೊರೆಕಿಸಿದರೆಂಬುದರೊಳೇನುಂ। ಪರಿಕಿಸಲ್ಕಣುಮಾತ್ರಸಂಶಯ ತೋರದಿದುಸತ್ಯಂ ॥ ೭೭ ॥

ಪರಮನೈತಿಕಜೀವನಕೆಮೊದ। ಲಿರದವಶ್ಯಕವೂದುದಿದುಸರಿ। ಸರಿಯಿದಲ್ಲವೆನುತ್ತೆ ತ್ವರಿತದಿ ತಿಳಿದುಕೊಳುವಂತ ॥ ಅರಿವೆನೈತಿಕಜೀವನಕೆಘನ। ತರದಿರುಜಿಪ ಬೀಜಮಂತ್ರವು। ಮೆರೆಯುತಿರ್ಪೀಅರಿವಸಂಪಾದಿಸಲುಬೇಕನಿಶಂ ॥ ೭೮ ॥

ಜಗದಿನೈತಿಕಜೀವನಾಪೇ। ಕ್ಷಿಗಳುಮೊದಲುತ್ರಿವಿಧಮಾಗಿಹ। ಮಿಗಿಲೆನಿಪತನುಮನಧನಂಗಳ ಪರಮಶ್ರದ್ಧೆಯೊಳು ॥ ಸುಗುಣದಿಂ ಸಂಪಾದಿಸುವುದದು। ಸೊಗಸೆನಿಪ ನೈತಿಕದಜೀವನ। ಕೊಗುಮಿಗೆಯಮೊದಲನೆಯಹೆಜ್ಜೆಯದಾಗಿ ಶೋಭಿಪುದು ॥ ೭೯ ॥

ಮನವದವಿರತಶುದ್ಧಮಾಗಿರ। ಲನುನಯದೊಳುದ್ಯೋಗಗೈದುರು। ಧನವಸಂಪಾದಿಸಲು ತನುವಾರೋಗ್ಯಶಕ್ತಿಯೊಳು ॥ ಅನಿಶಮಿರಬೇಕಾದಕತದೀ। ತನುವುರಾಜಿಸುವಾತ್ಮದನಿತೇ। ಘನತರದೊಳದುಪೂಜನೀಯವುಮುಖ್ಯಮಾಗಿಹುದು ॥ ೮೦ ॥

ಮೆರೆವದೇಹಕೆದೇಗುಲವೆನು। ತ್ತುರುಶರಣರಿರದ್ವೈವೆ ಹರುಷದಿ। ಪರಿಗಣಿಸಿಪೂಜ್ಯತೆಯತೋರಿದಕತದಿ ದೇಹವನು ॥ ನಿರುತಪಿರಿದೆಚ್ಚರಿಕೆಯಿಂದಲಿ। ಧರಣಿಯೊಳುಕಾಪಾಡಿಕೊಳುವುದು। ಪರಮತಿಯ ಪ್ರತಿನರನಮಿಗೆಕರ್ತವ್ಯಮಾಗಿಹುದು ॥ ೮೧ ॥

ಭೂರಿಕೇಡಿನಕುಡಿತಮಾತ್ಯಾ। ಚಾರಹೇಯುವದೆನಿಸುತಿಹವ್ಯಭಿ। ಚಾರಮೇಣ್‌ದುಷ್ಕೃತದುರಾಚಾರಗಳ ವರ್ತನೆಯಿಂ ॥ ಚಾರುದೇಹವಕೆಡಿಸಿಕೊಳದೆ ಸು। ಸಾರಸಾತ್ವಿಕಭೋಜನುರುಮುದ।ವೇರಿಸುವ ವ್ಯಾಯಾಮಘನಸಾತ್ವಿಕದ ವ್ಯವಹಾರ ॥ ೮೨ ॥

ಸರಸಸ್ನಾನವುದೇವತಾರ್ಚನೆ। ಪರಮಪ್ರಾಣಾಯಾಮ ಮೊದಲಾ। ದುರುಹಿತದಸಾಧನದಿ ದೇಹವನಾಡೆಶುದ್ಧಿಯೊಳು ॥ ಪಿರಿದು ನಾರೋಗ್ಯಾತಿಶಯದೊಳು । ಕರಮೆಸೆಯುವಂತೆಸಗಿಕೊಳುತಂ । ನೆರೆವದೇಹದಶ್ರೇಷ್ಠತೆಯಕಾಪಾಡಿಕೊಳ್ಳುವುದು ॥ ೮೭ ॥

ಎಸೆವದೇಹವೆಯಿಹಪರಂಗಳೊ । ಳಸಮಸೌಖ್ಯವಪೊಂದಿಘನತರ। ಜಸವಸಲೆಪಡೆಯಲಿಕೆ ಮೂಲಾಧಾರವಾಗಿಹುದು ॥ ರಸೆಯೊಳಗೆನಿಜಸುಖವಪೊಂದಲು। ವ್ಯಸನವೆಸಗುವನರರುಮೊದಲುಂ। ಮಿಸುಪದೇಹವಪ್ರಾಣಕಿಂ ಮಿಗಿಲಾಗಿಕಾಂಬುವುದು ॥ ೮೮ ॥

ವಿತತದೇಹವಶ್ರದ್ಧೆಯಿಂದಲಿ। ಸತತಸಲೆಕಾಪಾಡಿಕೊಳ್ಳದೆ। ಕ್ಷಿತಿಯೊಳಗೆನಿರ್ಲಕ್ಷಿಸುವಮಾನವರು ತಿಲಮಾತ್ರಂ॥ ಹಿತಕರದಕುಶಲವನುಪೊಂದದೆ। ಮತಿವಿಹೀನರುಮಾಗಿಪರದೊಳ। ಗತುಳನರಕಾರ್ಣವದಿ ಬೀಳ್ವರುತೊಳಲುವರುಸಿದ್ಧಂ ॥ ೮೯ ॥

ತನುವಿನಂತೆಯೆ ಪರಮಮನಮದು । ಮನಿಶಶುದ್ಧವದಿರಲುಬೇಹುದು । ಮನುಜನಂಪೆಣದಂತೆ ಗೈಯ್ಯುವಭಂಗಿನೊದಲಾದ ॥ ಘನವಿಕಾರದ್ರವ್ಯನಿಚಯವ । ನಣುಪ್ರಮಾಣವು ಸೇವಿಪುದರಿಂ । ಮನವುಚಂಚಲಪೊಂದಿಶೀಘ್ರದಿ ಕೆಟ್ಟುಪೋಗುವುದು ॥ ೯೦ ॥

ಆದಕತದಿಂದಿವುಗಳನು ಪ್ರೇ । ಮೋದಯದಿತ್ಯಜಿಸುವುದುಮಲ್ಲದೆ। ಮೇದಿನಿಯೊಳೀಮನವುಮರ್ಕಟದಂತೆ ಬಹುಚಪಲಂ ॥ ಸಾಧುಜನಗಳ ಸಂಗದಿಂದ। ತ್ಯಾದರದೊಳೀಪರಿಯಚಂಚಲ। ನಾದಮನನಮಂ ಭದ್ರತರಮಾಗಿರದೆಪಿಡಿಯುತ್ತೆ ॥ ೯೧ ॥

ಪಿರಿದುಶುದ್ಧವನೆಸಗಿಕೊಳಬೇ। ಕುರುಮೆರೆಯುವೀ ಮನವೆಜಗದೊಳು। ಪರಮಮೋಕ್ಷಕೆ ಬಂಧನಕೆಕಾರಣವದಾಗಿಹುದು ॥ ಸರುವರುಗಳಿದನರಿದು ಘನತರ । ಚರಿಪಮನನಮಂ ತಮ್ಮವಶದೊಳು । ನಿರುತಹರುಷದೊಳಿರಿಸಿಕೊಳುವುದೆ ಪರಮನೈತಿಕವು ॥ ೯೨ ॥

ನೈತಿಕದಜೀವನಕೆ ತನುಮನ। ದೋತುಶುದ್ಧತೆಯೆನಿತುಮುಖ್ಯ ವೊ। ಪೂತಮಾದುದ್ಯೋಗದಿಂ ಮಿಗೆಧನವನಾರ್ಜಿಸುವ ॥ ಸಾತಿಶ ಯದಾಕಾರ್ಯವನಿತೇ। ಭೂತಳದಿಬಹುಮುಖ್ಯಮಾಗಿಹು। ದಾತು ರಿಯದಿಂ ಪೂತಮಾದುದ್ಯೋಗವೆಸಗದಲೆ ॥ ೮೯ ॥

ನಿರುತಮತಿಯಾಲಸ್ಯತನದಿಂ। ಕಿರೆಯೊಳಗೆಜೀವಿಪುದ ಸಜ್ಜನ। ರಿರದೆಸಹಿಸರು ದುರಿತಕರದಾಲಸ್ಯತನವದುವೆ ॥ ನರಗೆಬಗೆಬಗೆಕೆಟ್ಟ ಬಯಕೆಗ। ಳುರುತರದಿಪುಟ್ಟಸುವುದಲ್ಲದೆ। ಪರಮತರದುದ್ಯೋಗ ವೆಸಗದ ಮಾನವನಮನವು ॥ ೯೦ ॥

ಸತತದುರುವಿಷಯಗಳ ಕಡೆಗದು। ಮತಿಶಯದಿಹರಿಯುವು ದು ಮೇಣೀ। ಕ್ಷಿತಿಯೊಳಗೆಸುರೆಪಾನಪಾದರ ಕಳವುಮೊದಲಾದ ॥ ಪತಿತಕಾರ್ಯದಕಡೆಗೆಭರದಿಂ। ದತುಳಸಾಹಸವೆಸಗಿಸಾಗುವ। ಕತ ದಿಪ್ರತಿನರನಾವುದಾದಡುಮೊಂದು ಸಾತ್ವಿಕದ ॥ ೯೧ ॥

ಲಲಿತಮಾದುದ್ಯೋಗಮಂ ಕೈ। ಕೊಳುತೆದೃಢದಿಂ ಧನವನಾ ರ್ಜಿಪು। ದೊಳಿತೆನುತೆಹರಶರಣರತಿಹರುಷದೊಳು ಸಾರಿಹರು ॥ ಯಿ ಳೆಯೊಳಗೆಸಾತ್ವಿಕವದಲ್ಲದ। ಕಳವುಜೂದುರುಮೋಸಗಾರಿಕೆ। ಪಲ ವರಂ ವ್ಯಥೆಗೊಳಿಸಿಸಂತತ ಧನವನಾರ್ಜಿಪುದು ॥ ೯೨ ॥

ಸರುವಥಾಘನಹೇಯಕರಮಾ। ಗಿರುವವರ್ತನಮಿದಕೆ ಜಗ ದೀ। ಶ್ವರನುಯೋಗ್ಯವದಾದಶಿಕ್ಷೆಯವಿಧಿಪನಿದುಸತ್ಯಂ ॥ನರರುಮಿ ದನುರುತಿಳಿದುಭುವಿಯೊಳು। ಪರಮಸಾತ್ವಿಕಸತ್ಯಶುದ್ಧದಿ। ನಿರುತ ಯುತಮುದ್ಯೋಗದಿಂದಲೆ ಧನವನಾರ್ಜಿಪುದು ॥ ೯೩ ॥

ಈತೆರದಿತನುಮನಧನಂಗಳ। ನೋತುಸಂಪಾದಿಸಿದಬಳಿಕಂ। ಪೂತಜನಸೇವೆಗೆತನುವ ಜಗದೀಶಗುರುಮನವ ॥ ಖ್ಯಾತಸಕಲಪ್ರಾಣಿ ನಿಕರಕೆ। ಸಾತಿಶಯದಿಂ ಧನವನರ್ಪಿಸಿ। ಭೂತಳದಿಪರಿಪೂತನೆಂದೆ ನಿಸುವುದೆ ನಿಜಧರ್ಮಂ ॥ ೯೪ ॥

ಧರೆಯೊಳುರುಸಜ್ಜನರ ಸಂಗದೊ । ಳಿರುವವಾಂಛಿತಪರರ ಗು
ಣದೊಳು । ಪರಮಪ್ರೀತಿಯುಗುರುವಿನೊಳುನಮ್ರತೆಯು ವಿದ್ಯೆಯೊ
ಳು ॥ ಪಿರಿದುವ್ಯಸನವುತನ್ನಸತಿಯೊಳಿ । ಸರಸರತಿಸುಖಮೀಶನೊಳು
ಘನ । ತರದಭಕ್ತಿಯು ಲೋಕದಪವಾದದೊಳುಮಿಗೆಭಯವು ॥೯೫॥

ಅತಿಶಯದೊಳೆಸೆವಾತ್ಮದಮನವು । ಮತಿವಿಹೀನರಸಂಗವರ್ಜ
ವು । ವಿತತಮಾದೀಗುಣತತಿಗಳಿಂ ಕೂಡಿತಿರೆಯೊಳಗೆ ॥ ಸತತಮೆರೆ
ಯುವ ಪರಮನರರುಗ । ಳತುಳಮಾನವ ಧರ್ಮವೆಂಬುವ । ಹಿತ
ಕರದ ಶರಧಿಗೆಸುಧಾಕರನಂತೆಶೋಭಿಪರು ॥೯೬॥

ಮೆರೆಯುವೀಮಾನವಸುಧರ್ಮದ । ತೆರದಿಚರಿಸುತೆನಿಮ್ಮಜನ್ಮ
ಗ । ಳಿರದೆಸಾರ್ಥಕವೆಸಗಿಕೊಳುವುದು ಪರಮಪ್ರತಿಯೋರ್ವ ॥ ನರ
ನಮಿಗೆಕರ್ತವ್ಯವಾಗಿಹು । ದರಿಪದನುಜಗದೊಳಗೆ ಬಿಡದಾ । ಚರಿ
ಸಿಧನ್ಯತೆವಡೆವುದೆನುತಲಿಸೊಲ್ಲಿಸಿದರ್ಕೈದೆ ॥೯೭॥

ನೆರೆದಸರ್ವಮತೀಯಮನುಜರು । ಚರವರರಮಿಗೆ ಸರಸವಾ
ಗಿಹ । ಪರಮಬೋಧಾಮೃತವನಾಲಿಸಿಸಂತಸಂಗೊಂಡು ॥ ಪರಿಪರಿ
ಯವಿಧವಾಗಿಪೊಗಳು । ತ್ತುರುತರದಭಕ್ತಿಯೊಳು ಶ್ರೀಗಳೊ । ಳಿರ
ದೆಪರಕೆಯಪಡೆದು ತಮತಮಗೃಹಕೆ ತೆರಳಿದರು ॥೯೮॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣಾ
ಕ್ಷರಗಳಲಿ ಷಟ್ಪಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು
ಕೇಳುವುದು ಪನ್ನೊಂದನೆಯ ಸಂಧಿ ॥೯೯॥

ಸಂಧಿ ೧೧ ಕ್ಕಂ ಪದ ೬೩೬ ಕ್ಕಂ ಮಂಗಲಂ

ಮಹಾ ಶ್ರೀ ಶ್ರೀ.

॥ ಶ್ರೀ ತ್ರಿಲೋಕೇಶಾಯ ನಮಃ ॥

# ಹನ್ನೆರಡನೆಯ ಸಂಧಿ.



ಸೂಚನೆ ॥ ಮೆರೆವಕೌಲಗಿಯೆಂಬಗ್ರಾಮದಿ ।
ಪರಮಹರಿವಾಣಗಳ ಮಹಿಮವ ।
ನಿರದೆಸಗಿ ವರವೀರಶೈವೋತ್ಕೃಷ್ಟತೆಯನೊರೆದಂ ॥

ಶ್ರೀಮದವಿರಳ ಸಕಲನಿಷ್ಕಲ । ಸೋಮಸೋಮಕಲಾವತಂಸಸು । ಸಾಮಗಾನಪ್ರೇಮನಿಜಮನುಧಾಮಸದ್ಭಕ್ತಿ॥ ಕಾಮಕಾಮಿತ ಫಲದವಿಧುಸು । ತ್ರಾಮವಿಧಿನತದೇವಭವದೀ । ಯ್ಯಾಮಳಾಂಘ್ರಿಸರೋಜಗಳಿಗಾನೊಂದಿಪೆನು ಮುದದಿ ॥ ೧ ॥

ಒಂದುವತ್ಸರ ಧರಣಿಯೊಳುಮಿಗೆ । ಚೆಂದದಿಂ ರಾಜಿಸುವಕೌಲಗಿ । ಯಿಂದುಧರವರಭಕ್ತವೃಂದವು ಸೇರಿಬಹುಮುದದಿಂ ॥ ಇಂದುಭಾಸ್ಕರರಿರುವನಕ ಸಲೆ । ಸಂದಕೀರ್ತಿಯವಡೆದುಲೋಕದೊಳಿಂದುರಾಜಿಪ ಶರಣಬಸವೇಶ್ವರಪುರಾಣವನು ॥ ೨ ॥

ಇಡಿಸುತಲಿಸಂಭ್ರಮದಿಬಹುದಿನ । ನಡೆಸುತಿರೆ ಪಲದಿನದೊಳದನತಿ । ಸಡಗರದಿಪರಿಪೂರ್ಣಗೊಳಿಸುವ ಸಮಯವದುಬರಲು ॥ ಕಡುಮಹಿಮರೆಂದೆನಿಸಿಮೊದಲಿಂ । ಪೊಡವಿಯೊಳುಪ್ರಖ್ಯಾತಿಪೊಂದಿದ । ಮೃಡನಸಮಜಂಗಮರ ಸಂತರ್ಪಣೆಯನೆಸಗಲ್ಕೆ ॥ ೩ ॥

ಮೆರೆವಶಹಪುರಕಾಗಮಿಸುತತಿ । ತ್ವರಿತದಿಂ ಬಸವಾರ್ಯರಿಂಗುರು । ತರದಭಯಭಕ್ತಿಯೊಳು ಬಿನ್ನಹವೆಸಗಿ ಕರಮುಗಿದು ॥ಹರುಷದಿಂನಾವೀಗಕೈಕೊಂ। ಡಿರುವಪೌರಾಣದ ಸಮಾಪ್ತಿಯ । ಪರಮಗಣಸಂತರ್ಪಣೆಯಕಾರ್ಯಕ್ಕೆ ತಾವಿರದೆ ॥ ೪ ॥

ಆಗಮಿಸಬೇಕೆನುತೆ ಶಿರಗಳ । ಬಾಗಿನಿಂತುರುಬೇಡಲದಕವ । ರಾಗಳನುಮತಿಯಿತ್ತುಪೊರಡುತೆ ಭಕ್ತರೊಡಗೂಡಿ ॥ ಬೇಗದಿಂದಾಗ ಮಿಸೆ ಮರುದಿನ । ರಾಗಮಿಗೆಶ್ರೀಜಂಗಮಾರ್ಚನೆ । ಸಾಗಿಸಂತರಗಣ ಸಮೂಹದ ಪಂತಿಯೊಳಗಾಗಳ್ ॥ ೫ ॥

ಭೋಜನವಗೈವುದಕೆಬಟ್ಟಲು । ಸಾಜವಾಗಿಯೆಕಡಮೆಬೀಳಲು । ಮಾಜದೀವಿಷಯವನು ಚರಬಸವಾರ್ಯರಿಗೆ ತಿಳುಪಲ್ ॥ ಮೂಜಗದನಾಥನನು ಸ್ಮರಿಸು । ತ್ತಾಜನಂಗಳಕೂರ್ತು ಮುದದಿಂ । ರಾಜಿಸುತಲಿರ್ಪಿಪರಮಪಾವನದ ಮಠದೊಳಗೆ ॥ ೬ ॥

ಮೆರೆವದೇವರಕೋಣೆಯೊಳಗಿನ । ಪರಮತರದೀಶಾನ್ಯದಿಶೆಯೊಳ । ಗಿರುವಮೂಲೆಯೊಳೆನಿತುಬೇಕಾಗಿರ್ಪವನಿತೆಸೆವ ॥ ಪರಮರಜತದ ಬಟ್ಟಲುಗಳನು । ತ್ವರಿತದಿಂನೀವ್ ತೆಗೆದುಕೊಳುತುರು । ಚರರಸಂತರ್ಪಣೆಯುತೀರಿದನಂತರದೊಳವನುಂ ॥ ೭ ॥

ತೆಗೆದುಕೊಂಡಿಹತಾಣದೊಳೆಮಿಗೆ । ಸೊಗಸಿನಿಂದಿಡುವುದುಮೆನುತ್ತಲಿ । ಸುಗುಣನಿಧಿಬಸವಾರ್ಯಘನತರ ಹರುಷದಿಂದುಸುರೆ ॥ ಬಗೆಯೊಳೆಲ್ಲರು ಮುದವಪೊಂದುತೆ । ಮಿಗೆವಿರಾಜಿಪದೇವಗೃಹದೊಳು । ಪೊಗುತಲೀಕ್ಷಿಸಲೆನಿತುಬೇಕಾಗಿರ್ಪವನಿತಿರದೆ ॥ ೮ ॥

ಕರಮೆಸೆವಬಟ್ಟಲುಗಳಿರುತಿರೆ । ಭರದೊಳವುಗಳತೆಗೆದುಕೊಳುತುರು । ತರದಿರಾಜಿಪಪರಮಪ್ರಮಥರ ಘನಸಮೂಹಕ್ಕೆ ॥ ಹರುಷದಿಂದೀಯುತ್ತ ತೃಪ್ತಿಯ । ನೆರೆವಡೆದನಂತರದಿ ವರಪುರ । ಹರನರೂಪಿಗಳೊರೆದತೆರದೊಳು ತ್ವರಿತದಿಂದಿರದೆ ॥ ೯ ॥

ಅಸಮದೇವಗೃಹದ ಮೂಲೆಯೊ । ಳೆಸೆವತಾಣದಿಬಟ್ಟಲುಗಳಂ । ಸಸಿನೆಯಿಂದಿಡುತ್ತೈದುನಿಮಿಷವುತಡೆದುನೋಡಲ್ಕೆ ॥ ಮಿಸುಪ ತಾಣದೊಳೊಂದುಮಿಲ್ಲದೆ । ನಸುಸಮಯದೊಳೆಮಾಯವಾಗಿರೆ । ವಸುಮತಿಯೊಳಿದುಪರಮವಿಸ್ಮಯವಾದ ಸಂಗತಿಯು ॥ ೧೦ ॥

ಅಸಮನಯನರೂಪ ಶ್ರೀಚರ । ಬಸವದೇವನಸಮಹಿಮೆಯಲ್ಲಿದೆ । ರಸೆಯೊಳಿದಕಿನ್ನಾವಕಾರಣವಿಲ್ಲವಿದುಸತ್ಯಂ ॥ ಶಶಿರವಿಗಳಿರ್ಪನಕ ಶ್ರೀಗಳ । ಜಸವುರಾಜಿಸಲೆನುತೆ ಸರ್ವರು । ಮೊಸೆದು ಜಯಘೋಷವನುಮುದದಿಂದಿರದೆ ಗೈದಾಗಳ್ ॥ ೧೧ ॥

ಮಾರಹರರೂಪಿಗಳೆ ಸಮುಗುರು । ವೀರಶೈವೋತ್ಕೃಷ್ಟತೆಯ ಮುದ । ವೇರಿಬೋಧಿಸಿಪರಮಭಕ್ತರ ಮಾಳ್ಪುದೆಂದೆನುತೆ ॥ ಭೂರಿಭಕ್ತಿಯೊಳ್ಕೈದೆಬೇಡಲು । ಚಾರುಚರವರರಾಗ ಹರುಷದಿ । ಧೀರಭಕ್ತರಬಯ್ಕೆಯೊಲು ಬೋಧಿಸಲುತೊಡಗಿದರು ॥ ೧೨ ॥

ಪರಮಭಕ್ತರೆಪರಮಶಿವನಿಂ । ವಿರಚಿತವಡಾಗಿರ್ಪ ಸೃಷ್ಟಿಯೊ । ಳಿರುವನಿಖಿಲಪ್ರಾಣಿನಿಕರದೆ ಜ್ಞಾನವಾಧಿಕ್ಯ ॥ ಇರುವಮಾನವಜನ್ಮವೇಬಹು । ಸರುವಶ್ರೇಷ್ಠಮೆನುತ್ತ ಶೃತಿಗಳು । ನಿರುತ ಮಿಗೆಸಾರುತ್ತಲಿರ್ಪವು ಸಕಲಜಗವರಿಯೆ ॥ ೧೩ ॥

ವಸುಧೆಯೊಳು ಮನುಜನಿಗೆ ನೋಡಲು । ವಶವದಾಗದಜೀನಿಯೇ ಇ । ಲ್ಲಸದಳವದೆಂದೆನಿಪಕಾರ್ಯವು ತ್ರಿಭುವನದೊಳಿಲ್ಲಂ ॥ ಅಸಮಶ್ರೇಷ್ಠವದೆನುತಲೀಪರಿ । ರಸೆಯೊಳಗೆರಾಜಿಸುವಜನ್ಮವ । ನೊಸೆದುಘನತರಸಾರ್ಥಕವ ಸಲೆಪಡಿಸಿಕೊಳ್ಳದಿರೆ ॥ ೧೪ ॥

ವಸುಮತಿಯನಸುಜ್ಞಾನವಿಲ್ಲದ । ಪಶುಗಳಿಗುಸಂತತದಿಜ್ಞಾನಮೊ । ಳೆಸೆಯುತಿಹಮಾನವರಿಗಂತರವೇನುವಿಲ್ಲದಲೆ ॥ ಪಶುವಿನೊಳಿಗಣನೆಯನು ಪಡೆವರು । ಪಶುಗಳಿಗುಸುಖದುಃಖಮುಂಟುರು । ಮಿಸುಪನಮಗೀದ್ವಂದ್ವವಿದ್ದೇ ಇರ್ಪುದಿದುದಿಟವು ॥ ೧೫ ॥

ಅವುಗಳುಂ ಪುಟ್ಟುವವುಸಾಯುವ । ವವಿರತದಿಭವಚಕ್ರದೊಳುಮಾ । ನವರುಗಳಗತಿಯಾಪಡೀತೆರದಿಂದಲಿರುತಿರ್ಪಂ ॥ ತವೆನಿವೇಚಿಸಿನೋಡೆಪಶುಗಳಿ । ಗವನಿಯೊಳುಮಿಗೆರಾಜಿಸುವಮಾ । ನವರಿಗಿದರೊಳಗೇಂ ವಿಶೇಷವು ಸುಖದನಂತರದಿ ॥ ೧೬ ॥

ಸಿರಿದುದುಃಖವ ದುಃಖದಾನಂ । ತರದಿಸೌಖ್ಯವಚಕ್ರದಂತೀ । ತಿರೆಯೊಳನುಭವಿಪನ್ನೆಗಂ ಮಾನವಗುಮೇಣಿತರ ॥ ಸರುವಜೀವಿಗ ಳಿಂಗೆಭೇದವ । ದಿರುವದಿಲ್ಲೆನ್ನುರವಧೀಪರಿ । ಯಿರುವನಕಜಗದೀಶ ಘನಕರುಣೆಯೊಳು ನಮಗೀಗಳ್ ॥ ೧೭ ॥

ಅನುನಯುದಿದಯುಪಾಲಿಸಿರುತಿ । ರ್ಪನುಪಮಿತವಹ ಬುದ್ಧಿ ಶಕ್ತಿಯ । ನೆನಿತುಸಾರ್ಥಕನೆಸಗಿಕೊಂಡಂತಾಗಲಿಲ್ಲೈದೆ ॥ ವಿನುತ ಜ್ಞಾನಶ್ರೇಷ್ಠಸಾಗಿಹ । ಮನುಜದುಃಖದಮುಖವ ಸ್ವಪ್ನದೊ।ಳಿನಿ ತುನೋಡದೆರಾಜಿಸೀಭುವನದೊಳು ಸಂತತದಿ ॥ ೧೮ ॥

ಪರಮಸುಖಮನುಭವಿಸುತಿರ್ದೊಡೆ । ಮೆರೆಯುವೀ ಅನುಪ ಮಿತಜನ್ಮವ । ನೆರೆಸುಸಾರ್ಥಕಗೊಳಿಸಿಕೊಂಡಂತಾಗುವುದುನೋಡೆ ॥ ಧರೆಯೊಳೀಪರಿಸುಖದಪ್ರಾಪ್ತಿಗೆ । ಮಿರುಪರುಷಿಗಳು ಮೋಕ್ಷಮೆನು ತೊರೆ । ದಿರುವರೀವರಮೋಕ್ಷಸಾಧನಕಾಗಿಯೇ ತಿರೆಯೊಳ್ ॥ ೧೯ ॥

ಭೂರಿಮಹಿಮಾನ್ವಿತಮಹಾತ್ಮರು । ಮೀರಿನಿರ್ಣಯಗೊಳಿಸಿ ರುತ್ತಿಹ । ಬೇರೆಬೇರೆಯತೆರದಭಿಪ್ರಾಯಗಳೆ ಮತಮೆಂದುಂ ॥ ಧಾ ರಿಣಿಯೊಳತಿತವಕದಿಂ ವ್ಯವ । ಹಾರದೊಳು ಬಂದಿರ್ಪವದರಿಂ । ಚಾರುಬ್ರಹ್ಮಾಂಡದೊಳೆಸೆಯುತಿರ್ಪಖಿಲ ಮತಗಳೊಳು ॥ ೨೦ ॥

ಪುರಹರನವರಪಂಚವದನದಿ । ಧರಣಿಯೊಳಗುದ್ಭವಿಸಿರಾಜಿ ಸಿ। ದುರುಜಗದ್ಗುರು ಪರಮಪಂಚಾಚಾರ್ಯರಿಂ ನಾಡೆ ॥ ತಿರೆಯೊ ಳಗೆಸ್ಥಾಪಿತವದಾಗುತೆ । ಹರುಷದಿಂಕೈವಲ್ಯಸುಖಮಂ । ಭರದಿ ಪೊಂದಲುರಾಜಮಾರ್ಗವದಾಗಿರಾಜಿಸುವ ॥ ೨೧ ॥

ಸಾರತರಶ್ರೀವೀರಶೈವವೆ । ಚಾರುಸರ್ವೋತ್ಕೃಷ್ಟವಾಗಿಯ । ಪಾರಪ್ರತಿಭೆಯೊಳೈದೆಮೆರೆಯುತ್ತಿಹುದು ಜಗದೊಳಗೆ ॥ ಭೂರಿಶಿವ ಜೀವೈಕ್ಯವಿದ್ಯದಿ । ಮೀರಿರಮಿಸುವನರನೆ ಶ್ರೀವರ । ವೀರಶೈವನೆನು ತ್ತನಿಗಮಾಗಮಗಳೊರೆಯುವವು ॥ ೨೨ ॥

ಸರುವಶ್ರೇಷ್ಠವದಾಗಿ ಭುವಿಯೊಳು । ಮೆರೆಯುತಿರ್ಪೀಮತವು
ಬ್ರಹ್ಮನ । ಪರಮಸೃಷ್ಟಿಗೆ ಪೂರ್ವದೊಳೆ ಪರಬೊಮ್ಮನಿಂದೈದೆ ॥
ಇರದೆ ನಿರ್ಮಿತವಾಗಿ ನಿರುತದಿ । ಕರಮೆಸೆಯುವೀಲೋಕದೊಳು
ಸಲೆ । ಸರುವಭೋಗಂಗಳನು ದೇಹಾಂತ್ಯದೊಳು ಕೈವಲ್ಯ ॥೨೩॥

ಪದವಿಯನು ಕೊಡುತಿರ್ಪುದಲ್ಲದೆ । ಸದಮಳಸುಶ್ರುತಿತತಿಪು
ರಾಣ । ತ್ಯಧಿಕಶಿವಶಾಸ್ತ್ರೋಕ್ತಸಿದ್ಧಾಂತಗಳ ಸಾರವನು ॥ ವಿದಿತ
ಶಿವಜೀವೈಕ್ಯಬೋಧಕ । ದದುಭುತಮಹಾಗೂಢತತ್ವಗ । ಳಧಿಕತರ
ದಿಂಗೂಡಿರಾಜಿಪ ಮೋಕ್ಷಮಂದಿರಕೆ ॥ ೨೪ ॥

ನಿರುಪಸೋಪಾನಂಗಳಾಗಿಹ । ಪರಮಗುಣಮಾಚಾರನೀತಿ
ಸು । ಧರುಮವಷ್ಟಾವರಣ ಪಂಚಾಚಾರಮೇಣೆಸೆವ ॥ ಸರಸಷಟು
ಸ್ಥಲಕ್ರಿಯವೆ ಮೊದಲಾ । ದುರುವಿಷಯನಿವಹದೊಳು ಕೂಡು ।
ತ್ತಿರದೆ ಸರ್ವೋತ್ಕೃಷ್ಟವಾಗೆಸೆಯುವುದು ಕ್ಷಿತಿಯೊಳಗೆ ॥ ೨೫ ॥

ವೀರಶೈವನಿಗಮಳಗುರುವರ । ಭೂರಿಹರುಷದೊಳಿತ್ತಲಿಂಗ
ದ । ಧಾರಣವೆನಿಗೆ ಮುಖ್ಯಚಿನ್ಹವದಾಗಿ ರಾಜಿಪುದು ॥ ಸಾರಮೋ
ಕ್ಷವಬಯಸುವವರೀ । ಚಾರುಲಿಂಗವನಿರದೆ ಧರಿಸಿಯೆ । ತೀರಬೇಕೆನು
ತಸಮಶೃತಿತತಿ ಸತತಸಾರುವವು ॥ ೨೬ ॥

ಧರೆಯೊಳಂತರ್ಲಿಂಗಧಾರಣೆ । ಗುರುಸಶಕ್ತನುವಾದೊಡಂ
ನೆರೆ । ಪಿರಿದಶಕ್ತನುವಾದೊಡಂ ಜಗದಾದಿಗುರುವರನು ॥ ಪರಮ
ಸಂಸ್ಕಾರವನುಗೈದುರು । ತರದತೋಷದೊಳಿತ್ತಲಿಂಗವ । ನಿರದೆ ವಕ್ಷ
ಸ್ಥಲದಿ ಧರಿಸಿಯೆತೀರಬೇಕೆನುತೆ ॥ ೨೭ ॥

ಎಸೆಯುತಿಹ ಘನಸಾಮವೇದವು । ಸಸಿನೆಯಿಂ ಘೋಷಿಸುತ
ಲಿರ್ಪುದು । ಮಿಸುಪ ಬ್ರಾಹ್ಮಣನಾದೊಡಂ ಕ್ಷತ್ರಿಯನುವಾದಡೆ
ಯುಂ ॥ ಅಸಮಲಿಂಗವಧರಿಸಿದವನನೆ । ಪಶುಪತಿಯನುಗ್ರಹಿಪನಿ
ಶಯ । ಪುಸಿಯಿದಲ್ಲವೆನುತ್ತಥರ್ವಣವೇದ ಸಾರುವುದು ॥ ೨೮ ॥

ವರಮುಖದಿ ಪರಶಿವನಮಂತ್ರವು । ಪರಮಹೃದಯದಿ ವಿಮಳಧ್ಯಾನವು । ಮೆರೆವಮಸ್ತಕದೊಳಗೆ ವರಶಿವಲಿಂಗಧಾರಣವು ॥ ಪಿರಿದುರಾಜಿಪ ಶಿಖವುಶಿರದೊಳು । ಕರಮೆಸೆವ ರುದ್ರಾಕ್ಷಭಸ್ಮಗ । ಳಿರುವವನೆ ತಿರೆಯೊಳಗೆ ವರಬ್ರಾಹ್ಮಣನುವೆನಿಸುವನು ॥ ೨೯ ॥

ಎನುತೆಪರತರ ನ್ಯಾಯಶಾಸ್ತ್ರವ । ನನುನಯದಿ ವಿರಚಿಸಿದ ಗೌತಮ । ಮುನಿಯು ಮೋದದೊಳೊರೆದಿರುವನಿದು ಪರಮಸಿದ್ಧಾಂತಂ ॥ ಅನುಪಮಿತಲಿಂಗವನು ಧರಿಸುತೆ । ಮಿನುಪಶ್ರೀಸದ್ವೀರಶೈವನ । ಘನತರಬ್ರಾಹ್ಮಣನುವೆಂದರಿಯುವುದು ಜಗದೊಳಗೆ ॥೩೦॥

ವಿತತಹರಿಯುಜಸುರಪ ವರದೇ । ವತರು ಗೌತಮಮುನಿಯೆ ಮೊದಲಾ । ದತುಳರುಷಿವರರೆಲ್ಲಸಂತತಮುತ್ತಮಾಂಗದೊಳು ॥ ನುತಿಸಲಸದಳವಾದಲಿಂಗವ । ನತಿಹಿತದಿ ಧರಿಸಿರ್ಪರೆನುತಲಿ । ಶೃತಿತತಿಗಳತಿಶಯದಿ ಪೊಗಳುತಲಿರ್ಪವನಿರತದಿ ॥ ೩೧ ॥

ಅಂಗಜನಪಿತನಿಂದ್ರನೀಲದ । ಲಿಂಗಮಂ ಪ್ರತಿನಿತ್ಯಪೂಜಿಸಿ । ತುಂಗವಿಷ್ಣುತ್ವವನುಪಡೆದಂ ಪರಮಶೈಲಮಯ ॥ ಲಿಂಗಮಂಪರಮೇಷ್ಠಿಪೂಜಿಸಿ । ಪಿಂಗದೊಲು ಬ್ರಹ್ಮತ್ವಪಡೆದಂ । ಕಂಗೊಳಿಪ ಶಚಿಪತಿಹರಿನ್ಮಣಿಲಿಂಗದರ್ಚನೆಯ ॥ ೩೨ ॥

ಎಸಗಿ ಸುರಪತಿಪದವಪಡೆದಂ । ಮಿಸುಪರವಿವರ ತಾಂಬ್ರಲಿಂಗವ । ನೊಸೆದುಧ್ಯಾನಿಸಿ ಪರಮಸೂರ್ಯತ್ವವನುತಾಂಪಡೆದಂ ॥ಮಿಸುನಿಲಿಂಗವ ಯಕ್ಷಪತಿತಾ । ನಸಮಭಕ್ತಿಯೊಳರ್ಚಿಸುತಘನ । ಜಸದಿ ಧನಪತಿಯಾಗಿ ರಾರಾಜಿಸುತಲಿರುತಿರ್ಪಂ ॥ ೩೩ ॥

ಅಸುರ ಸುರಗಂಧರ್ವಗರುಡರು । ಮೆಸೆವವಿದ್ಯಾಧರರು ಸಿದ್ಧರು । ಪಶುಪತಿಯ ಘನಚಿಹ್ನವೆನಿಸಿರ್ಪಸಮಲಿಂಗವನು ॥ ಸಸಿನೆಯಿಂದಲಿ ಭಜಿಸಿಯೇಮಿಗೆ । ಮಿಸುಪನಿಜಪದವಿಯನು ಪಡೆದುರು । ಯಶದಿಶೋಭಿಸುತಿರ್ಪತಾಲಿಂಗದಪ್ರಭಾವದಲಿ ॥ ೩೪ ॥

ಇಂತೆಸೆವ ಘನತರದಲಿಂಗವ । ಸಂತತದಿಧರಿಸಿರ್ದುಜಗದಿ ಸ।
ಮಂತುರಾಜಿಪ ವೀರಶೈವನ ಜನ್ಮಕೆಣೆಯುಂಟೆ ॥ ಕಂತುವೈರಿಯ
ಭಕ್ತಪರಮ ಮು । ಹಂತವೇದವ್ಯಾಸಮುನಿಗಳು । ಸಂತಸದಿ ಸದ್ವೀರ
ಶೈವದ ಘನತೆಯಂಕೊರ್ತು ॥ ೩೫ ॥

ಇಳೆಯೊಳಗೆಕ್ರಿಮಿಕೀಟಪಕ್ಷಿಗ । ಳೊಳಗೆಪಶುಗಳ ಜನ್ಮವಧಿಕ
ವು । ಗಳೊಳುಜ್ಞಾನಾಧಿಕ್ಯಮಾನವಜನ್ಮವದುಶ್ರೇಷ್ಠಂ ॥ ಅಲಘು
ಮಾನವಜನ್ಮದೊಳು ಸಲೆ । ತೊಳಪಘನಲಿಂಗಾಂಗಿಯಧಿಕಾ । ವಿಳ
ಸಿತಸುಲಿಂಗಾಂಗಿಯೊಳು ಮಹಷಟುಸ್ಥಲಜ್ಞಾನಿ ॥ ೩೬ ॥

ಮೇದಿನಿಯೊಳತಿಶ್ರೇಷ್ಠನಾಗಿಹ । ನೀದಯಾಮಯಮೂರುತಿ
ಗೆಮಿಗಿ । ಲಾದುದೆಸೆವತ್ರಿಭುವನಂಗಳೊಳಿಲ್ಲಮಿದು ಸತ್ಯಂ ॥ ಮೋದ
ದಿಂ ಪೂಜಿಸಿಕೊಳಲು ಮೇ । ಣಾದರದಿವಂದಿಸಿಕೊಳಲ್ಕೀ । ಸಾಧು
ಜಂಗಮಮೂರ್ತಿಯೇಘನ ಯೋಗ್ಯನಾಗೆಸೆವಂ ॥ ೩೭ ॥

ಎಂದುಸ್ಕಂದಮಹಾಪುರಾಣದಿ । ಚೆಂದದಿಂದುಸುರಿರ್ಪುದಲ್ಲದೆ
ಬಂಧುರದಸದ್ವೀರಶೈವ ಮತಕ್ಕೆಸಮಮಾದ ॥ ಸಂದಮತಮದುಸಲೆ
ಪರಿಕಿಸ । ಲ್ಕಿಂದುತ್ರೈಭುವನಂಗಳೊಳುಮಿ । ಲ್ಲೆಂದುಶೈವಾಗಮಗಳವಿ
ರತ ಸಾರುತಿರುತಿಹವು ೩೮ ॥

ಈತೆರದಿಜಗದೊಳಗೆ ಘನವಿ । ಖ್ಯಾತಮಾಗಿಹವೀರಶೈವಸು ।
ಪೂತತತ್ವವನಿರದೆ ತಿಳಿದೇ ಪರಮಪೂಜ್ಯತೆಯಿಂ ॥ ಭೂತಿರುದ್ರಾಕ್ಷಿಗ
ಳತಳೆದುರು । ಭೂತನಾಥನ ಪರಮಕೃಪೆವಡೆ । ದೋತುಮಿಗೆರಾಜಿ
ಸಿದಗಸ್ತ್ಯಮಹರ್ಷಿಗಳು ಮುದದಿಂ ॥ ೩೯ ॥

ಸಾರತರಸದ್ವೀರಶೈವವ । ಧಾರಿಣಿಯೊಳತಿಮುದದಿ ಸ್ಥಾಪಿಸಿ।
ಮೀರಿಜಸವಡೆದುರುಜಗದ್ಗುರು ಪರಮರೇಣುಕರಿಂ ॥ ವೀರಶೈವದ
ದೀಕ್ಷೆಯಂ ಸಲೆ । ಭೂರಿಭಯಭಕ್ತಿಯೊಳುಪೊಂದುತೆ । ಚಾರುಶಿಷ್ಯ
ರುಮಾಗಿಗುರುಪದ ಸೇವೆಯೊಳೆಸತತಂ ॥ ೪೦ ॥

ನಿರತರಾಗೆಸೆಯುತ್ತಲಿರ್ದರು । ಪರಮಗೌತಮವ್ಯಾಸಕಶ್ಯಪ । ವರದಧೀಚಿಶ್ವೇತಕೇತುಪಮನ್ಯುದೂರ್ವಾಸ ॥ ದೊರೆವಡೆದಸಾನಂದ ಮೊದಲಾ । ದುರುಮಹರ್ಷಿಗಳೆಲ್ಲರುಂ ಘನತರದಲಿಂಗಮಹತ್ವವಂ ನೆರೆಯರಿದುಮಿಗೆ ನಲವಿಂ ॥ ೪೧ ॥

ಮಾರಹರಸಮರೂಪರೆನಿಸಿದ । ಚಾರುಪಂಚಾಚಾರ್ಯರುರು ಪಾ । ದಾರವಿಂದವನಾಶ್ರಯಿಸಿ ವರಲಿಂಗಧಾರಣವ ॥ ಭೂರಿಹರುಷ ದಿಪಡೆದು ಮೋಣಾ । ಸಾರಲಿಂಗಾಂಗದ ಸಕೀಲಿನ । ಪಾರಜ್ಞಾನವ ಪೊಂದಿಮೋಕ್ಷವ ಪಡೆದವಿಷಯವದು ॥ ೪೨ ॥

ಪಾಶುಪತತಂತ್ರದೊಳು ಮೇಣ್ವರ । ಕಾಶಿಖಂಡಾದಿಗಳೊಳ್ಪೆದೆ ವಿ । ಶೇಷವಾಗಿಯೆ ವರ್ಣಿತವದಾಗಿರ್ಪುದಲ್ಲದೆಯುಂ ॥ ಈಶಸೃಷ್ಟಿ ಯೊಳಸಮಖ್ಯಾತಿಯ । ಲೇಸಿನಿಂ ಪಡೆದುರುವಿರಾಜಿಸಿ । ದಾಸುಸಾ ಮ್ರಾಟ್ ನಲಕಕುತ್ಸ್ಥಪುರೂರವಾದಿಗಳು ॥ ೪೩ ॥

ಪರಮಲಿಂಗವಧರಿಸಿಯೇ ಘನ । ತರದಮೋಕ್ಷವಪಡೆದರೆನು ತಲಿ । ತಿರೆಯೊಳೆಸೆವಿತಿಹಾಸಮದುನಿರುತದೊಳು ಸಾರುವುದು ॥ ಪಿರಿ ದುತೋಷದಿ ಸ್ಥಿತಿಯಕಾರ್ಯವ । ನೆರೆವಹಿಸಿರಾಜಿಸುವವಿಷ್ಣುವು । ಪರಮರುಷಿಕೇಸರಿಯೆನಿಸಿದುಪಮನ್ಯು ರುಷಿಯಿಂದ ॥ ೪೪ ॥

ಅಸಮಶಿವದೀಕ್ಷೆಯನುಪೊಂದಿಯೆ । ಪಶುಪತಿಯಘನಭಕ್ತ ನಾಗಿರ । ದೆಸೆಯುವನು ಸಂತತದೊಳೆನುತಲಿ ವ್ಯಾಸರುಷಿವರರೆ ॥ ಸಸಿ ನೆಯಿಂದುಸುರಿರ್ಪರಿದು ದಿಟ । ರಸೆಯೊಳಿಂತೆಸೆವಾಮಹಾತ್ಮರೆ । ವೊ ಸೆದುಲಿಂಗವಧರಿಸಿಘನತರ ತತ್ವದಿಂಮೆರೆವ ॥ ೪೫ ॥

ವೀರಶೈವದಪರಮದೀಕ್ಷೆಯ । ಭೂರಿಹರುಷದಿಪೊಂದಿ ನಿರು ತದಿ । ಮೀರಿರಾರಾಜಿಸಿದರೆನಲೀಮತದ ಘನತೆಯನು ॥ ಪೂರವ ರ್ಣಿಸಲಸಮಸಾಸಿರ । ಸಾರತರರಸನೆಗಳ ತಳೆದಾ । ಚಾರುತರಫಣಿರಾ ಜನಿಂಗಳವಲ್ಲವೇಂ ಪೇಳ್ವೆ ॥ ೪೬ ॥

ಪೊಡವಿಯೊಳಗನುಪಮಿತತತ್ವಗ । ಳೊಡನೆಕೂಡುತಲುರು ಪ್ರಭಾವದಿ । ಕಡುಮೆರೆಯುವೀವೀರಶೈವೋತ್ಕೃಷ್ಟಜನ್ಮಕ್ಕೆ ॥ ಬಿಡದೆನಾವ್ ಬಂದಿರಲುಬೇಕಾ । ದಡೆಯದಾವ ಸುಸಾರ್ವಭೌಮನು । ದೃಢದಿಸಿಂದಿನಜನ್ಮದೊಳಗಗಣಿತ ಸುಪುಣ್ಯಗಳಂ ॥ ೪೭ ॥

ನಿಲದೆಗೈದುರು ಧರೆಯನೆಲ್ಲವ । ನಲವಿನಿಂದಾಳುತ್ತವಿಭವದಿ । ನಲಿವನಾಘನಸಾರ್ವಭೌಮನಿಗಿಂತಲುಂ ನಾಡೆ ॥ ಅಲಘುತರ ಪುಣ್ಯಗಳನೆಸಗೀ । ವಿಳಸಿತಸುಮತದೊಳಗೆಜನ್ಮವ । ತಳೆದಿರುವೆವೀಚಕ್ರವರ್ತಿಯ ಪದವಿಯಾದಡದು ॥ ೪೮ ॥

ಧರೆಯೊಳಗಶಾಶ್ವತವು ಕ್ಷಣಭಂ । ಗುರವದಾಗಿಹುದವನುಗೈದಿಹ । ಪರಮಪುಣ್ಯದಫಲವು ತೀರ್ದಬಳಿಕ್ಕವುತ್ತಾವ ॥ ಕಿರುಕುಳದ ಜನ್ಮಕ್ಕೆಬಂದುರು । ದುರಿತಕರ ಭವಚಕ್ರದೊಳುಮಿಗೆ । ತಿರುತಿರುಗಿ ತೊಳಲುತ್ತಲಿರ್ಪನೊ ಹರನೆಬಲ್ಲನದಂ ॥ ೪೯ ॥

ಮೆರೆವನಮ್ಮೀವೀರಶೈವದ । ಪರಮಜನ್ಮವದಾದಡೀವರ । ಧರಣಿತಳದೊಳಗಖಿಲ ಭೋಗಂಗಳನುಮೇಣ್ಕೈದೆ ॥ ಇರದೆದೇಹಾಂತ್ಯದೊಳುಮೋಕ್ಷವ । ನರರೆ! ಕೊಡುವುದೆನುತ್ತೆಶೃತಿಗಳು । ನಿರುತಪಿರಿದುಗ್ಗಡಿಸುತಿರ್ಪವು ನಿಖಿಲಜಗವರಿಯೆ ॥ ೫೦ ॥

ಅಂದಬಳಿಕೆಮ್ಮಯಸುಜನ್ಮವೆ । ಯಿಂದುಘನತರ ಧನ್ಯಧನ್ಯವ । ಸುಂಧರೆಯೊಳತ್ಯುಚ್ಚವಾದೀಮತದೊಳುದ್ಭವಿಸಿ ॥ ಇಂದುಧರನುರುಚರಣಕಮಲವ । ಮುಂದವಿಶ್ವಾಸದೊಳುಮೇಣಾ । ನಂದದೊಳು ಕಾಣದಬಳಿಕ್ಕೀಪರಮಮತದೊಳಗೆ ॥ ೫೧ ॥

ಸಾನುರಾಗದಿ ಜನ್ಮಿಸಿದುದಕ । ದೇನುಸಾರ್ಥಕವಾದವೋಲಾ । ಯ್ತೀನೆಲದಿನಾವುಗಳು ಜನ್ಮಿಸಿದಂದಿನಿಂದಿರದೆ ॥ ಏನುಸುರ್ವೆ ಪರಶಿವನೊಳೈಕ್ಯವ । ತಾನುವಾಗುವವರೆಗು ಪಗಲಿರು । ಳಾನಿರಘನಿರ್ದ್ವಂದ್ವಮೂರುತಿಯಾದ ಶಿಶಿಗಳನ ॥ ೫೨ ॥

ಪರಮಧ್ಯಾನಾಸಕ್ತಿಯಲ್ಲಿಯೆ । ಪಿರಿದುಮಗ್ನರುಮಾಗಿಸರ್ವದ। ಪರಮತರಶಿವಯೋಗದಲ್ಲಿರ್ದಂತ್ಯಕಾಲದೊಳು ॥ ಪುರಹರನವರಚ ರಣಸನ್ನಿಧಿ । ಗಿರದೆಪೋಪಡೆವಾತ್ರಮೀಘನ । ತರದಿರಾಜಿಪ ವೀರ ಶೈವಸುಜನಸ್ಮನೆತ್ತಿದಕೆ ॥ ೫೩ ॥

ಅಸಮಸಾರ್ಥಕಮಪ್ಪುದೀವರ । ವಸುಧೆಯೊಳು ಪ್ರತಿಯೋ ರ್ವನಿದನರಿ । ದೆಸೆವಜನಸ್ಮ ಕೃತಾರ್ಥತೆಯ ಸಲೆಪಡಿಸಿಕೊಳ್ಳುವುದು॥ ರಸೆಯೊಳೀಪರಿಜನಸ್ಮಪೊಂದಿಯು । ಮೊಸೆದು ಸಾರ್ಥಕವೆಸಗಿಕೊಳ ದಿರೆ । ವುಸುರಲೇಂ ಮರ್ಕಟಪಕರದೊಳಗೆಸೆವಮಾಣಿಕ್ಯ ॥ ೫೪ ॥

ವಿದಿತಪಂದೆಯಕರದೆಚಂಪ್ರಾ । ಯುಧವದಿರ್ದಂತಾಗುವುದು ನೀ । ವಿದನರಿದು ನೆರೆವರ್ತಿಸುವುದೆನುತುಸುರಲತಿನಯದಿಂ ॥ ಚದುರ ಭಕ್ತರು ಚರವರರಘನ । ಮಧುರಬೋಧಾಮೃತವನಾಲಿಸಿ । ಮುದ ದಿನುತಿಸುತೆ ಪರಕೆಗೊಳುತಂ ಗೃಹಕೆಗಮಿಸಿದರು ॥ ೫೫ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೋಕ್ಷ। ಕ್ಷರಗಳಲಿ ಷಟ್ಸ್ಥಲಕ್ಷರದ ಘನವಂತೆ ತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು ಕೇಳುವುದು ಪನ್ನೆರಡನೆಯ ಸಂಧಿ ॥ ೫೬ ॥

ಸಂಧಿ ೧೨ ಕ್ಕಂ ಪದ ೬೫೨ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಶ್ರೀ ವಿರೂಪಾಕ್ಷಾಯನಮಃ ॥

# ಹದಿಮೂರನೆಯ ಸಂಧಿ



ಸೂಚನೆ ॥ ಕರಮೆಸೆವಗುಳ್ಯಾಳಗ್ರಾಮದೊ ।
ಳಿರದೆಕೆಂಜುಗೆಗಳಮಹತ್ವವ ।
ಭರದಿತೋರುತ ಭಕ್ತಿಯೋಗವನೊರೆದ ಭಕ್ತರಿಗೆ ॥

ದೇವನದಿಯಂಬಾಲಚಂದ್ರನ । ನಾವಗಂ ಮಕುಟದೊಳುತಳೆದಿಹ । ಪಾವನಾತ್ಮಕಿಶಿವೆಯಕೊಡೆಯೊಳು ತೋಷದಿಂದಾಂತ॥ ಪಾವಕಾಕ್ಷನ ಭವನಭರ್ಗನ । ಭಾವಜಾಂತಕನಸಮಸೋಮನ । ಪಾವನದಪದಕಮಲಗಳಭಜಿಸುವೆನು ಮುದದಿಂದಂ ॥ ೧ ॥

ಧರೆಯೊಳಗೆ ಗುಳ್ಯಾಳಗ್ರಾಮದಿ । ಮೆರೆವ ಪರಮಶಿವಪ್ಪಗೌಡರು । ಹರುಷದಿಂತವೆತಮ್ಮಗೃಹದೊಳು ಪ್ರತಿವರುಷನಡೆವ॥ಪರಮಪ್ರಮಥಾರಾಧನೆಗೆಗುರು। ತರದಿರಾಜಿಪ ಬಸವದೇವನ । ಸಿರಿದೆಸೆವಸದುಭಕುತಿಯೊಳು ಬರಮಾಡಿಕೊಂಡಿರಲು ॥ ೨ ॥

ದ್ಯುಮಣಿಪೂರ್ವದೊಳುದಯವಾಗುವ । ಸಮಯದೊಳಗಾಗಿಯೆಸುಮೋದದೊ। ಳಮಿತಸಜ್ಜಕದುಂಡೆಗಳಸಿದ್ಧವನುಗೊಳಿಸೈದೆ ॥ವಿಮಳಕರಮಾದೊಂದುಕೋಣೆಯೊ ।ಳ್ಕ್ರಮದಿಮಡುಗುತ್ತವನುಮುಚ್ಚಿತೆ । ಪ್ರಮುದದಿಂಸಲೆಪಾಕವೆಲ್ಲವ ಸಿದ್ಧವನುಗೈಯ್ಯೆ ॥ ೩ ॥

ಅಸಮಜಂಗಮಪಾದಪೂಜೆಯು । ನಸುಸಮಯದೊಳುಪೂರ್ಣವಾಗಲು । ಮಿಸುಪಮಾಹೇಶ್ವರರಪಙ್ತಿಯು ಸಾಗಲಾಗ್ಯೆದೆ ॥ ಸಸಿನೆಯಿಂದೆಡೆಮಾಡಲೋಸುಗ । ಮೆಸೆವಸಜ್ಜಕದುಂಡೆಗಳ ಮನ। ಮೊಸೆದುಬುಟ್ಟಿಗಳಲ್ಲಿತುಂಬಲುಪೋಗಿಮತ್ತಾಗ ॥ ೪ ॥

ಮೇಲುಮುಸುಕನು ತೆಗೆದುನೋಡಲು । ಸಾಲುಸಾಲಾಗರಿವುದ ಲ್ಲದೆ । ಮೇಲೆನಿಪಪ್ರತಿಯೊಂದುಸಜ್ಜುಕದುಂಡೆ ಕಾಣದೊಲು ॥ ಕೀಳೆ ನಿಪಕೆಂಜುಗೆಗಳವುಬಹು । ಮೇಳವಿಸಿಮುತ್ತಿರಲು ಜಗದೊಳು । ಶೂಲಿಸಮರೆಂದೆನಿಸಿಮೆರೆಯುವ ಬಸವದೇವನಿಗೆ ॥ ೫ ॥

ಬೇಗದಿಂದೀವಿಷಯವರುಹ । ಲ್ಕಾಗಶ್ರೀಗಳುಕೋಣೆಯೊಳಗ ಕಿ । ರಾಗದಿಂ ತವೆಪೋಗಿಭಸ್ಮವತೆಗೆದುಕೊಂಡೈದೆ ॥ ನಾಗಭೂಷಣ ನನ್ನುಸ್ಮರಿಸುತ । ಕೈಗೆಭಸ್ಮವಧರಿಸಿಕೊಂಡನು । ರಾಗದಿಂದಂ ಬಸವ ಬಸವನೆನುತ್ತೆ ತೀವ್ರದೊಳು ॥ ೬ ॥

ಪರಮತರದುಂಡೆಗಳಮೇಲ್ಗಡೆ । ಕರವನೆಳೆದಾಕ್ಷಣವೆತಕ್ಷಣ । ಸಿರಿದುಮುತ್ತಿದಕೆಂಜುಗೆಗಳವು ಮಾಯವಾಗಲ್ಕೆ ॥ ನೆರೆದಜನಗಳು ನೋಡಿಸಿರಿದ । ಚ್ಚರಿಯಪೊಂದುತಹರಹರಾ ಇದು । ಪರಮಕೌತು ಕಮೆನಿಪಮಹಿಮವೆನುತ್ತಪೊಗಳುತ್ತೆ ॥ ೭ ॥

ನೆರೆದಭಕ್ತರುಬಸವಯೋಗಿಯ । ವರಮುಖದಿಘನಭಕ್ತಿಯೋ ಗದ । ಪರಮಮಹಿಮವನರಿದುಕೊಳಬೇಕೆನುತೆ ಬಗೆದಾಗ ॥ ಹರನ ಸಮರೂಪಿಗಳೆಯಮಗೀ । ಗೊರೆದುಘನತರಭಕ್ತಿಯೋಗದ । ಪರಮ ಸಾರವನಾಡೆಧನ್ಯರಗೈಯ್ಯುದೆಂದೆನುತೆ ॥ ೮ ॥

ಅತಿವಿನಯದಿಂಬೇಡಿಕೊಳಲಾ । ಗತುಳಚರಬಸವಾರ್ಯಹರು ಷದಿ । ವಿತತಭಕ್ತರುಮೋದದಿಂ ಬಿನ್ನೈಸಿಕೊಂಡುದುದು ॥ ಓತವಿಷ ಯವಿರುತಿರ್ಪುದೆನುತುರು । ಶಿತಿಗಳನಸ್ಮರಿಸುತ್ತಭಕ್ತರಿ । ಗತಿಶಯದ ಹರುಷದೊಳುವಿವರದಿ ಪೇಳತೊಡಗಿದನು ॥ ೯ ॥

ಪರಶಿವನುನಿರುಮಿಸಿದಲೋಕದಿ । ಸರುವಪ್ರಜೆಗಳುಕ್ಲೇಶವಿ ಲ್ಲದ । ನಿರುತಪರಮಾನಂದಪ್ರಾಪ್ತಿಯನಿರದೆ ಬಯಸುವರು ॥ ಧರೆ ಯೊಳಾದಡೆನಿತ್ಯಸುಖವನು । ದೊರಕಿಸುವಯತ್ನವನು ಗೈಯದೆ । ನಿರುತನನ್ನದು ನಾನುಯೆಂಬುವಹಟವಪಿಡಿಯುತ್ತೆ ॥ ೧೦ ॥

ಆಸೆಕೋಪಂ ಜಿಪುಣತನಮದ । ಘಾಶಿಗೆಡಿಸುವಸೂಯೆಮೊದ
ಲಾ । ದಾಸರುವರಾಕ್ಷಸಿಗುಣಂಗಳ ಬಲೆಗೆಬೀಳುತ್ತೆ ॥ ಆಶಪಾಶದಿ
ಜನನಮರಣದ । ಕ್ಲೇಶಗಳನನುಭವಿಸುತಲಿಮಿಗೆ । ಲೇಸುಮಿಲ್ಲದ
ಬಗೆಬಗೆಯಮಿಗೆ ಕರ್ಮಗಳನೆಸಗಿ ॥೧೧॥

ಅವುಗಳಿಂನೆರೆಬರುವ ಫಲಗಳ । ಜವದೊಳನುಭವಿಸುತ್ತಲಾ
ಫಲ । ಭುವನದೊಳುಹಿತವಾದರತಿಹಿಗ್ಗುತ್ತ ಸಂತಸದಿ ॥ ಕವಿಯೆ
ಮಿಗೆಕಷ್ಟಗಳುತಗ್ಗುತ । ಭವದಮಿಗೆಸುಖದುಃಖ ದ್ವಂದ್ವದೊ । ಳವಿ
ರತಂರಾಟೆಯೊಳುಸಿಲ್ಕಿದ ನರನಪರಿಯಂತೆ ॥೧೨॥

ತೊಳಲುತಿರ್ಪುದುಮಾತ್ರಭುವಿಯೊಳು । ನಿಲದೆಸಡೆದಿರುವುದ
ನುಕಂಡೈ । ದಲಘುಕರುಣಾಮಯರು ಭಕ್ತಾಚಾರ್ಯಶ್ರೇಷ್ಠರುಗಳ್॥
ಮಲಮಲನೆಮರುಗುತ್ತಲವಿರತ । ಮಿಳೆಯೊಳೆಲ್ಲಾವಿಧದಕೇಡಿನ ।
ಬಳಗಕತಿಶಯಮೂಲಕಾರಣವಾಗಿ ನಿಂತಿರ್ಪ ॥೧೩॥

ನಾನುನನ್ನದುಯೆಂಬ ಹಟವನು । ಹೀನತನದಿಂಕಂಡು ಭರ
ದಿಂ । ದೀನೆಲದೊಳಿದನಿರದೆದೃಢದಿಂ ಪೋಗಲಾಡಿಸಲು ॥ ಆನತಾ
ಮರಭೂಜಭರ್ಗನ । ನೂನಭಕ್ತಿಯಪೊರತುಭುವಿಯೊಳು । ಕಾಣಿಸ
ದುಮತ್ತೊಂದುಸಾಧನಮೆಂದುಬಹುದಿನದಿಂ ॥೧೪॥

ಮೆರೆವಶಾಸ್ತ್ರಾರ್ಥಂಗಳಿಂ ಸಲೆ । ಪರಮತರದಾತ್ಮಾನುಭವ
ದಿಂ । ಪಿರಿದುಶ್ರದ್ಧೆಯವಹಿಸಿಭಕ್ತಿಯತತ್ವಮಂ ಜಗಕೆ ॥ ನಿರುತಬೀ
ರಿದ ತತ್ವವನೆನಾಂ । ಹರುಷದಿಂದೀಗೊರೆವೆ ಸಲೆಮನ । ವಿರಿಸಿಕೇಳು
ತ್ತದರಪರಿಯೊಳು ಚರಿಪುದಿರದಖಿಳರ್ ॥೧೫॥

ಪರಮಶಿವನೊಳುಪರಮಪ್ರೇಮವ । ನಿರದೆಮಾಡುವುದದುವೆ
ಭಕ್ತಿಯ । ಗುರುತುಮೆನುತಲಿಸಕಲನಿಗಮಾಗಮಗಳೊರೆಯುವವು ॥
ಧರೆಯೊಳೆಲ್ಲಾಜನರಿಗನಿಶಂ । ಪಿರಿದೆನಿಪಫಲವದುವೆಭಕ್ತಿಯ । ಹಿರಿ
ಮೆಯಿಂದಲೆದೊರೆವುದದುನಿಶ್ಚಯದಿ ಪರಿಕಿಸಲು ॥೧೬॥

ಆಮಹಾಫಲವಾವುದೆಂದಡೆ । ಯೀಮಹಿಯೊಳಿರ್ಪಖಿಲಕ್ಲೇಶಕೆ । ಭೂಮಹಿತಕಾರಣವದೆನಿಪಹಂಕಾರವನುಬೇಗ ॥ ಭೀಮತರದ ಪ್ರಯತ್ನದಿಂನೆರೆ । ನಾಮನಿರ್ಮೂಲವನುಗೈಯುವು। ದಾಮಹಂಕಾರವದುಭಕ್ತಿಯಶಕ್ತಿಯಿಂದ್ಯೆದೆ ॥ ೧೭ ॥

ನಾಶಗೊಳಿಸಲುಸಾಧ್ಯಮಲ್ಲದೆ । ಯೀಶಸೃಷ್ಟಿಯೊಳಿದನುಬಿಟ್ಟಡೆ । ನಾಶಗೈಯುವಸಾಧನವು ಮತ್ತೊಂದುಬೇರಿಲ್ಲಂ ॥ ಆಸಕಲಶಾಸ್ತ್ರಗಳುಮಿಡರೋಲ್ । ಘೋಷಿಸುವಕಾರಣದಿಭಕ್ತಿಯ । ಭಾಸುರದತತ್ವಗಳಘನತೆಯು ಶ್ರೇಷ್ಠಮಾಗಿಹುದು ॥ ೧೮ ॥

ಪರಮಭಕ್ತಿಯುಪಡೆದಪುರುಷನು । ಧರೆಯೊಳಗೆವರಸಿದ್ಧಮೇಣ್ಣಿ । ಠ್ಮರಣಿಯುರುತರತೃಪ್ತನಾಗುವುದಲ್ಲದೆಯುಮತ್ತಂ ॥ ತಿರೆಯೊಳಿಲ್ಲಾಯೋಗಿಗಳಿಗಿಂ । ಪಿರಿದುಪ್ರಭೆಯನು ಪಡೆವನಾಪುರ । ಹರನಪರಮಪ್ರಸನ್ನತೆಯಪೊಂದುತ್ತದೃಢದಿಂದಂ ॥ ೧೯ ॥

ಆವುದನುಧರೆಯೊಳಗೆ ಬಯಸದೆ । ಯಾವುದಕುದುಃಖವನುಗೈಯದೆ । ಯಾವುದನುಹಗೆಯಿಂದಕಾಣದೆ ಸತ್ಯವಂಬಿಡದೆ ॥ ಯಾವುದರೊಳತಿಪ್ರೀತಿಮಾಡದೆ । ಯಾವಕಾರ್ಯದಿಚಿತ್ತವಿರಿಸದೆ ।ಯಾವಗಂ ಮೈಮರೆದು ಸಲೆಯಾತ್ಮನೊಳಗಾಡುವನು ॥ ೨೦ ॥

ಧರೆಯೊಳಾವನು ಪುರಹರನಘನ । ತರದಪ್ರೇಮದಿಕಾಂಬನಾವರ । ನರನುನಿಲದವನೊಳಗೆಯಿಹನವನಿಂದ ಬೇರಿಲ್ಲಂ ॥ ನಿರುತದೊಳುಸಂಸಾರದೊಳಗಿರು । ತಿರುವನರರುಗಳೆಲ್ಲ ಪರಿಕಿಸ । ಲಿರದೆವಂದಿಲ್ಲೊಂದುವಸ್ತುವನಾಶ್ರಯಿಸಿಮೆರೆವರ್ ॥ ೨೧ ॥

ಕೆಲರುತಮಗತಿಕ್ಲೇಶಬಂದೊಡೆ । ನಿಲದೆಧನವದು ಪೊರೆವುದೆನುತಲಿ । ಕೆಲರುಹೊಲಮನೆ ಕೆಲರುವಿದ್ಯಾಬುದ್ಧಿಚಾತುರ್ಯ ॥ ಕೆಲರುಪುತ್ರರಕೆಲರುಮಿತ್ರರ । ಕೆಲರುಹಣಗಾರರಸುಧೊರೆಗಳ । ಕೆಲರುವರ ಶ್ರೀಸಾರ್ವಭೌಮರ ಕೆಲರುಧರ್ಮವನು ॥ ೨೨ ॥

ನಂಬಿಕೊಂಡಿರುತಿಹರುಭಕ್ತನು । ಕುಂಭಿನಿಯೊಳಾವುದನುನಂಬ
ದೆ । ಶಂಭುವೇತನಗೆಲ್ಲವೆನುತಲಿ ನಂಬಿಹನುಮತ್ತಂ ॥ ನಂಬುವದು
ಶಂಭುವಿನ ದೃಢದಿಂ । ನಂಬುವುದುಶಂಭುವಿನರೂಪಿಗ । ಳೆಂಬ ನಿಗ
ಮಾಗಮದವಚನವಪಾಲಿಸುತ್ತಿಹನು ॥ ೨೩ ॥

ಧರಣಿಯೊಳುವರರಾಜಲಯಹಠ । ಮೆರೆವಜ್ಞಾನಸುಕರ್ಮ
ಯೋಗಗ । ಳಿರದವುಗಳೊಂದೊಂದುಬಗೆಯ ಸ್ವಭಾವದವರಿಂಗೆ॥ನೆರೆ
ರುಚಿಸುತಿರುತಿರ್ಪುವೆಂತೆನೆ । ಪರಮತರದಾಜ್ಞಾನಯೋಗವ । ಭರದಿ
ಗ್ರಹಿಸಲುಮನದಿ ಪೂರ್ಣವಿಚಾರಶಕ್ತಿಯದು ॥ ೨೪ ॥

ಇರಲುಬೇಕಾಗುವುದುರಾಜಿಪ । ಕರುಮಯೋಗವನೆಸಗಲವ
ನಿಗೆ । ಪಿರಿದುವುಪಕರಣಗಳುಮೇಣ್ವರ ದೇಶಕಾಲಗಳು ॥ ದೊರೆ
ಯಬೇಕಾಗುವುದುಮಿನ್ನುಂ । ಪರಮತರದಾರಾಜಯೋಗವ । ಕರ
ಮೆಸಗಲುರುತರದ ಯಮನಿಯಮಾದಿಗಳವಶ್ಯಂ ॥ ೨೫ ॥

ಪಾವನದಘನಭಕ್ತಿ ಯೋಗಕೆ । ಯೀವಸುಧೆಯೊಳಗೇನುಬೇ
ಕೆ । ಲ್ಲಾವವಿಧದಿಂಬುದ್ಧಿಯಿಲ್ಲದಮೂರ್ಖಗಾದಡು ಮೇಣ್ ॥ ಆವ
ತಾಣದೊಳಾದಡುಂ ಸಲೆ । ಯಾವಕಾಲಕ್ಕಾದೊಡಂ ತವೆ । ಯಾವ
ಸಾಧನವಿಲ್ಲದಿಹಕಡುಬಡವಗಾದಡು ಕೇಳ್ ॥ ೨೬ ॥

ಪರಮತರದಾಭಕ್ತಿಯೋಗವ । ದಿರದೆಯನುಕೂಲಿಸುವುದದ
ರಿಂ । ಧರೆಯೊಳಗೆಪಶುವರ್ಗದೊಳುಶೇರಿರ್ದು ಮದಿಸಿರ್ದ ॥ ಕರಮೆ
ಸೆವಗಜಮೊಂದುಭಕ್ತಿಯೊ । ಳ್ಪರಮುಮುಕ್ತಿಯಪಡೆಯಿತೆನುತಲಿ ।
ಪೊರೆವುದನಿಶಗಜೇಂದ್ರಮೋಕ್ಷವದೆಂಬ ಗ್ರಂಥವದು ॥ ೨೭ ॥

ಈವಿಧದವರಭಕ್ತಿಮನುಜಗೆ । ಯೀವಸುಧೆಯೊಳುಸಾಧ್ಯವಾ
ಗದೆ ? । ಭಾವಿಸಲುವರಭಕ್ತಿಯೋಗದ ಸಾಧನವುಮಾತ್ರಂ ॥ ಆವ
ಮನುಜನಿಗಾದೊಡಂ ಸಲೆ । ಶಿವಿದಾನಂದವನುಕೊಡುವುದು ।
ಭಾವಜಾಂತಕನಿದರಪೊರತಿನ್ನಾವುದಕ್ಕೊಲಿಯಂ ॥ ೨೮ ॥

ಭಕ್ತಿಯಿಲ್ಲದೆವೇದಶ್ರವಣಾ । ಸಕ್ತಿಯಿಂಸಲೆಗೈಯ್ಯೊಡಂಘನ। ಶಕ್ತಿಯಿಂತಪದಾನಯಜ್ಞಾದಿಗಳನೆಸಗಿದೊಡಂ ॥ ಮುಕ್ತಿಯದು ದು ಸ್ಸಾಧ್ಯಮೆನುತಲಿ । ವ್ಯಕ್ತವಾಗಿಯೆನುಡಿದಿರುವಹರ । ಸುಕ್ತಿಗಳನಾ ಗಮಗಳೊಳುಸಲೆ ನೋಡಿತಿಳಿಯುವುದು ॥ ೨೯ ॥

ಪರಮಭಕ್ತಿಯುಶ್ರವಣಕೀರ್ತನ । ಸ್ಮರಣಪದಸೇವನಸುವಂದ ನ । ಪರತರರ್ಚನದಾಸ್ಯಸಖ್ಯಾತ್ಮಾರ್ಪಣಂ ಎನುತೆ ॥ ಅರಿಯೆನವ ವಿಧವಾಗಿರಾಜಿಸು । ತಿರುವುದಿದನುಂ ದೃಢದಿನಿರುತದಿ । ತಿರೆಯೊಳ ತ್ಯಾನಂದದೊಳಗಾಚರಿಸುವನೆ ಭಕ್ತಂ ॥ ೩೦ ॥

ಉಡುಸಮೂಹದಿಚಂದ್ರಮನುಘನ । ಮಡುಸಮೂಹದಿಸಾಗ ವುವರ ।ಗಿಡಸಮೂಹದಿಕಲ್ಪತರವದು ಶ್ರೇಷ್ಠಮಿರ್ಪಂತೆ ॥ ಪೊಡವಿ ಯೊಳುಪರಿಕಿಸಲು ನರರೊಳು । ಮೃಡನಭಕ್ತನೆಶ್ರೇಷ್ಠನೆನುತಲಿ । ಯೆಡೆಬಿಡದೆಶೃತಿತತಿಗಳತಿ ವುಗ್ಗಡಿಸುತಿರುತಿಹವು ॥ ೩೧ ॥

ಗಿರಿಯೊಳಗೆಸುರಗಿರಿಯದಧಿಕವು । ಕರಿಯೊಳೈರಾವತವದಧಿಕ ವು । ಹರಿಯಜಾದಿಗಳೊಳಗೆಪರತರ ಹರನೆಮಿಗೆಯಧಿಕಂ ॥ ಧರಣಿ ಯೊಳುಜನಿಸಿರ್ಪನರರೊಳು । ನಿರುತಶಿವಮಯನಾಗಿಮೆರೆಯುವ । ಹರನಭಕ್ತನೆಯಧಿಕವಿದುಪುಸಿಯಲ್ಲ ಭೂತಲದಿ ॥ ೩೨ ॥

ಭಕ್ತಭವವನದಾವಪರತರ । ಭಕ್ತಭವತಿಮಿರಾರ್ಕಮೇಣ್ವರ। ಭಕ್ತಭವಘನ ಶರಧಿಬಡಬಾನಲನುತಾನಕ್ಕುಂ ॥ ಭಕ್ತವರಪರತತ್ವ ಘನತರ । ಭಕ್ತತ್ರೈಮಲರಹಿತ ವರಶಿವ । ಭಕ್ತತ್ರೈಗುಣರಹಿತಮೇಣ್ ಷಡುಸಪ್ತದಶದೂರಂ ॥ ೩೩ ॥

ಭಕ್ತಿಯಿಂದಲೆ ತಿರೆಯೊಳಗೆಘನ । ಮುಕ್ತಿಗೌರವದೊರೆವುದವಿ ರತ । ಭಕ್ತಿಯಿಂಮಮಕಾರಮಾಯಾ ಪಾಶತೊಲಗುವವು ॥ ಭಕ್ತಿ ಯನೆಮಾಡುತ್ತಪರತರ । ಮುಕ್ತಿಯನುಪಡೆದಿರ್ಪಶರಣರ । ಯುಕ್ತ ಕಥೆಗಳಪೇಳುವೆನು ಮನಮೊಲಿದುಲಾಲಿಪುದು ॥ ೩೪ ॥

ಅಂಬುಜಾಸ್ತ್ರನರತಿಯೊಳಗೆನೆರೆ । ಯಂಬುಜಾನನೆಪರವೆನಾಚಿಯು । ಯೆಂಬಸತಿಯೊಡನಿರ್ದುಕುಚವಂಕಂಡು ವರಲಿಂಗ ॥ ಎಂಬಘನವಿಶ್ವಾಸದಿಂ ಸಲೆ । ಸಂಭ್ರಮದಿಪೂಜಿಸಲು ಸೌಂದರ । ನಂಬಿಗೊಲಿದಾಕುಚದಿಮೂಡುತೆ ನಿಜಪದವನಿತ್ತಂ ॥ ೩೫ ॥

ವಸುಮತಿಯೊಳತಿಮುಗ್ಧನಾಗಿ । ರ್ದಸೆದಶ್ರೀವರ ರುದ್ರಪಶುಪತಿ । ಯಸಮನಯನನವಿಷದ ಧಾರಣೆಲೀಲೆಯನುಕೇಳಿ ॥ ಅಸವುದುಃಖದೊಳಸುವತ್ಯಜಿಸ । ಲ್ಕಸವಸದೊಳುಜ್ಜುಗಿಸೆ ಹರನುನ । ಮೊಸೆದುನ್ಮೈದೋರುತ್ತಲಂಕದಿ ಕುಳಿಸಿಕೊಂಡಿರ್ಪಂ ॥ ೩೬ ॥

ಇಳೆಯೊಳಗೆಯಿಳೆಯೂಂಡವೂರನು । ಬಲುಭಕುತಿಯನುಗ್ಗೈದುಘನಶಿರಿ । ಕಳೆದುಕೊಂಡುರುಬಡತನದೊಳಿರಲೊಂದುದಿನಹರನು॥ ವಿಳಸಿತದನಿಜರೂಪವನ್ನುಳಿ । ದಲಘುತರಮಳೆಯೊಳಗೆ ನೆನೆಯುತೆ। ನಿಲಯಕಿರದಾಗಮಿಸಿಬಲುಹಸಿದಿರುವೆನೆಂದೆನಲು ॥ ೩೭ ॥

ಪೊಲದೊಳಗೆಪೋಗೈದೆಚಲ್ಲಿದ । ಕಳವೆಬೀಜವನಾಯ್ದುಕೊಂಡಂ । ಬಲಿಯಮೂಡುತ್ತೈದೆಕುಡಿಸುತೆ ಮನೆಯಗಳಗಳನು ॥ ಘಳಿಲನೇಬಿಚ್ಚಿರದೆಸುಟ್ಟುರು । ಚಳಿಯಕಳೆಯಲುಹರನುಮುದದಿಂ। ದೊಲಿದುಸಕುಟುಂಬವನು ಕೈಲಾಸಕ್ಕೆಕರದೊಯ್ದಂ ॥ ೩೮ ॥

ಶೋಳಪಪಗಲ್ತೊಣೆಯೂಂಡತ್ರಿಣಯನ । ವಿಳಸಿತದಮಜ್ಜನದಮೀಸಲ । ಜಲಕೆದಿನದಿನಕೊಂದುನೂತನ ಕೂಪವನುತೆಗಿಸಿ ॥ ನಿಲಯದೊಳಗಿರ್ದೆಲ್ಲಧನವದು । ನಿಲದೆಸವೆಯಲುಮನವುಮಾತ್ರಂ । ಮಲಹರನಭಕ್ತಿಯೊಳಗೊಂದೇತೆರವಿರಲು ಮೊದಲೋಲ್ ॥ ೩೯ ॥

ವನುತೆತಾನುಂವರತೆಯನುತಗಿ । ದನಿಶನಡೆಸುತ್ತಿರಲನಿತರೊಳ್ ಘನತರದಬೇಸಿಗೆಯುಘನಮಾಗುತ್ತಬಾರಲ್ಕೆ ॥ ದಿನದಿನಕೆವರತೆಗಳುಬತ್ತುತೆ । ಕೊನೆಗೆಹನಿನೀರದುವೆ ದೊರೆಯದೆ । ಮುನಿಯುತಿರೆಜೀವಕ್ಕೆಶಿವನೊಲಿದಿತ್ತಗಣಪದವ ॥ ೪೦ ॥

ನಂದಿವಾಹನಭಕ್ತಘನನಮಿ। ನಂದಿಪ್ರತಿದಿನಮೂರುಪೊಳ್ತಂ। ಇಂದುಧರನಂಪೂಜಿಪೊಂದುರು ನೇಮದೊಳಗಿರಲು ॥ ಒಂದುದಿನ ಮಳೆಗಾಲದೊಳುಮಳೆ। ಬಂದುಭೂಮಿಯು ಕೆಸರಧಾಗ। ಲ್ಕಂಧ ಕಾರದೊಳಾಗಮುಪ್ಪುರಹರನ ವರಗುಡಿಗೆ ॥ ೪೧ ॥

ಬಂದುಸಲೆಭಕ್ತಿಯೊಳುಪೂಜಿಸಿ। ವಂದಿಸುತೆಮನೆಗೆಂದುಬಪ್ಪೆಡೆ। ಯಂಧಕಾರದಿದಾರಿಗಾಣದೆ ಮುಗ್ಗರಿಸಿಬೀಳ್ವ ॥ ನಂದಿಗಮನನೆ ಪೊರೆಯೆನಲುಪುಮದ। ದಿಂದಲಾಕ್ಷಣಬಂದು ಕೈಪಿಡಿ। ದಂದುಮೆಚ್ಚುತೆಪ್ರಮಥವೃಂದಕ್ಕೊಡೆಯನನು ಗೈಯ್ದಂ ॥ ೪೨ ॥

ಇಂತುಭಕ್ತಿಯನಾಚರಿಸಿಸಲೆ। ಕಂತುವೈರಿಯಕೃಪೆಯವಡೆದನಿ। ತಾಂತಭಕ್ತರಕಥೆಗಳೆನಿತೋ ಇನ್ನುಭೂತಲದೊಳ್ ॥ ಕಾಂತಿಮಯವಾಗೆಸೆಯುತಿರ್ಪವು। ಸಂತತದಿಕಿಂಕರತೆಪೊಂದಿದ। ಶಾಂತಮನುಜನುಶಂಕರನೆತಾನಾಗಿಮೆರೆಯುವನು ॥ ೪೩ ॥

ಧರೆಯೊಳೆಲ್ಲಾಯೋಗಗಳಿಗುಂ। ವರಶಿಖಾಮಣಿಯೆನಿಸಿ ರಾಜಿಸು। ತಿರುವಕತದಿಂಭಕ್ತಿಶೇವಗರೀಯುಸೀಎನುವ ॥ ಪರಮವೇದದವಾಕ್ಯವನುನೀವ್। ಪಿರಿದುವಿಶ್ವಾಸದೊಳುನಂಬುತೆ। ನಿರುತಭಕ್ತಿಯನಾಚರಿಸಿಕಡುಧನ್ಯರಾಗುವುದು ॥ ೪೪ ॥

ಇಂತುಬಗೆಬಗೆಯಿಂದಪೇಳಲು। ಸಂತಸದೊಳಾಲಿಸುತ ಭಕ್ತರು। ಕಂತುಹರನಪರಾವತಾರನ ಶಾಂತಚರವರನ ॥ ಚಿಂತೆಯಳಿದಭಿವಂದಿಸುತ್ತಲ। ನಂತವಿಧದಿಂನುತಿಸುತಲಿ ನಿ। ಮ್ಮಂತೆಸುಖಬೋಧೆಯನುಮಾಡುವರಾರುಜಗದೊಳಗೆ ॥ ೪೫ ॥

ನಿಮ್ಮವಚನವಕೇಳಿದುದರಿಂ। ಹಮ್ಮುಬಿಮ್ಮುಗಳನ್ನುತೊರೆಯುತ। ನೆಮ್ಮಿಪರಮಾತ್ಮನನುಸುಖದೊಳಗಿರುವೆವವಿರತದಿ ॥ ಎಮ್ಮಪೂರ್ವದಕರ್ಮವಳಿಯಿತು। ಸಮ್ಮತವುಮನಕಾಯ್ತೆನುತ್ತಲಿ। ಸಮ್ಮದದಿಭಕ್ತಿಯೊಳುಪರಕೆಯ ಪಡೆದುಗಮಿಸಿದರು ॥ ೪೬ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ।
ಕ್ಷರಗಳಲಿ ಷಟ್ಸಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು
ಕೇಳುವುದು ಪದಿಮೂರನೆಯ ಸಂಧಿ ॥೪೭॥

ಚಾರುನವರತ್ನಮಯ ಕಂಕಣವಿಭೂಷಿತೆ ಕಳಾವತಿ ಸಹಸ್ರದಳಪದ್ಮನಿಲ
ಯಾಢ್ಯೆ । ಘೋರತರದೋಷ ಕುಲವರ್ಜಿತೆ ಮಹಾಪ್ರಳಯಸಾಕ್ಷಿಣಿ ಜಪಾಸುಮ
ಸಮಾನಮೃದುಗಾತ್ರೆ ॥ ಮೇರುಗಿರಿಸನ್ನಿಲಯೆ ಪಾಶಧರೆ ವಿಪ್ರನುತಪಾದ ಸರಸೀ
ರುಹೆ ಕೃತಾಂತ ಮದನಾಶೆ । ಗೌರಿಧನಧಾನ್ಯಸುಖವರ್ಧನಿ ನಿರಂತರ ಮೃಡಾಣಿ
ಸಲಹೆನ್ನ ನೆಲೆಮಾತೆ ಮಹದೇವಿ ॥ ೪೮ ॥

卐

ಸಂಧಿ ೧೩ ಕ್ಕಂ ಪದ ೭೪೦ ಕ್ಕಂ ಮಂಗಲಂ
ಮಹಾ ಶ್ರೀ. ಶ್ರೀ.



|| ಶ್ರೀ ಓಂಕಾರನಾಥಾಯನಮಃ ||



# ಹದಿನಾಲ್ಕನೆಯ ಸಂಧಿ



ಸೂಚನೆ || ಮೆರೆವವೆಂಕಟಪುರದೊಳುರುಗದ |
ಪರಮಮಹಿಮವತೋರಿ ಭಕ್ತರಿ |
ಗೊರೆದ ಸತ್ಯವಹಿಂಸೆತತ್ವಗಳಧಿಕ ವಿವರದೊಳು ||

ಘುಳುಘುಳುದ್ಘುಳು ಘುಳುಘುಳುದ್ಘುಳು | ಧಿಳಿಧಿಳೀಧಿಳಿರೆಂದು ಮೊರೆವುತೆ | ಯಿಳಿದುಬರುತಿಹದೇವಗಂಗೆಯ ಶಿರದೊಳಾಂತಭವಾ|| ಕುಳಿರುವೆಟ್ಟನಸುಪರಿಯುಸು ಸಲೆ | ಕೊಳಗುವರ್ಧಾಂಗದೊಳು ತಾಳ್ದ ನೆ | ತಳುವದೆನ್ನಸುಸಲಹುನಿನ್ನಯ ಚರಣನಂಬಿರುವೆ ||೧||

ಒಂದುದಿನಚರಬಸವದೇವನು | ಸಂದಪ್ಯಾಪಾರಾರ್ಥವಾಗಿ ವ | ಸುಂಧರೆಯೊಳತಿರಾಜಿಸುತ್ತಿಹವೆಂಕಟಾಪುರಕೆ || ಚಂದದಿಂ ಚಿ ತ್ರೈಸಿಪೆಸರಾ | ದಿಂದುವೆರಾಳಿಯ ಭಕ್ತನೋರ್ವನ | ಮಂದಿರದಿನಲ ವಿಂದವಾಸಿಸುತೆಸೆಯುತಿರುತಿರ್ದಂ ||೨||

ಪರಮಚರಬಸವಾರ್ಯನನಿಶಂ | ಬರಿದೆವೆರಾನದಿಕುಳಿತುಕಾ ಲವ | ಹರಣಮಾಡದೆಮುತ್ತಿಗಿಂವರಪೊತ್ತೆಮೇಲೆಂದು || ಅರಿತುತ ಮ್ಮಯದೇಹವನುಘನ | ತರದಿದುಡಿಸುತ ಕೆಲಸಮಿಲ್ಲದೆ | ಯಿರುವ ಸಮಯದಿ ಸುಲಿಯಚಂದಯ್ಯಗಳಸರಿಯಂತೆ ||೩||

ಎಸೆವಹಗ್ಗದಕಾಯಕವನತಿ | ಸಸಿನೆಯಿಂಕೈಕೊಂಡುಸಂತತ| ನಸುನಗೆಯಮೊಗದಿಂದ ನಡೆಸುತ್ತಿರ್ದಕೇನೆಂಬೆ || ಮಿಸುಪವೆಂಕಟ ಪುರದೊಳಗೆ ವಾ | ಸಿಸುವಸಮಯದೊಳೊಂದುದಿನಘನ | ಜಸವಡೆ ದತ್ರೀಗಳಿಗದಾವುದು ಕೆಲಸಮಿಲ್ಲದಿರೆ ||೪||

ವ್ಯರ್ಥಮಾಗಿಯೆಕಾಲಕಳೆವುದು । ಸಾರ್ಥಕವದಲ್ಲೆಂದು ಹಗ್ಗ ವ । ನರ್ಥಿಯಿಂಮಾಡೋಣವೆನುತಾರಾಜಿಸುವಗೃಹದ ॥ ಕೀರ್ತಿ ಯುತನಾದೊಡೆಯನಿಂ ನಿ । ಸ್ವಾರ್ಥದಿಂನಾರನ್ನುಕೊಳ್ಳುತ । ಲರ್ಥಿ ಯಿಂ ಹಗ್ಗವನುಮಾಡುತ ಕುಳಿತುಕೊಂಡಿರಲು ॥ ೫ ॥

ಆಗದರ್ಶನಕಾಗಿಜನಗಳು । ರಾಗದಿಂತವೆಬಂದು ತೀವ್ರದಿ । ಪೋಗುವನಿತರೊಳಿಸೆವಶ್ರೀಗಳು ಮರಳಿನಾರನ್ನು ॥ ಬೇಗದಿಂತವೆತೆ ಗೆದುಕೊಳುತುರು । ಭೋಗಿಭೂಷಣನನ್ನು ಸ್ಮರಿಸು । ತ್ಯಾಗಹಗ್ಗವನ್ನೆ ದೆಪೊಸೆಯುತ್ತಿರ್ಪಸಮಯದೊಳು ॥ ೬ ॥

ಬಸವಯೋಗಿಯಹಸ್ತದೊಳುಬಹು । ಮಿಸುಪಸಾಗರಹಾವಿನೆ ಳೆಮರಿ । ಯೆಸೆವಜನಗಳಕಂಗಳಿಗೆ ಕಾಣಲ್ಕೆವಹಿಲದಲಿ ॥ ಬಸವತಾ ತನೆಹಾವುಹಾವೆನು । ತುಸುರಲಾಗಳ್ ಶ್ರೀಗಳವರತಿ । ಸಸಿನೆಯಿಂದ ದುಯೆಲ್ಲಿಯೆಲ್ಲಿಹುದೆನುವನಿತರೊಳಗೆ ॥ ೭ ॥

ಕಂಗಳಿಗೆಕಾಣಿಸದಲಾಕ್ಷಣ । ಮಂಗಮಾಯವದಾಗಿಪೋಗ ಲು । ತುಂಗಭಕ್ತಸಮೂಹವದುವಿಸ್ಮಯವಪೊಂದುತ್ತೆ ॥ ಲಿಂಗಜಂಗ ಮಸೇವೆಗೈಯುತ । ಲಂಗಜಾರಿಯುಪಾಸನಾದೆತಿ । ಪುಂಗವನಘನತ ರದಮಹಿಮವಿದಲ್ಲದಿನ್ನೇನು ॥ ೮ ॥

ಎನುತೆಭಕ್ತರುಬಸವಯೋಗಿಗ। ಳನುಪಮದಮಹಿಮವನುಪೊ ಗಳುತ । ಚಿನುಮಯನರೂಪಿಗಳುಪಾವನುಕಂಡರದನಿರದೆ ॥ ಜನರು ಕೊಲ್ಲುವರೆಂಬಭಯದಿಂ । ವಿನುತಮಾದೀಮಹಿಮವೆಸಗಿದ । ರೆನುತ ತಮ್ಮೊಳುತಾವೆಮನದೊಳು ತಿಳಿದುಚರವರರೊಳ್ ॥ ೯ ॥

ಧರೆಯೊಳಗೆಮಿಗಿಲಾಗಿರಾಜಿಸು । ತಿರುವಸತ್ಯವಹಿಂಸೆತತ್ವಗ । ಳುರುತರದೊಳಿರದರಿತುಕೊಳುವುದು ಯೋಗ್ಯಮೆಂದೆನುತೆ ॥ ಭರದಿ ಯೋಚಿಸಿನಿರಘಶ್ರೀಗಳಿ । ಪರಮಸತ್ಯವಹಿಂಸೆಮಹಿಮವ । ನೆರೆಯ ರುಹಿಯುವ್ಮಗಳಧನ್ಯರಮಾಳ್ಪುದೆಂದೆನುತೆ ॥ ೧೦ ॥

ಕರಮುಗಿದುಬೇಡಲ್ಕೆಚರವರ । ಹರುಷದಿಂನಿಮ್ಮಗಳಬಯ್ಕೆಯ । ತೆರದೊಳಾಗಲಿಯೆನುತಸಮ್ಮತಿಯಿತ್ತು ಭರದಿಂದೆ ॥ ಪರಮಸಜ್ಜನಶ್ರೇಷ್ಠರಿರನಾ । ನೊರೆವವಿಷಯಗಳರಿದುಮುದರೊಲು । ಚರಿಸಿಧನ್ಯತೆವಡೆವುದೆನುತಂದುಸುರತೊಡಗಿದನು ॥ ೧೧ ॥

ಪೃಥ್ವಿಯೊಳುಕಂಡುದನುಕಂಡೊಲು । ನಿತ್ಯದೊಳುಕೇಳಿದುದಕೇಳಿದೊ । ಲಾತ್ಮದೊಳುಬೇರೊಂದುಯೋಚಿಸದಂತೆಪೇಳುವುದೇ ॥ ಸತ್ಯಮೆನುತಲಿಶೃತಿಸ್ಮೃತಿಗಳವು । ನಿತ್ಯಮತಿಯುಗ್ಗಡಿಪಕತದಿಂ । ದುತ್ತಮನುವಸುಮತಿಯೊಳನೃತವನುಡಿಯನವನೆಂದುಂ ॥ ೧೨ ॥

ಇತರರುರುದಾಕ್ಷಿಣ್ಯಕೊಳಗಾ । ಗತಿಶಯದಿ ಸ್ವಾರ್ಥಕ್ಕೆಮರುಳಾ । ಗತಿದುರಿತಕರದನೃತನುಡಿಯುವುದದುವೆ ಕಡುಹೇಯಂ ॥ ಶೃತಿಗಳವುಸತ್ಯವನೆನುಡಿವಿಗೆ । ಹಿತವದೆನಿಸುವಧರ್ಮದೊಲುನಡೆ । ಸತತಸತ್ಯಕೆಜಯವುದೊರೆವುದಸತ್ಯಕಿಲ್ಲವದು ॥ ೧೩ ॥

ಧರೆಯೊಳಗೆಸಾಹಸದಿಸಾಸಿರ । ಪರಮಯಜ್ಞಗಳೆಸಗಿದಾಫಲ । ವಿರದೆಯೊಂದುಸುಸತ್ಯವನ್ನುಸುರುವುದರಿಂಬರ್ಕುಂ ॥ ಮೆರೆವ ಸತ್ಯಕೆಸಾವದಿಲ್ಲವು । ದುರಿತದನೃತಕೆ ಸುಖವದಿಲ್ಲವು । ಪಿರಿದೆಸೆವಸತ್ಯಕ್ಕೆಮಿಗಿಲಾಗಿರ್ಪತಪವಿಲ್ಲಂ ॥ ೧೪ ॥

ಎನುತಸಾರುವಶೃತಿಗಳೊಚನದಿ । ವಿನುತಸತ್ಯವುಮಾನವನಜೀ । ವನದಶ್ರೇಯಸ್ಕರವದಾಗಿಹಧ್ಯೇಯವೆನುತ್ತೈದೆ ॥ ಅನುನಯದಿಸಿದ್ಧಾಂತವಾಗುವು । ದನಿಶಸತ್ಯವನೆರೆನುಡಿಯಬೇ । ಕೆನುವುದದುಮಿಗೆ ಸುಲಭವಾಗಿಹುದದರಪರಿಯುಂತೆ ॥ ೧೫ ॥

ಸತ್ಯಮುನನಡೆನುಡಿಗಳಿಂ ಘನ । ವೆತ್ತವರು ದೊರೆಯುವುದುದುರ್ಲಭ । ನಿತ್ಯದೊಳುನುಡಿದಂತೆ ನಡೆಯಲಿಬೇಕುನಡೆದಂತೆ ॥ ಉತ್ತಮದಿನುಡಿಯಲಿಕೆಬೇಕೀ । ಸ್ತುತ್ಯವಹನಡೆನುಡಿಗಳೀಘನ । ಸತ್ಯವೆನುತಂ ನೀತಿಶಾಸ್ತ್ರಗಳೊರೆಯುವವುಸತತಂ ॥ ೧೬ ॥

ಪರಮಮಹಾತ್ಮರು ಸತ್ಯತನದಿಂ । ದುರುದುರಾತ್ಮರಸತ್ಯತನದಿಂ ।
ಚರಿಸುವರುತಿರೆಯೊಳಗೆ ಕರುಣಾಕರುಣದಿಂಕೂಡಿ ॥ ಪರಮಸತ್ಯವ
ನಾಂತಪುರುಷರು । ಕರಮೆಸೆವಮುಸವಜನ ಕೃತಿಗಳೊ । ಳಿರದೆ
ಯೊಂದೇವಿಧದಿವರ್ತಿಪರನಿಶ ದೃಢಮನದಿಂ ॥ ೧೭ ॥

ಪರಮಸತ್ಯವದಿಲ್ಲದಿಹಕಡು । ದುರುಳರಿಗೆಮನದಂತೆಮಾತು
ಗ । ಳಿರುವುದಿಲ್ಲವುಮಾತಿನೊಲುಕೃತಿಯಿಲ್ಲದಿರುತಿಹರು ॥ ಧರೆಯೊ
ಳಿಂತಹಧೂರ್ತರಿಂಮಿಗೆ । ತ್ವರಿತದಿಂನೆರೆದೂರರಾಗುತೆ । ಹರಶರಣ
ರೊಡನಾಟದಲಿ ಕಾಲವನುಕಳೆಯುವುದು ॥ ೧೮ ॥

ಸ್ತುತ್ಯವಹಸತ್ಯವನುಪೇಳುವು । ದಾತ್ಮಬಲಶಾಲಿಗಳಲಕ್ಷಣ ।
ನಿತ್ಯವನೃತವನುಡಿಯುವುದು ದುರ್ಬಲರಲಕ್ಷಣವು ॥ ಆತ್ಮವೀರರು
ಲೋಕವೆಲ್ಲವು । ಸುತ್ತುಗಟ್ಟಿಕೊಳುತ್ತ ತಮ್ಮನು । ಮುತ್ತಿಕತ್ತಿಯ
ಒರಿದಡುಂಮಿಗೆ ಮೆರೆವಮುಗಿಲಡುವೆ ॥ ೧೯ ॥

ತಮ್ಮಮೇಲೆಯೆಹರಿದುಬಿದ್ದಡು । ತಮ್ಮಬುದ್ಧಿಗೆವಳಿತುತೋ
ಚಿದ । ಸಮ್ಮತವದಾಗಿರ್ದಸತ್ಯವ ಭೀತಿಯಿಲ್ಲದಲೆ ॥ ಒಮ್ಮನದಿಪೇ
ಳಲಿಕೆಯೆಂಡುಂ । ಒಮ್ಮೆಡಗುಮಿಗೆ ದುರ್ಬಲಾತ್ಮರು । ಯಮ್ಮಗೆಲ್ಲಿ
ಯನಿಷ್ಟಬರ್ಪುದೊಸತ್ಯಪೇಳಿದಡೆ ॥ ೨೦ ॥

ಎನುವಭಯದಿಂ ಮುದುಗಿಕೊಳುವರು । ವಿನುತವಾಗಿಹಸತ್ಯ
ನಿಷ್ಠರು । ಮಿನುಪಲೋಕದನ್ಯಾಯನಿಷ್ಠುರ ಸದಯದಾಕ್ಷಿಣ್ಯ ॥ ಬಿನ
ಗುಬಡತನಕಂಜಿತಮ್ಮಯ । ಘನತರದಸತ್ಯವನು ಬಿಡರನು । ದಿನದಿ
ಕ್ಲೇಶಗಳೊದಗೆ ಪುರಹರನವರರಕ್ಷಿಸುವಂ ॥ ೨೧ ॥

ತಿರೆಯೊಳೆನಿತೋ ನರರುತಮ್ಮಯ । ಮಿರುಪುದರಪ್ರಾಣಗಳ
ಮೇಲುರು । ತರದಗಂಡಾಂತರಪ್ರಸಂಗಗಳೊದಗಲತಿಶಯದಿ ॥ ಇರ
ದಸತ್ಯವಪೇಳಿಭರದಿಂ । ದರರೆಪಾರಾಗುವರು ಸತ್ಯದ । ಪರಮಮಹಿ
ಮವನರಿತವೀರರ್ ಜೀವನಕೆಹೆದರರ್ ॥ ೨೨ ॥

ಬರಿದೆಯುದರಂಭರಣಕಾಗಿಯೆ । ದುರಿತಕರದನೃತವನುಪೇಳರು । ನಿರುತಮುಪವಾಸದೊಳಿಪ್ರಾಣವುಪೋದಡುಂ ಜಗದಿ ॥ ಪರಮಸತ್ಯವಬಿಡರುಮೇಣ್ಬಿನ । ತರದಕ್ಲೇಶಗಳಿಡರುಗಳಕಡು । ತರದಧೃತಿಯಿಂಜಯಿಸಿಸಿಂಗದಪರಿವಿರಾಜಿಪರು ॥ ೨೩ ॥

ಸತ್ಯವಂತನುಸತ್ಯವಾಚರಿ । ಸುತ್ತಿರುವಕಾಲದೊಳುತನ್ನಯ । ಚಿತ್ತಕತಿಮುದವೀವಜನಿಸಿದಪುತ್ರರನುಕಡಿದು ॥ ಸುತ್ತಚಲ್ಲುತಲಿರ್ದಡುಂ ನಿಜ । ಪತ್ನಿಯಂತನ್ನೆದುರೆನೀಚ । ಕೃತ್ಯದಿಂದವಮಾನಗೊಳಿಸುತಲಿರ್ದಡುಂಸುಖದಿ ॥ ೨೪ ॥

ಮರೆವದೇಹದಮೇಲೆಬಂದಡು । ವಿರದೆಶೂಲಕ್ಕೇರಿಸಿದಡುಂ । ಕರಕರನೆದೇಹವನುಕಂಡವಮಾಡಿಕಡಿಯುತ್ತಂ । ಇರುತಲಿರ್ದಡುಮವನುಮಿಂತಹ । ದುರಿತಕರಬಿಂಸೆಗಳಿಗಂಜದೆ । ಪಿರಿದುಧೃತಿಯಿಂಸತ್ಯವನೆನುಡಿಯುವನುದೃಢದಿಂದೆ ॥ ೨೫ ॥

ಪೊಡವಿಪರರಿಗೆಪೋದಡುಂಪಡೆ । ದೊಡವೆಹರಿಹುಚಾದಡುಂಮಿಗೆ । ಮಡದಿಮಕ್ಕಳುಮಿತ್ರರಳಿದಡುತನುಗೆಬಹುವಿಘ್ನ ॥ ಅಡಸಿದಡುಬಲ್ಲವರುಸತ್ಯವ । ಬಿಡರುಲೋಕದಿಸತತಸತ್ಯದಿ । ನಡೆಯೆಸರ್ವಪದಾರ್ಥಕ್ಕೈಸಾರುವುದುನಿಶ್ಚಯವು ॥ ೨೬ ॥

ಕಡಿದರಾದಡುಮಿಕ್ಷುಮಧುರಂ । ಕೆಡದವೊಲುಕಲ್ಲೊಳಗೊರಸಿಪುಡಿ । ಪುಡಿಯಮಾಡಿದಡುಂಪಟೀರಂ ತನ್ನನಿಜಗಂಧ ॥ ಕೆಡದವೊಲುಮಿಗೆಕರಗಿಕಾಸುತೆ । ಬಡಿದಡುಂಕಾಂಚನದಬಣ್ಣಂ । ಕೆಡದವೊಲುವಿಘ್ನಂಗಳೆನಿತಡಸಿದಡುಸಜ್ಜನಗೆ ॥ ೨೭ ॥

ಅರಿಯನೆನಿತುಂಸತ್ಯಭೂಮಿಯೊ । ಳುರಿವನೆಳ್ಳನಿತಾಪವಾದಕೆ । ಪೊರಗಿಹುದುಲೋಕಕ್ಕವನಸನ್ಮಾನಸಾಧನವು ॥ ಹರಿವುದೆಷ್ಟೊಸೆಶುಕ್ಲಪಕ್ಷದ । ಹೆರೆಯೊಲೂರ್ಜಿತಮಪ್ಪನೆಲದೊಳ । ಗರರೆಸತ್ಯವೆಬ್ರಹ್ಮಬ್ರಹ್ಮವೆಸತ್ಯಮಿದುದಿಟವು ॥ ೨೮ ॥

ಇಳೆಯೊಳಗೆಮಿಗಿಲಾದನೈತಿಕ । ಬಲವದಿಲ್ಲದಮೂರ್ಖನರರತಿ। ನಲವಿನಿಂಪ್ರತಿನಿತ್ಯನಾನಾರೀತಿಯನೃತವನು ॥ ನಿಲದೆಪೇಳುತ್ತಿರ್ಪು ದೆಮಗದು । ಘಳಿಲನೆನಿದರ್ಶನಕೆಬರ್ಪುದು । ವೊಲವಿನಿಂನೋಡಿದ ಡದೆನಿತೋ ನರರುತಮ್ಮಗಳ ॥ ೨೯ ॥

ಪಿರಿದುಸ್ವಾರ್ಥದಸಾಧನೆಗೆಬಹು । ತರದಿಸುಳ್ಳೀಸುಳ್ಳಿನಾಣೆಗ । ಳುರುತರದಸುರಿಮಳೆಯಸುರಿಸುವರವರು ಪಶುಸಮರು॥ ದುರಿತಕಂಜ ದಕೆಲವುಡಾಂಭಿಕ । ನರರುಗೌರವಶಾಲಿಗಳುನಾ । ವಿರುವೆವೆನುತಂ ಮಾತಿನೊಳಗನೃತವನು ಕೊಚ್ಚುತಲಿ ॥ ೩೦ ॥

ನಲವಿನಿಂತಮ್ಮಯಸುಜಾಣ್ಮೆಯ । ನಿಲದೆವ್ಯಕ್ತವಗೊಳಿಸುವ ರುಮೇ । ಕ್ಕೆಲರುಸುಳ್ಳನುಹೊಗಳಿಕೊಂಡುರುತರ ಸಮಾಜದಲಿ ॥ ಅಲಘುತರಗೌರವವಪಡೆವರು । ಕೆಲರುಪರತರದೇವರಾಣೆಗೆ । ಬೆಲೆ ಕೊಡದೊಲಾಣೆಗಳಮಾಡುತಸತ್ಯನುಡಿಯುವರು ॥ ೩೧ ॥

ಈತೆರದೊಳನೃತಗಳಸಾಧಿಸಿ । ನೀತಿಬಾಹಿರರಾಗಿತಮ್ಮಯ । ಪಾತಕದಜನ್ಮಗಳನೊರೆದುಕೊಳುತ್ತಲಿರ್ಪವರೆ ॥ ಭೂತಳದೊಳೆಲ್ಲೆಲ್ಲಿ ನೋಡಲು । ಸಾತಿಶಯದಿಂಕಂಡುಬರ್ಪರು । ವೋತುಪರಿಕಿಸಲೆ ಸೆಯುವೀಕಲಿಯುಗದಿಸತ್ಯಕ್ಕೆ ॥ ೩೨ ॥

ತಾಣವೇದೊರೆಯದೊಲದಾಗಿದೆ । ಹೀನದನೃತಕೆಪ್ರಬಲದೊರೆ ಡಿದೆ । ಮಾನಹೀನರುಸುಳ್ಳನಾಡಿಯೆ ಸುಖದಿಬಾಳುವರು ॥ ಸಾನು ರಾಗದಿಸತ್ಯವಾಡುವ । ಮಾನವರಿಗತಿಕಷ್ಟಬರ್ಪವು । ಯೇನು ಪೇಳುವದೀಗಕಾಲದವೈಪರೀತ್ಯವನು ॥ ೩೩ ॥

ಧರಣಿಯೊಳುನಿಜವಾಗಿಪರಿಕಿಸೆ । ಪರಮಸತ್ಯಕೆಸಾವ ದಿಲ್ಲವು । ದುರಿತದನೃತಕೆಸುಖವದಿಲ್ಲವುಯೆನುವವಚನಗಳೇ ॥ ಇರದೆನಿಜವಾಗುವವುಪೂರ್ವದಿ । ಮೆರೆಯುತಿರ್ಪಿಜಗವುಸತ್ಯವ । ನಿರುತನುಡಿಯುತಲಿರ್ದಮಹಿಮರನುಗ್ರಹದಬಲದೆ ॥ ೩೪ ॥

ಅಸಮಕುಶಲದಿನಡೆದಿರುವುದದು । ವಸುಧೆಯೊಳುಶೋಭಿಸಿದ ಸರ್ವರು । ಜಸವನಾಶವಗೊಳಿಪಸುಳ್ಳಿನ ಬುಳ್ಳರಾಗಿರ್ದು ॥ ರಸೆಯೊಳಗೆಚರಿಸಿರ್ದಡೀತಿರೆ । ರಸತಳಕೆಪೋಗುತ್ತಲಿತ್ತುರು । ಮಿಸುಪಸಜ್ಜನರಸುವತ್ಯಜಿಸಿದಡವರತತ್ವಗಳೇ ॥ ೩೫ ॥

ರಾಗದಿಂತವೆಮಾರ್ಗದರ್ಶಗ । ಳಾಗಿರುವಕತದಿಂದೆಜಗವದು । ಸಾಗಿರುವುದುರುಸತ್ಯನಿಷ್ಠರು ಸುಳ್ಳುಪೇಳುತ್ತ ॥ ಪೋಗಲೀಜಗಮೆಂದುಮುಳಿಯದು । ಭೋಗಿಪುರುಷರುಕೆಲರಸತ್ಯವ । ಬೇಗದಿಂದುಸುರುತ್ತಜೀವಿಸಬಹುದುಕೆಲದಿನದೆ ॥ ೩೬ ॥

ಹುಳುಕುಗಳುಹೊರಬೀಳ್ವಕೂಡಲೆ । ಯಲಘುತರಕ್ಲೇಶಗಳಿಗೀಡಾ । ಗಿಳೆಯೊಳಗೆತೊಳಲುವರುಸತ್ಯವನಾಂತಪುರುಷರಿಗೆ ॥ ಕೆಲವುದಿನಮೇಲಿಂದಮೇಲೆಯೆ । ನಿಲದೆಕಷ್ಟಗಳೊದಗಬಹುದವು । ಕೊಳಪಸತ್ಯದಬೆಳಕುಹೊರಬೀಳ್ವಾಕ್ಷಣದೊಳ್ಳೈದೆ ॥ ೩೭ ॥

ಧವಳಕೀರ್ತಿಪ್ರಕಾಶವಾಗುತ । ರವಿಯಕಿರಣದತೆರದಿಮೆರೆವೀ । ಭುವನದೊಳುಬೆಳಗುವುದು ನಿರುತದೊಳಾದಕತದಿಂದೆ ॥ ಭವವನಾಶವಗೊಳಿಪಸತ್ಯವೆ । ಜವದಿಜಯವನುಪೊಂದುವದುನಿಜ । ಮವಿರತಂಸತ್ಯವನೆನುಡಿವುದು ಸುಖವನಿಚ್ಛಿಪರು ॥ ೩೮ ॥

ಸತ್ಯಸರಣಿಯಪಿಡಿದುಚರಿಪುದು । ಸತ್ಯವಾಡಲುಮುಕ್ತಿದೊರೆವುದು । ಸತ್ಯವೇಮಾನವನಘನತರಸುಖದಹೆದ್ದಾರಿ ॥ ಸತ್ಯವೊಂದಿರಲೆತ್ತಭಯವಿ । ಲ್ಲುತ್ತಮದಸತ್ಯತ್ವದಿಂ ಘನ । ವೆತ್ತಲೋಕವಜಯಿಸಬಹುದಿದುಪರಮಸಿದ್ಧಾಂತಂ ॥ ೩೯ ॥

ಮೆಚ್ಚನುಂಗದಿರಪ್ರಮಾಣಕೆ । ಮೆಚ್ಚದಿರಿಬಯಲಡ್ಡುತಕ್ಕತಿ । ಬೆಚ್ಚದಿರಿ ಕೆಡಿಸದಿರಿ ಸುಜನನಿರಾಪರಾಧಿಗಳ ॥ ಹೆಚ್ಚದಿರಿದುರ್ಬೋಧಕತ್ವಕೆ । ನೆಚ್ಚದಿರಿಸೌಭಾಗ್ಯಲಕ್ಷ್ಮಿಯ । ನೆಚ್ಚರಿಕೆಯಾಗಿರಿ ಸಮಸ್ತರೊಳಸಮಭಕ್ತರಿರಾ ॥ ೪೦ ॥

ಹೋಗೆಬಾರವುಪ್ರಾಣಮಾನಂ । ಹೋಗಿಬರ್ಪುವುಸಿರಿದರಿದ್ರ
ತೆ । ಪೋಗವೆಂದಿಗುಬಂದಬಳಿಕಂ ಕೀರ್ತಿಯಪಕೀರ್ತಿ॥ ಪೋಗದಿಹ
ವೆರಡಕ್ಕೆಕಾರಣ । ಮಾಗಿಹವುಸಚ್ಚರಿತದುಶ್ಚರಿ । ತಾಗಮೋಭಯ
ಮೊಂದಪಿಡಿಯದಿರೊಂದಬಿಡಬೇಡಿ ॥ ೪೧ ॥

ಅರ್ಥಮೇಪ್ರಾಣಾಧಮಗೆ ಕೇ । ಳರ್ಥಮಂ ಜರೆದೀಘಟವು
ಪ್ರಾ। ಣಾರ್ಥಮೆಂಬರುಮಧ್ಯಮರುಘಟಮಂಜರೆದುವಿಮಲ ॥ಕೀರ್ತಿ
ಯೇಪ್ರಾಣಾಂಶದುತ್ತಮ । ವರ್ತಕರಿಗುರುಭಕ್ತರಿರಸತ್ । ಕೀರ್ತಿ
ಸತ್ಯಾವರಣಗಲ್ಲದೆಬಾರದೆಲ್ಲರಿಗೆ ॥ ೪೨ ॥

ಚಿಂತಿಸುವನನ್ನಕ್ಕಧಮುನಿಗೆ । ಚಿಂತಿಸುವದೇಹಕ್ಕೆಮಧ್ಯ
ಮ । ಚಿಂತಿಸುವಸನ್ಮಾನಕೆಟ್ಟಪುದೆನುತಲುತ್ತಮನು ॥ ಚಿಂತಿಸುತ
ಧರ್ಮವನುವಿಷಯ । ಭ್ರಾಂತರಾಗದೆನೀವುಜಗದೊಳು । ಕಾಂತಿಮ
ಯಸತ್ಯವನುಬಿಡದಿರಿ ಪರಮಶಿವನೊಲಿವಂ ॥ ೪೩ ॥

ನಳಹರಿಶ್ಚಂದ್ರಾದಿಭೂವರ । ರಳಿದುದಿಲ್ಲವೆಯವರಕೀರ್ತಿಗ।
ಳಳಿದವೇಲೋಕಾಪವಾದಿಗಳಾಗಿ ಬದುಕಿದರೇ ॥ ಅಳಿವುದೊಡಲಪ
ಕೀರ್ತಿಕೀರ್ತಿಗ। ಳುಳಿವುದುದುಕಾರಣದಿಮೂಜಗ । ದೊಳಗೆಸತ್ಯವ
ಬಿಟ್ಟುಬದುಕುವಮನುಜರಾಕ್ಷಸನು ॥ ೪೪ ॥

ಸತ್ಯವನುನುಡಿಯುವುದೆಸ್ವರ್ಗವ । ಸತ್ಯವನುನುಡಿಯುವುದೆ
ನರಕವು । ಸತ್ಯದಿಂದಲೆಮನುಜಘನತರಪದವಿಗೇರುವನು ॥ ಸತ್ಯದ
ಲಿನಡೆಯುವುದೆಶೀಲವು। ಸತ್ಯಮಂನುಡಿಯುವುದೆಮೋಕ್ಷವು। ಸತ್ಯ
ದಿಂದಲೆಪುರಹರನುಪ್ರತ್ಯಕ್ಷನಾಗುವನು ॥ ೪೫ ॥

ಸತ್ಯವಿಲ್ಲದಮನುಜನೊಡನತಿ । ಮಿತ್ರತನವನುಮಾಡಲಾಗ
ದು । ಸತ್ಯತಪ್ಪಿದಮನುಜಶೀಘ್ರದಿಪತಿತನಾಗುವನು ॥ ಸತ್ಯದಿಂದ
ನಿತೋಮಹಾತ್ಮರು । ಪೃಥ್ವಿಯೊಳುತವೆಘನತೆಗೇರ । ತ್ಯುತ್ತಮದ
ಬೆಳ್ಜಸವನಾಂತವರಮರರಾಗಿಹರು ॥ ೪೬ ॥

ನಿತ್ಯವಲ್ಲೀದೇಹಭಕ್ತರಿ । ಸತ್ಯಪೇಳಿರಿಸಕಲವಿಘ್ನಂ । ಸತ್ಯ
ದಿಂಪರಿಹಾರಮಪ್ಪುವುಬಯಸಿದಿಷ್ಟವನು॥ ಸತ್ಯವೇತಂದೀಯುತಿರ್ಪು
ದು । ಸತ್ಯವೇಭವವಮಂಬಿಡಿಸುವುದು । ಸತ್ಯದೊಳುನಡೆದವನೆಶಿವತಾ
ನೆಂದುನಿಶ್ಚಯಿಸಿ ॥ ೪೭ ॥

ಕೆಲರುಜಪತಪಗಳಲಿಕೆಲಬರು । ಬಲುಮೆಯಹಶಾಸ್ತ್ರದಲಿಕೆಲ
ಬರು । ಹಲವುವಿಧಯಾಗದಲಿಕೆಲಬರುದಾನಧರ್ಮದಲಿ ॥ ಬಳಲು
ವರುಬಹುಕಷ್ಟದಿಂದಲಿ । ಗಳಿಸಬೇಕೆನುತಸಮಮೋಕ್ಷವ । ತೊಳಪ
ಸತ್ಯಕೆಶರಣುಪೋದಡೆಶೀಘ್ರಸಿದ್ಧಿಪುದು ॥ ೪೮ ॥

ಮರೆವತಿರೆಯೊಳಗನೃತದಿಂಮಿಗೆ । ಪರರಿಗದುಹಿತವಾಗುತಿ
ರ್ದಡೆ । ಪಿರಿದಪಾಯವದಾರಿಗುಂ ನೆರೆಹೋರದಿರ್ದಡೆಮೇಣ್ ॥ ನರ
ರಿಗದುಮನರಂಜನೆಯಕೊಡು । ತಿರುತಲಿರ್ದಡೆನೀತಿಶಾಸ್ತ್ರವ । ಸರಿದ
ಬುಧರೀಪರಿಯಸುಳ್ಳಿಗೆ ಕ್ಷುಲ್ಲಕವದೆನಿಪ ॥ ೪೯ ॥

ಸುಳ್ಳಿನೊಳುಗಣಿಸಿರ್ಪರದರಿಂ । ದುಲ್ಲಸದಿಶತಸುಳ್ಳುಗಳನುಡಿ ।
ದೆಲ್ಲರಿಗುಹಿತವಾಗುತಿರ್ಪೊಂದೊಸೆವಶುಭಕಾರ್ಯ ॥ ನಿಲ್ಲದೆಸಗಲಿಬ
ಹುದುಸತ್ಯವ । ನೆಲ್ಲಸಮಯದಿಪೇಳಿಯೋರ್ವನ । ಸಲ್ಲಲಿತಜೀವವ
ನು ವಧೆಗೈಸುವುದಕಿಂ ತಿರೆಯೊಳ್ ॥ ೫೦ ॥

ಇರದನೃತಮಂವಚಿಸಿಯೋರ್ವನ । ಮಿರುಪಪ್ರಾಣವನುಳಿಸಿ
ಕೊಳುವುದೆ । ಪಿರಿದುಶ್ರೇಷ್ಠವದಾಗಿತೋರುವದೀತೆರದೊಳಿರ್ಪ ॥
ಪರಮಸಂದರ್ಭದೊಳುಸುಳ್ಳನು । ಹರುಷದಿಂದುಸುರಿದಡುದೋಷ
ವು । ಬರುವುದಿಲ್ಲವುಹಿತವೆಸತ್ಯವುಸತ್ಯವೇಹಿತವು ॥ ೫೧ ॥

ನರರಿಗಹಿತವದೆನಿಸುವನೃತವ । ನೊರೆವರನುಲೋಕವದುಮೆ
ಚ್ಚದು । ಮಿರುಪವರಪರಮಾತ್ಮನುಂಸಹಮೆಚ್ಚನಿದುದಿಟವು ॥ ಪರಮ
ಸುಖಶಾಂತಿಗಳಪೊಂದುತ । ಧರಣಿಯೊಳುಜೀವಿಸಲುಬೇಕೆನು । ತಿರು
ವವರಸತ್ಯವನುನಿರುತದಿಪಾದದಿಂಮೆಟ್ಟ ॥ ೫೨ ॥

ತುಳಿದುಸತ್ಯವಪರಮತರಶಿರ । ದೊಳಗೆನೆರೆಸಿಂಗರಿಸಿಕೊಂಡು ರು । ಪೊಳೆಯುತಿರ್ಪಪ್ರಪಂಚಮೇಣ್ಪರಪಾರಮಾರ್ಥಗಳ ॥ ನಿಲದೆ ಗೆಲ್ಲುವುದೇನಿರಂತರ । ಮಿಳೆಯೊಳಗೆಪ್ರತಿಯೋರ್ವಮನುಜನ । ಸುಲಲಿತದಕರ್ತವ್ಯಮಾಗಿಹುದರಿಯುವುದುನಲವಿಂ ॥ ೫೩ ॥

ಜಗದೊಳಗೆಬಹುಮುಖ್ಯಮಾಗಿ । ದರ್ಘಪದೂರನುಗೊಳಿಸಿ ಮೇಣ್ಮಿಗೆ। ಜಗಕೆಸಂತತಶಾಂತಿಸುಖಗಳನಿತ್ತುರಕ್ಷಿಸುವ ॥ ಜಗದೊಳಗಹಿಂಸೆಯಸುತತ್ವವ । ನಗಜೆಯರಸನಸ್ಮರಿಸಿಪೇಳುವೆ । ಸೊಗಸಿನಿಂ ಮನಮಿಟ್ಟುಲಾಲಿಪುದತುಳಭಕ್ತಿಯೊಳು ॥ ೫೪ ॥

ಮೆರೆವತಿರೆಯೊಳಹಿಂಸವೆನೆಯದು । ಧರೆಯೊಳಿರುತಿರ್ಪಾವಪ್ರಾಣಿಯ । ನಿರುದಯದಿನೋಯಿಸದೆಯಾವಪ್ರಾಣಿಗುಂವ್ಯಥೆಯ ॥ ಸರುವಥಾಕೊಡದಾರವಿಷಯಕು । ದುರಿತಕರಮತ್ಸರವಪಡದಿರುತಿರುವುದದುವೆಯಹಿಂಸವೆನುತಂಪರಮಬುಧರೊರೆವರ್ ॥ ೫೫ ॥

ಪರಮದೇಹಕ್ಕಾದಡುಂಸಲೆ । ಕರಮೆಸೆವಮನಕಾದಡುಂಮಿಗೆ । ಮಿರುಪತಿರೆಯೊಳಗವಿರತದಿಯಮಿತ್ರಂದಲೋರ್ವನಿಗೂ ॥ ದುರಿತಹಿಂಸೆಯುದಾಗದಿರ್ಪುದು । ಪರಿಕಿಸಲುಬಹುಕಷ್ಟಮಾದುದು । ಬರಿದೆಡಂಭಕ್ಕಾಗಿಪ್ರಾಣಿಸಮೂಹಕನ್ನವನು ॥ ೫೬ ॥

ಹಿತದಿಥಾಕಿದಮಾತ್ರದಿಂಮಿಗೆ । ಸತತಬಡಬಗ್ಗರಿಗೆಬಟ್ಟೆಗಳತಿಶಯದೊಳಿರದಿತ್ತಮಾತ್ರದಿಮಿಳೆಯೊಳಗೆನೋಡಲ್ ॥ ಹಿತವದೆನಿಸುವಹಿಂಸೆಯೆನಿಸದು । ವಿತತಮಾನಸದೊಳಗೆಯೆಂದುಂ । ಕ್ಷಿತಿಯೊಳಗೆಸಲೆಜೀವಿಸುತಲಿರ್ಪಾರವಿಷಯಕ್ಕುಂ ॥ ೫೭ ॥

ಭೂರಿಕ್ಲೇಶವದಾಗಲೆಂಬುವ । ಕ್ರೂರಯೋಚನೆಯಿಲ್ಲದೊಲುಮಿಗೆ ।ಮೀರಿದಯವನುತೋರುತಿರಬೇಕಲ್ಲದೆಯುಮತ್ತಂ ॥ ಧೀರತನದಿಂ ತನ್ನಶತ್ರುವೆ । ಚಾರುಬದ್ಧಿಯಬಲದಿಘನಪದ । ಕೇರಿಯುಚ್ಚಸ್ಥಿತಿಗೆಬಂದಡುಮವನವಿಷಯಕ್ಕೆ ॥ ೫೮ ॥

ಮನದೊಳಗೆಘನಹರುಷಪಡುವುದೆ । ಘನತರವದಾಗಿರ್ಪ
ಹಿಂಸೆಯ । ವಿನುತನಿಜಲಕ್ಷಣವದೆನುತಲಿಶ್ರುತಿಗಳೊರೆಯುವವು ॥
ಅನಿಶತನ್ನಸುಶತ್ರುಗಳುಮಿಗೆ । ಮನವನೋಯಿಸುತಿರ್ಪರೆಂದಡೆ ।
ಯನುನಯುದೊಳವರೆಲ್ಲರುಂನೆರೆಪೂರ್ವದೊಳುಗೈದ ॥ ೫೯ ॥

ಕರ್ಮಫಲದಸ್ವರೂಪರೆನುತಂ । ಕೂರ್ಮೆಯಿಂಮಿತ್ರರೊಲು
ಕಾಣುತೆ । ಮರ್ಮಭೇದಕಮಾದಮಾತುಗಳಾಡುತಂಜನರ॥ಪೇರ್ಮೆ
ಯಿಂದುದ್ವೇಗಗೊಳಿಸದೆ । ಧರ್ಮದಿಂತವೆಸಿರಿದಹಿಂಸವ । ಕೂರ್ಮೆ
ಯಿಂಪಾಲಿಪಮಹಾತ್ಮನೆಜಗದೊಳಗೆಶ್ರೇಷ್ಠಂ ॥ ೬೦ ॥

ಚಾರುಪರಮೇಶ್ವರನುನಮ್ಮಯ । ಸಾರತರದಾಹಾರಕಾಗಿಯು ।
ದಾರತನದಿಂಮಿರುಪಪರಿಪರಿವಿಧದಪೌಷ್ಟಿಕದ ॥ ಭೂರಿಧಾನ್ಯಗಳ
ನ್ನುಸೃಜಿಸಿಯ । ಪಾರಹಿತವನುಮಾಡಿರಲ್ಕೀ । ಧಾರಿಣಿಯೊಳಿ
ನ್ನುಂತೆಜೀವನಯಾತ್ರೆಯನ್ನೈದೆ ॥ ೬೧ ॥

ಹರುಷದಿಂಸಾಗಿಸಲುಪುಟ್ಟಿ । ರ್ದುರುಮೆರೆಯುತಿರ್ಪಿತರಪ್ರಾ
ಣಿಗ। ಳಿರದೆನಿರುತಾಹಾರಕಾಗಿಯೆಹಿಂಸಿಸುವುದದುವೆ ॥ ನರರನ್ಯಾಯ
ವೆ ? ನರರುಪುಟ್ಟಿದು । ದರಿಯೆನಿಷ್ಕಪಟತ್ವದಿಂನೆರೆ । ನಿರಪರಾಧ
ತ್ವದೊಳುಬಾಳ್ವುದಕಾಗಿಯಲ್ಲವೆಯೇಂ ? ॥ ೬೨ ॥

ಆದಡವನಾತೆರದಭಾವದ । ಸಾಧುಸರಣಿಯತ್ಯಜಿಸಿಮೆರೆವೀ ।
ಮೇದಿನಿಯೊಳಿರದೊಕ್ರಮಾರ್ಗವಪಿಡಿದುಚರಿಸುವನು ॥ ಸಾದರದಿ
ಪುಟ್ಟಿದುದುತಿರೆಯೊಳು । ಸಾಧುಪ್ರಾಣಿಗಳಾದಪಶುಗಳ । ಮೋದದಿಂ
ದಾಳಲಿಕೆಯವುಗಳ ಹಿಂಸಿಸಲಿಕಲ್ಲಂ ॥ ೬೩ ॥

ಪರಮಮಾನವಧರ್ಮನೋಡಲು । ಮಿರುಪಸಸ್ಯಾಹಾರದಿಂದ
ಲೆ । ನಿರುತಜೀವಿಸಬೇಕುಜೀವಿಗಳನ್ನುಹಿಂಸಿಸುವ ॥ ಧರುಮವದು
ಪರಿಕಿಸಲುಮಾನವ । ಧರುಮವಲ್ಲವುಕ್ರೂರತನದಿಂ । ಚರಿಪರಾಕ್ಷಸಿ
ಧರ್ಮವದುಹಿಂಸೆಯನುಗೈವವನು ॥ ೬೪ ॥

ಚಾರುಮಾನವನಾದಡುಂನೆರೆ । ಕ್ರೂರರಾಕ್ಷಸರೊಳಗೆಗಣ್ಯನು। ಧಾರಿಣಿಯೊಳೀಪರಿಯುಮಾನವನಿಂಗೆಧಿಃಕಾರಂ ॥ ಸಾರಸರ್ವೋತ್ಕೃಷ್ಟಮಾಗಿಹ । ವೀರಮಾನವಜನ್ಮಪೊಂದಿಯು । ಭೂರಿಹೇಯವದಾದಹಿಂಸಾಮಾರ್ಗದಿಂಚರಿಪ ॥ ೬೫ ॥

ನರನುಹರನುರುಕೋಪತಾಪಕೆ। ನಿರುತಗುರಿಯಾಗುತ್ತಿರೆಯೊಳು । ಪರಿಪರಿಯಕಷ್ಟಗಳನನುಭವಿಸುತಲಿದೇಹವನು ॥ ಭರದಿತ್ಯಜಿಸುತನರಕಕೂಪದಿ ನೆರೆತೊಳಲಿಮೆರೆವೀಪ್ರಪಂಚದಿ । ಮರಳಿಹೀನವದಾದಸ್ವಾನನಜನ್ಮಕವನಿಳಿವಂ ॥ ೬೬ ॥

ವರವಿಧಿಯುಸೃಜಿಸಿರ್ಪಸೃಷ್ಟಿಯೊ । ಳ್ನಿರುತಮಾಂಸಾಹಾರವೆಸಗುತ । ಲಿರುವಪ್ರಾಣಿಗಳಂಗರಚನೆಯೆಬೇರೆಪಲತೆರದ ॥ ಪರಮಶಾಕಾಹಾರವೆಸಗುತ। ಲಿರುವಜೀವಿಗಳಂಗರಚನೆಯೆ। ಪರಿಕಿಸಲುಬೇರ್ಯೆದೆನೈಸರ್ಗಿಕದದೃಷ್ಟಿಯೊಳು ॥ ೬೭ ॥

ಚಿರತೆಪುಲಿವೃಕಕರಡಿಕೇಸರಿ । ನರಿಶುನಿಸುಮಾರ್ಜಾಲನೊದಲಾ । ಗಿರುವಪ್ರಾಣಿಗಳಿಂಗೆಶೂಲದದಂತಗಳುಮತ್ತಂ ॥ ಹರಿತಮಾಗಿಹನಖದಪಂಜರ । ಮಿರುವಕಠದಿಂದಾವವಿಧಮಾ । ದುರುತರಾಯುಧಗಳಸಹಾಯುವವಿಲ್ಲದಲೆಚರಿಪ ॥ ೬೮ ॥

ಪರಮಜೀವಿಗಳನ್ನುಕೊಲ್ಲು । ತ್ತಿರುವಕಠದಿಂದವಿರತಂನೆರೆ । ಪಿರಿದುಹಿಂಸಾಪ್ರಾಣಿವರ್ಗದೆಗಣ್ಯಮಾಗುವವು ॥ ಹರಿಣಹಯಗಜವೃಷಭನೊದಲಾ । ಗಿರುವಜೀವಿಗಳಿಂಗೆನರನಿಗೆ । ಪರಿಕಿಸಲುಹಿಂಸಿಸುವನೈಸರ್ಗಿಕವದ್ದಾಗಿರ್ಪ ॥ ೬೯ ॥

ಚಾರುತರದಾಯುಧಗಳಿಲ್ಲದ । ಕಾರಣದೆಸಂತತದೆಶಾಕಾ । ಹಾರಿಪ್ರಾಣಿಗಳೊಳಗೆಗಣ್ಯವುಪರಮಸಿದ್ಧಾಂತಂ ॥ ಧಾರಿಣಿಯೊಳಿಂತಿರ್ದಡುಂಮಿಗೆ । ಮೀರಿಭೋಗದೆಬೀಳ್ವುನಿರುತಂ । ಸಾರಮಾನವಧರ್ಮಪಾಲಿಸದೆಸೆವಪ್ರಾಣಿಗಳ ॥ ೭೦ ॥

ಘೋರತನದಿಂಹಿಂಸಿಸುವಕಡು । ಕ್ರೂರಕಾಡುಮೃಗಗಳೊಲು ಮಿಗೆ । ಮೀರಿಹಿಂಸಿಪನರನೆನಿಖಿಲಪ್ರಾಣಿಕೋಟಿಗಳೋಳ್ ॥ ಭೂರಿ ನೀಚಾಧಮನುಮಿವಗಿಂ । ಘೋರತರದಾಕ್ರೂರಪ್ರಾಣಿಯು । ಮೂರು ಲೋಕಂಗಳೊಳುಪುಡುಕಿದಡೆಲ್ಲಿದೊರೆಯದದು ॥ ೨೧ ॥

ಬಾಡತಿಂಬವಜೀವಹಿಂಸೆಯ । ಮಾಡುವಂಕೊಲೆಯಿಂದಪಾ ಪ । ಕ್ರೀಡಹಂಪಾತಕಗೆದುರ್ಗತಿಯಹುದುದುರ್ಗತಿಯಿಂ ॥ ಮೂಡಿ ಮುಳುಗುವಜನನಮರಣದಿ । ಕಾಡುವಂಭವದಿಂದದುಃಖದ । ಗೂಡೆ ನಿಸುತಿಹನವಗೆಸದ್ಗತಿಯಿಲ್ಲವೆಂದೆಂದು ॥ ೨೨ ॥

ಉರ್ವರೀತಳದೊಳಗಹಿಂಸಾ । ಸರ್ವಭೂತಾನಿಯಮವೇಶ್ರು ತಿ । ಸಾರ್ವದಂತಿಳಿದಿರ್ದುಪಶುಗಳಕೊಂದುತಿಂಬುವರು ॥ ಸರ್ವಥಾ ಚಾಂಡಾಲರಲ್ಲದೆ । ಗೀರ್ವಪಥಮುವರ್ಗೊಳವೆಪಾತಕ । ಪರ್ವತದ ಕಮ್ರರಿಯೊಳಗೆಬೀಳುವರುನಿಶ್ಚಯವು ॥ ೨೩ ॥

ಆರದಾಗಲಿಪಾಗ್ನಿವಕೃತಾ । ಕಾರಿತನುಮೋಹನಗಳಿಂದವಿ । ಚಾರವರ್ತಕದಿಂದೆಹಿಂಸೆಯನೆಸಗಿದವನಿಳಿವಂ ॥ ಘೋರಪಾಪಾರ್ಣ ವದಿಘಟಕೃತ । ಕಾರಿತನುಮೋದನದೆಹಿಂಸಾ । ಚಾರಿಯಾದವಗೆಂತು ಪಾತಕವೋಮಹಾದೇವಾ ॥ ೨೪ ॥

ಹಿಂಸೆಪಾರದ್ವಾರವನೃತಾ । ಕಾಂಶೆತಸ್ಕರವೆಂಬವೀರಭ । ಯಾಂಶಮಿಂತಿಹಪಂಚಮಹಪಾತಕಗಳವರೊಳಗೆ ॥ ಹಿಂಸೆಯೇಬ ಹುಪಾಪಮಿಹದೊಳು । ಹಿಂಸೆಯೇನಿಷ್ಠೂರವರ್ತಕ । ಹಿಂಸೆಗಾರರ ನೋಡಬಹುದೇಹರಮಹಾದೇವ ॥ ೨೫ ॥

ತನ್ನಹಾಗುಳಿದಾದಪ್ರಾಣಿಗ । ಳಿನ್ನದವರನುಕೊರಳರಿದುಮಿಗೆ । ತಿನ್ನಬಹುದೇಅವರಡಗಹರಹರಮಹಾದೇವ ॥ ತನ್ನಮಕ್ಕಳುವೊದ ರಿಮನದೊಳು । ಖಿನ್ನನಪ್ಪೊಲುಜೀವಹಿಂಸೆಗೆ । ಖಿನ್ನನಾಗದಪಾಪಿ ಮೆಟ್ಟಿದಭೂಮಿಬೆಳೆದಪುದೆ ॥ ೨೬ ॥

ಹರಹರಾಕಂಗೆಟ್ಟುಜಗ್ಗನೆ । ಜರೆಯುವೇಮನದೊಳಗೆಭಯ ಹೊಡೆ । ದಿರವೆಹೆದರವೆಕಣ್ಣುಬಾಯಂಬಿಡವೆಪ್ರಾಣಿಗಳು ॥ ಕೊರಲ ಕೊಯಿದಾಕ್ಷಣದಿಮುಂದಕೆ । ಬರದೆಬಿಡದಾವಿಧಿನಿಜದಿವರ । ನರರು ಕೊಲೆಗೆಳಸುವರೆ ಕೊಲೆನರಧರ್ಮವಲ್ಲವದು ॥ ೭೭ ॥

ಇಂದುಹಿಂಸೆಯಗೈವಮಿಗೆಜನ । ವೃಂದದೊಳುಕೆಲಜನರುಸಹ ಸದಿ । ಕೊಂದುಪ್ರಾಣಿಯತಿನುವಪಾಪಿಗಳೇನೊಮಿಗೆಮಿಹರು॥ಇಂದು ತ್ರೈಜಗದೊಳಗೆಪ್ರಾಣಿಯ । ಕೊಂದುತಿನ್ನದರಾರುಪೇಳಿರಿ । ಯೆಂದು ಪ್ರಶ್ನೆಯಗೈವರಿದುಕಡುಹೇಯಸಂಗತಿಯು ॥ ೭೮ ॥

ಕೊಂನನೊರ್ವಂಲೋಕವೆಲ್ಲಕೆ । ತಂನಮೆಯ್ಯಂತೆಂದುಬಗೆ ಯಲು । ಕೊಂನರಹರೇಲೋಕವೆಲ್ಲವುಏಕೆನುಡಿಯುವರೊ ॥ ತಂನ ತಾನರಿಯಧಕಡುಹಿಕೊಲೆ । ಯಂನೆನೆವನಲ್ಲದೆಮಹಾಪುರು । ಷಂನೆ ನೆವನೇಜೀವಹಿಂಸೆಯನದರೊಳಗೆಕೆಲಬರ್ ॥ ೭೯ ॥

ಸಲ್ಲಲಿತದೀಧರೆಯೊಳಗೆರತಿ । ಪಲ್ಲವಿಸಿಮಿಗೆಬೆಳೆದಧಾನ್ಯಗ । ಳೆಲ್ಲಪ್ರಾಣಿಗಳಲ್ಲವೇಅದನೇಕೆಭಕ್ಷಿಸಿರಿ ॥ ಸೊಲ್ಲಿಸೆನುವರುಭೂಜಪ್ರಾಣಿ ಯು । ಮಲ್ಲವದುಚೈತನ್ಯವೇದದ । ಸೊಲ್ಲಿನೊಳುಚೇತನಮಚೇತನ ಪ್ರಾಣಮೆಂದೆಂಬ ॥ ೮೦ ॥

ಮೂದೆರದೊಳೆಸೆದಿಹವುಪಾಷಾ । ಣಾದಿಲೋಹಮಚೇತನಂ ಭೂ । ಜಾದಿಗಳುಚೇತನಮನುಜಖಗಮೃಗಗಳೇಪ್ರಾಣಂ ॥ ವೇದನೆ ಯೆಪ್ರಾಣಕ್ಕೆಚೇತನ । ಮಾದುದವಕೆಂದೆಂದುಮಿಲ್ಲಂ । ಛೇದಿಸಿದಡೂ ಚೇತನಕೆಮೃತವಿಲ್ಲನೋವಿಲ್ಲಂ ॥ ೮೧ ॥

ಕೇಶನಖಮಂ ಖಂಡಿಸಲ್ಕವು । ನಾಶಮಪ್ಪವೆಮುನ್ನಿನಂತೆವಿ ಶೇಷಮಾಗವೆಖಂಡಿಸಲುನೊಂದಪವೆಯವರಂತೆ ॥ ಈಸಕಲಚೈತನ್ಯ ಹಿಂಸಾ । ಭ್ಯಾಸಕಲ್ಪನೆಸಕಲಧಾನ್ಯವಿ । ಶೇಷಭಕ್ಷಣೆಗಿಲ್ಲಪ್ರಾಣಿಯ ಕೊಂದವರಿಗೊಳವು ॥ ೮೨ ॥

ಇದನುಮನಸಿಗೆತಂದುಸರ್ವರು । ವಿದಿತಸರ್ವಪ್ರಾಣಿಗಳನುಂ । ಮುದದಿತನ್ನೊಲುತಿಳಿದುತನ್ನಯಮೇಲೆತನಗಿರುವ ॥ ಸದಯಪ್ರೇಮವಜಗದಿಜೀವಿಪ । ವಿಧವಿಧದಪ್ರಾಣಿಗಳಮೇಲೆಯು । ಚದುರತನದಿಂದಿರಿಸುವುದೆಸುಜ್ಞಾನಿಲಕ್ಷಣವು ॥ ೬೩ ॥

ಈತೆರದೊಳೆಸಗಿದಡೆಸಂತತ । ಭೂತಳದೊಳೆಸೆವಿತರಪ್ರಾಣಿಗಳೋತುಪರಮಸಹಾನುಭೂತಿಯುತನಗೆದೊರೆವುದಱಿಂ ॥ ಖ್ಯಾತದೇವ್ವಷಾಸೂಯೆಯಿಂಮಿಗೆ । ಪೂತಮನದವಿಕಾರವಾಗುವ । ಹೇತುವೇಸಂಭವಿಸದೋಲಾಗುವುದುಲೋಕದೊಳು ॥ ೬೪ ॥

ಕ್ಷಿತಿಯೊಳಗೆಸತತದೊಳಹಿಂಸಾ । ವ್ರತವನಾಶ್ರಯಿಸಿರ್ಪವರಬಳಿ । ಸತತಮಿತರಪ್ರಾಣಿಗಳುಸಹತಮ್ಮತಮ್ಮೊಳಗೆ ॥ ಮಿತವದಿಲ್ಲದವೈರಭಾವವ । ನತಿವಹಿಲದಿಂ ತ್ಯಜಿಸಿತೋಷದಿ । ವಿತತಸ್ನೇಹದದೊಳಿರ್ಪವವು ಋಷ್ಯಾಶ್ರಮಂಗಳೊಳು ॥ ೬೫ ॥

ಶೋಳಪಸಾರಂಗದಮರಿಯುಸಲೆ । ಪುಲಿಮೊಲೆಯನುಣುತಿತ್ತು ಬಿಸಿಲಿಂ । ಬಳಲಿಬಂದಾಸರ್ಪವದುವರನವಿಲಗರಿನೆಳಲೋಳ್ ॥ ನಲವಿನಿಂನಲಿಯುತ್ತಲಿತ್ತುರೆ । ಯಿಲಿಯುಬೆಕ್ಕುಗಳೊಂದುಗೂಡಿಯೆ । ಲಲಿತಚೆಲ್ಲಾಟದೊಳುಶೊಡಗಿರುತಿರ್ದವಾನೆಗಳ ॥ ೬೬ ॥

ಮಿರುಪಚರಣಕೆನೆಟ್ಟಕಂಟಕ । ವಿರದೆಸಿಂಗವುಕೀಳುತಿತ್ತತಿ । ಭರದಿಯೆನುತಲಿಯಮ್ಮಗ್ರಂಥಗಳೊಳಗೆಲಿಖಿಸಿರ್ಪ ॥ ಪರಮವಿಷಯಂಗಳಿಗೆತಿರೆಯೊಳು । ಮೆರೆದಖಿಪುಷಿಗಳಹಿಂಸೆಸಿದ್ಧಿಯೆ । ಪಿರಿದುಮೂಲಾಧಾರಮೆಂದರಿಯುವುದುಸುಜ್ಞರುಗಳ್ ॥ ೬೭ ॥

ಈತೆರದಿಜಗದೊಳಗಹಿಂಸೆಯ । ಪೂತಮಾದಪ್ರಭಾವವಾಪರಿ । ಓತುಪ್ರತಿಬಿಂಬಿಸಾತಿಶಯದಿಂದಿತರಪ್ರಾಣಿಗಳುರುಮನದಮೇಲೆ ॥ ಓತುಪ್ರತಿಬಿಂಬಿ ... ಪ್ರೀತಿಯಿಂದದನೈದೆಸುವನಿತುವರ । ಭೂತಳದಿಬಲವತ್ತರವದಿರೆ । ಪ್ರೀತಿಯಿಂದದನೈದೆವ್ಯಾಸಂಗವನುಗೈದಿರ್ಪ ॥ ೬೮ ॥

ಜನರಮನಸಿನಮೇಲಹಿಂಸೆಯು । ಮೆನಿತುವರಸಂಸ್ಕಾರಮಂ ನೆರೆ । ಘನತರದಿಬೀರಿರಲುಬಹುದೆಂಬುದನುನೀವುಗಳೀ ॥ ಸನುಮತ ದಿಯೋಚಿಸಿರಿಯದರಿಂ । ವಿನುಪಲೋಕದಿವರವಿವೇಕದೊ । ಳನು ದಿನದಿಮೆರೆವೆಲ್ಲವ್ಯವಹಾರಂಗಳೊಳುನೀವು ॥ ೮೯ ॥

ಪ್ರಾಣಿಹಿಂಸೆಯದೂರಮಾಡುತೆ । ಸಾನುರಾಗದಿಜೀವದಯೆ ಯದು । ಮೀನೆಲದಿಘನಧರ್ಮಮೆನುತಂತಿಳಿದುನಸೆವಾಗ ॥ ಜ್ಞಾನ ದಿಂನುಡಿವಾಗನಿಖಿಲ । ಪ್ರಾಣಿತತಿಗಾವಾಗಳುಂನಸು । ಹೀನಭಾವದಿ ನೋಯಿಸದೊಲಿರುತಿರ್ಪುದೇಜಗದಿ ॥ ೯೦ ॥

ಪರಮಮುಕ್ತಿಯಸಾಧನೆಗೆಬಹು । ತರದಿಪರಮಸಹಾಯಕವ ದಾ । ಗಿರುವುದವಿರತಮೆಸೆಯುತಿರುತಿಹತಪಸಿನಡಿಗಲ್ಲೆ ॥ ಪಿರಿದಹಿಂಸೆ ಯಹಿಂಸೆಯಿಂದಲಿ । ಪರಮಶಾಂತಿಯುಶಾಂತಿಯಿಂದಲಿ । ಸರಸವ ಹಸುಜ್ಞಾನವಾಸುಜ್ಞಾನದಿಂಮೋಕ್ಷಂ ॥ ೯೧ ॥

ತಿರೆಯೊಳೀಪರಿಪಿರಿದಹಿಂಸೆಯ । ಪರಮಮಹಿಮವನಿಗಮತ ತಿಗಳು । ನಿರುತಮುಗ್ಗಡಿಸುತ್ತಲಿರ್ಪವುನಿಖಿಲಜಗವರಿಯೆ ॥ ಧರೆ ಯೊಳೆನ್ನೆವರೆಸೆಯುವೀಘನ । ತರದಸತ್ಯವಹಿಂಸೆಮಹಿಮವ । ದುರು ಮೆರೆವಲೋಕದೊಳುಪಸರಿಸಿಸರ್ವಜನರುಗಳು ॥ ೯೨ ॥

ಸದಯಮಾನಸರಾಗಿಮುದದಿಂ । ದದರಪರಿನೆರೆಯಾಚರಿಪುದಿ । ಲ್ಲದುವರೆಗುಮಿಳೆಯೊಳಗೆರಾಜಿಪ ಶಾಂತಿಸೌಖ್ಯಗಳು ॥ ಒದಗಲಾರ ವುನಿಜದಿತಿಳುಕನ । ವಿದಿತಕನಸಿನಪರಿಯದಾಗುವು । ದಿದನುನೆರೆಯ ರಿದೆಸೆವಸರ್ವರುಶ್ರೇಷ್ಠವಾಗಿರ್ಪ ॥ ೯೩ ॥

ಪರಮಸತ್ಯವಹಿಂಸೆಗಳನುರು । ತರದಿನೆರೆಪ್ರತಿಯೋರ್ವಮನು ಜನು । ಹರುಷದಿಂದಾಚರಿಸಲೀವರತಿರೆಯೆಭಾವಿಸಲು ॥ ಪರಮಸ್ವ ರ್ಗವದಾಗುವದರೊಳು । ಸರುವಥಾಸಂದೆಗವದಿಲ್ಲವು । ಭರದಿಧರೆಯ ಸುಧಾರಣೆಯಶಿಖರಕ್ಕೆಮುಟ್ಟಿಸಲು ॥ ೯೪ ॥

ವಿತತಸತ್ಯವಹಿಂಸೆಗಳೆಯೀ । ಕ್ಷಿತಿಯೊಳಗೆಪರಮಾಸ್ತ್ರವಾಗಿ
ಹ । ವಿತರಶಸ್ತ್ರಾಸ್ತ್ರಗಳುಮವುಗಳಸರಿಸದಲಿಮುಖವ ॥ ಸತತತಗ್ಗಿಸಿ
ಕೊಂಡುನಿಲ್ಲುವ । ಗತಿಯುಮೊದಗುವುದಿದುವೆನಿಶ್ಚಯ । ಚತುರರಿ
ದನುರುತಿಳಿದುಲೋಕೋದ್ಧಾರಕಾರ್ಯಕ್ಕೆ ॥ ೯೫ ॥

ಅಸಮಸತ್ಯವಹಿಂಸೆಗಳನೇ । ಎಸೆಯುವಸ್ತ್ರಗಳಾಗಿಗೈದುರೆ ।
ವಸುಧೆಯೊಳುಸುಖಶಾಂತಿಗಳ ನೆಲೆಗೊಳಿಪುದದುಯೋಗ್ಯಂ ॥ ವಸು
ಮತಿಯೊಳೆನಿತೋಮಹಾತ್ಮರು । ಮಿಸುಪಸತ್ಯವಹಿಂಸೆಯಿಂದಲೆ ।
ಜಸವಡೆದುರಾಜಿಸುವರಾಚಂದ್ರಾರ್ಕವಾಗೈದೆ ॥ ೯೬ ॥

ಎಂದುಮಿಗೆವಿವರದೊಳುಬೋಧಿಸ । ಲಂದುಭಕ್ತಸಮೂಹವಾ
ಲಿಸಿ । ಸಂದತಮ್ಮುರುತರದಬೋಧಾಮೃತವಸಲೆಸವಿದು ॥ ಇಂದು
ನಾವ್‌ಕಡುಧನ್ಯರಾದೆವು । ಯೆಂದುಪರಕೆಯಪಡೆದುಘನಮುದ ।
ದಿಂದಸದನಂಗಳಿಗೆ ತೆರಳಿದರವರನುತಿಸುತ್ತ ॥ ೯೭ ॥

ಕುಜನಗರ್ವವಿಭಂಗಭಕ್ತ । ವ್ರಜವಿನೋದಪ್ರಮಥನುತಪಂ ।
ಕಜನಿಭಾನನಪುಣ್ಯವಿಗ್ರಹಸಿಂಧುಗಂಭೀರ ॥ ಅಜನವಾಸಮಹಾಫಲ
ಪ್ರದ । ಸುಜನಪಾಲಕಪರಮವೃಷಭ । ಧ್ವಜಶಿವಪ್ರದ ಸಲಹುಚರ
ಬಸವಾರ್ಯಸಂತಸದಿ ॥ ೯೮ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ।
ಕ್ಷರಗಳಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು
ಕೇಳುವುದು ಪದಿನಾಲ್ಕನೆಯ ಸಂಧಿ ॥ ೯೯ ॥

ಸಂಧಿ ೧೪ ಕ್ಕಂ ಪದ ೮೫೪ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಓಂ ಶ್ರೀ ವಾಮದೇವಾಯನಮಃ ॥

# ಹದಿನೈದನೆಯ ಸಂಧಿ



ಸೂಚನೆ ॥ ಚಾರುಶಹಪುರದೊಳಗೆಯಮಿಗಳು ।
ಕ್ರೂರಭೂತವಬಿಡಿಸಿಮಹಿಮದಿ ।
ವೀರಭಕ್ತರಿಗೊರೆದರಷ್ಟಾವರಣಮಹಿಮೆಗಳಂ ॥

ಗಣಪತೀಪಿತಜಯತುನಿರ್ಜರ । ಗಣಪತೀಶ್ವರಜಯತುಕಿನ್ನರ । ಗಣಪತೀಸಖಜಯತುಮೃತ್ಯುನಿಶಾಟಜಯಪ್ರಮಥ ॥ ಗಣಪತೀಪತಿಜಯತುಭೇಷಜ । ಗಣಪಶೇಖರಜಯತುಪನ್ನಗ । ಗಣಪತೀಭೂಷಣಜಯತು ಸರ್ವೇಶಜಯಜಯತು ॥ ೧ ॥

ದೊರೆವಡೆದಬಸವಾರ್ಯರುಗಳುರು । ಮೆರೆವಶಹಪುರದೊಳಗೆ ತಮ್ಮಯ । ಪರಮಮಠದೊಳುಬಸವಪೌರಾಣವನು ನಡಸಿರಲು ॥ ಚರವರರಮಹಿಮೆಗಳಕೇಳು । ತ್ತರರೆ ! ಜನಗಳುಕಾಂಬತವಕದಿ । ಪರಿಷೆಯೊಡನೈತಂದು ಶ್ರೀಗಳಚರಣಸರಸಿಜಕೆ ॥ ೨ ॥

ಪೂತಮನದಿಂವಂದಿಸುತ ತ । ಮ್ಮಾತುಮದಕ್ಲೇಶಗಳಪೇಳು । ತ್ತೋತುವರಗಳಪಡೆದುತೆರಳುತ್ತಿರ್ದರಖಿಲಜನಂ ॥ ಭೂತಗ್ರಸ್ತರು ಬಂದುಯಮಿಕುಲ । ನಾಥನಂಘ್ರಿಗೆನಮಿಸಲಾಗಳೆ । ಭೀತಿಯಿಂಬಿಟ್ಟೋಡುತಿರ್ದವು ಸಕಲಭೂತಗಳು ॥ ೩ ॥

ಒಂದುದಿನಶಹಪುರದಿರಾಜಿಪ । ಸಂದಕನ್ಯಾಮಣಿಯದೇಹದಿ । ಬಂಧುರದಭೂತವುಪ್ರವೇಶಿಸಿ ಚೇಷ್ಟಿಸುತ್ತಾಗಳ್ ॥ ಮಂದಬುದ್ಧಿಯ ಮಾನವರಿಗಾ । ನಿಂದೊಶವೆ ಕೇಳ್ಸಕಲಭೂತಗ । ಳಂದವಲ್ಲಲೆಯನ್ನು ನೀಗಳ್‌ಬಿಡಿಪರಾರೆಂದು ॥ ೪ ॥

ಪರಿಪರಿಯುವಿಧದಿಂದಚೀರುತ। ಕರಕರನೆಪಲ್ಲುಗಳಕಡಿಯುತ। ಸರಸರನೆಪಾರುತ್ತ ಬಹುಪರಿನಟಿಸುತಿರಲಾಗಳ್ ॥ ಪುರದಜನಗಳು ಕಂಡುವಿಸಯದಿ। ಪರಮಚರಬಸವಾರ್ಯರಲ್ಲಿಗೆ। ಕರೆದುತಂದೀಸ್ತ್ರೀ ಯದೇಹದೊಳಿರ್ಪಭೂತವಿದು ॥ ೫ ॥

ಅರಿಗುಂವಶವಿಲ್ಲವದರಿಂ । ಮೀರಿಕರುಣವತೋರಿನೀವೇ । ಪಾರುಮಾಡುವುದೆನುತವರಪದಕೆರಗಿ ಬೇಡಿಕೊಳೆ ॥ ಮಾರಹರರೂಪಿ ಗಳುವ್ರೊಯ್ಯನೆ । ಸಾರಭಸಿತವತರಿಸಿದೇಹಕೆ । ಭೂರಿದಯದಿಂಬಸ ವನೆನುತಲಿ ಧರಿಸಲಾಕ್ಷಣವೆ ॥ ೬ ॥

ತರುಣಿದೇಹದೊಳರಿವುದೋರುತೆ। ಗುರುಪದಕೆನಮಿಸುತ್ತ ತೆರ ಳಲು । ನೆರೆದಜನರಿದನೋಡಿ ವಿಸ್ಮಯತಳೆದುತಲೆದೂಗಿ ॥ ತಿರೆಯೊ ಳೀಪರಿಮಹಿಮರಿಲ್ಲೆನು । ತೆರಗಿಬಗೆಬಗೆನುತಿಸಿಮಹಿಮರೆ । ಮೆರೆವ ತಮ್ಮಯಮುಖದೊಳಷ್ಟಾವರಣಮಹಿಮೆಗಳ ॥ ೭ ॥

ತಿಳಿದುಕೊಳಬೇಕೆನುವಕಾಂಕ್ಷೆಯು । ಮೊಳೆದಿರುವಕತದಿಂದ ಲೀಗಳ್ ।.ಸುಲಲಿತದಿಬೋಧಿಸುತೆ ಧನ್ಯರಗೈವುದೆನುತೈದೆ ॥ ಅಲಘು ತರದಿಂಬೇಡಿಕೊಳೆಶಿತಿ । ಗಳನರೂಪನುನಿಮ್ಮಮನದೊಲೆ । ನಿಲದೆ ಬೋಧಿಪೆನೆನುತಲುಸುರಲ್ತೊಡಗಿದನುನಲವಿಂ ॥ ೮ ॥

ಪರಮತರಗುರುಲಿಂಗಜಂಗಮ । ದುರಿತಹರವರಭಸಿತರುದ್ರಾ। ಕ್ಷರುತರದಶಿವಮಂತ್ರಪರಮಪ್ರಸಾದಮೀಭವವ ॥ ಹರಿಪಪಾದೋ ದಕಗಳನೆಶೃತಿ।.ಯೊರೆವುದಷ್ಟಾವರಣಮೆನುತಲಿ। ನಿರವಿಸುವೆಕ್ರಮ ವಾಗಿಯೊಂದೊಂದರಮಹತ್ವವನು ॥ ೯ ॥

ಮಿರುಪನಮ್ಮಯಕರಕೆಮುದದಿಂ। ದುರಿತಹರಶಿವಕರದಲಿಂಗ ವ।. ನಿರುತಪೂಜಿಸಿರೆನುತಹರುಷದಿ ಕರುಣಿಸಿರುತಿರ್ಪ ॥ ಗುರುವೆಬ್ರ ಹ್ಮನುಗುರುವೆವಿಷ್ಣುವು । ಗುರುವೆರುದ್ರನುಗುರುವೆಭದ್ರನು । ಗುರು ವೆಪಿತೃವು ಗುರುವೆಮಾತೃವು ಗುರುವೆನಿಜಬಂಧು ॥ ೧೦ ॥

ಗುರುವೆಪರತರಮುಕ್ತಿಗೊಡೆಯನು । ಗುರುವೆಜಗದುದಯಾದಿಗಾದ್ಯನು । ಗುರುವಿಗಧಿಕವದಿಲ್ಲವೆನುತೊರೆಯುವುದುವರಶೃತಿಯು ॥ ನರರದುರಿತವಕಳೆಯಲೋಸುಗ । ಹರನೆವರಗುರುರೂಪವಾನುತ । ಚರಿಸುತಿರ್ಪನು ರಸೆಯೊಳಿದನರಿಯುವುದುನೀವುಕರಂ ॥ ೧೧ ॥

ತನುಧನವನೊಸೆದಿತ್ತುಗುರುಪದ । ಮನದೊಳೊಯ್ಯನೆಜಾನವೆಸಗುತೆ । ನೆನೆವರಘವಂಕಳೆವಸಾಧಕನೆಂದುನೆರೆನಂಬಿ ॥ ಮನಸಿಜಾರಿಯ ದಯವನೈದಲು । ವಿನುತಸುಖಸಂಪದವಪಡೆಯಲು । ಘನಗುರುವೆ ಗತಿಯೆಂದುಮನದೊಳಗರಿದುಬಾಳುವುದು ॥ ೧೨ ॥

ಪಸಿದಜಂಗಮಗೃಹಕೆಬಂದಡೆ । ಬಸುರೊಳಗೆಬ್ರಹ್ಮಾಂಡ ದುಂಬಿದ । ಪಶುಪತಿಯೆತಾನೆಂದುಭಾವಿಸುತ್ಕೈದೆಮನದೊಳಗೆ ॥ ಪುಸಿಯದಾಗಳೆಗುರುವಭಕ್ತಿಯೊ । ಳಸಮುಸಂತಸವೆತ್ತುಸೇವಿಸಿ । ಹಸನ ಮಾಗುಣಬಡಿಪನವಗುರುಭಕ್ತನೆನಿಸುವನು ॥ ೧೩ ॥

ವನಿತೆಧನಕುಲರೂಪಮೊದಲಾ । ದನಿತುವನುಹುಸಿದೆಂದುನಂಬುತೆ । ವಿನುತಸಮಯಾಚಾರಧರ್ಮವನೆಲ್ಲ ನೆರೆತ್ಯಜಿಸಿ ॥ ತನಗೆಸರಿಯಿಲ್ಲೆಂದುಬೀಗುವ । ಮನುಜಗುರುತತ್ವಾರ್ಥವರುಪುತೆ । ಮನಕೆಶಾಂತಿಯನೀವಗುರುವಂ ಸತತಸ್ಮರಿಸುವುದು ॥ ೧೪ ॥

ಭವವನೀಗಲುಶಿವನನೊಲಿಸಲು । ಜವನಬಾಧೆಯತಡೆಯಲಪ್ಪೊಡೆ । ಭುವಿಯೊಳವಿರತಜಸವಪಡೆಯಲು ಗುರುವೆನೆರವೈಸೆ ॥ ತವಿಸಿಪಾಪವದಿವ್ಯತತ್ವದ । ನಿವಹದಾಗರವೆನಿಪಗುರುವನು । ಜವದೊಳರ್ಚಿಸಿನೆನೆವರಿಹಪರಸುಖವನೈದುವರು ॥ ೧೫ ॥

ರಾಗದೂರನುಯೋಗಮಾನಸ । ನಾಗಮಜ್ಞನುದಾರಶೀಲನು । ಭೋಗಮೋಕ್ಷಗಳೀವಮಹಿಮನುಸುಗುಣಮಂಡಿತನು ॥ ನೀಗಿಕ್ರೊಳಗುವನಾರುವರ್ಗವ । ನಾಗುಹೋಗುವನರಿದುಭಕ್ತನ । ಭಾಗದೊಡೆಯನೆನಿಪ್ಪಗುರುವನು ಮರೆಯದಿರಿಸತತಂ ॥ ೧೬ ॥

ಅಂಗಲಿಂಗದಸಾಮರಸ್ಯವ । ನಿಂಗಿತದೊಳರಿಯುತ್ತಮನದೊ
ಳು । ಮಂಗಳಾಕರನಾಗಿಮೆರೆಯುವ ಗುರುವಿನೆಡೆಗೈದಿ ॥ ಪಿಂಗದೊ
ಯ್ಯನೆನಮಿಸಿಪದದೊಳು । ಭಂಗಬಡುತಿಹೆನಧಿಕಭವದೊಳು । ಹಿಂಗಿ
ಸೆಂದೊಲವಿನಲಿಗುರುವಂ ನುತಿಸಿಸುಖಿಸುವುದು ॥ ೧೭ ॥

ಗುರುವೆಯಷ್ಟಾವರಣಕಾದ್ಯನು । ಗುರುವೆಘನತರಲಿಂಗದಾತ
ನು । ಗುರುವೆಜಂಗಮನಾಗಿಮೆರೆವ ಪ್ರಸಾದವೀಯುತಲಿ ॥ ಗುರುವಿ
ನಿಂದಲಿತೀರ್ಥಮಂತ್ರವು । ವರಭಸಿತರುದ್ರಾಕ್ಷಪಾವನ । ಗುರುವೆಧ
ರ್ಮಪಮೂಲಪದವಿದನರಿದುಚರಿಸುವುದು ॥ ೧೮ ॥

ಗುರುವುಸಾಂನೀನೆನುತಭುವಿಯೊಳು । ಬರಿದೆಡಂಬವ ಬಡಿಯುತಿ
ರ್ಪರು । ಗುರುವಿನಲ್ಲಿಹಗುಣವುತಮ್ಮೊಳಗಿಲ್ಲದಲೆನಿರುತಂ ॥ ಮರು
ಳುಮನುಜರುಭ್ರಾಂತಿಯಿಂದಲಿ । ದುರುಳರಿಗೆವರಗುರುಗಳೆನುತಲಿ ।
ಕರೆಯುತಿಹುದಿದುಬೇಡ ಮೀರಿದಡಂಬಮೆನಿಸುವುದು ॥ ೧೯ ॥

ಗುರುವುಯೀಪರಿಯಂತರಂಗದ । ಪರಮಜೋತಿಯನೆಮಗೆಕ
ರುಣದೊ । ಳರಿದೆತೋರಿಸಿಮೋಕ್ಷಮಾರ್ಗವ ಪಿಡಿಸುವನುಸತ್ಯಂ ॥
ಅರಿದುಕೊಳ್ಳಿರಿಗುರುಮಹತ್ವವು । ತಿರೆಯೊಳಗೆಮೀರಿಹುದುಲಿಂಗದ ।
ವರಮಹಿಂಮೆನಿರವಿಸುವೆ ಚಿತ್ತವನಿರಿಸಿಲಾಲಿಪುದು ॥ ೨೦ ॥

ಲಿಂಗವೆನೆಪರಮಾತ್ಮಪಾವನ । ಲಿಂಗವೆನೆಪರತತ್ವವನುಪಮ ।
ಲಿಂಗನಿಷ್ಕಲವಸ್ತುಚೇತನರೂಪಚಿದ್ಘನವು ॥ ಲಿಂಗಮಧ್ಯದಿನಿಖಿಲ
ಲೋಕವು । ಲಿಂಗದಿಂಪೆರತೊಂದುಮಿಲ್ಲವು । ಲಿಂಗವೇಜಗದಾದಿವಸ್ತು
ವು ಲಿಂಗವಪ್ಪಯವು ॥ ೨೧ ॥

ಲಿಂಗವೆಮ್ಮಯಹಸ್ತಕಮಲಕೆ । ಭೃಂಗವಾಗುತೆಕಂಗಳೆರಡ
ನು । ಸಿಂಗರದಿಮಿಗೆಪೀರಿಮನಕುರು ಮೋದವೀಯುವುದು ॥ ಮಂಗ
ಳಾಕರಮೆನಿಪಲಿಂಗವ । ಸಂಗದೊಳುನಿಮಿಷಾರ್ಧಸಹಿತಂ । ಪಿಂಗ
ದಂತಿರುತಿರ್ಪುದೇ ನಿಜವೀರಶೈವತ್ವಂ ॥ ೨೨ ॥

ಪರಿವಮನವಂ ಪಿಡಿದುತಂದುರು । ಚರಿಸುವಿಂದ್ರಿಯಗಳನು
ನೊಂದೆಡೆ । ಯಿರಿಸಿ ಪರತರವಸ್ತುವಂ ಪರಿಪರಿಯುತೆರದಿಂದೆ ॥
ಇರದೆಜ್ಞಾನವನೆಸಗಿ ಸುಖಿಸು । ತ್ತರಿವುಬಂದುರು ಮರವೆನೀಗುತೆ।
ಸರಸದಿಂ ಸಲೆರಮಿಸಲಿಕೆ ಘನಚಿನ್ಹವಾಗಿಹುದು ॥ ೨೩ ॥

ಕಾಮಿಸಿದವಸ್ತುವನುತಪಕದಿ । ಕಾಮದುಘವೀವಂತೆಮನ
ದೊಳು । ಪ್ರೇಮದಿಂಕಲ್ಪಿಸಿದಫಲಗಳ ಕಲ್ಪತರುವೀವ್ರೊಲ್॥ ಭೂಮಿ
ಯೊಳುಚಿಂತಿಸುತಬೇಡಿದ । ಡಾಮಹಾಚಿಂತಾಮಣಿಯುತವೆ। ಭೂ
ಮಹಿತಫಲಗಳನು ಕೊಡುವಂತಿಷ್ಟಲಿಂಗವನು ॥ ೨೪ ॥

ಧರಣಿಯೊಳುತಮಗಾವಫಲಗಳು । ದೊರೆಯಬೇಕೆನುವಾಸೆ
ಯಿರ್ಪುದೊ। ಪರಿಕಿಸಲ್ಯಾಫಲಗಳನೆಮಿಗೆಯಿಚ್ಚಿಸುತನಾಡೆ॥ ಪರ
ಮಲಿಂಗಾರ್ಚನೆಯನೆಸಗಲು। ಭರದೊಳವುಗಳನಿರದೆಕೊಡುವುದು।
ತಿರೆಯೊಳಿದುಪುಸಿಯಲ್ಲವನುಭವಸಿದ್ಧವಾಗಿಹದು ॥ ೨೫ ॥

ಅಂಗವದುಮಾಲಿನ್ಯವೀಕ್ಷಿಸೆ । ಲಿಂಗವದುನಿರ್ಮಲವುನಿರು
ತಂ। ಲಿಂಗಮೇಣಂಗಕ್ಕೈಕಣೆಯಿಲ್ಲೆಂಬಸಂದೇಹಂ ॥ ಜಂಗುಳಿಗೆಭವ
ಹರಿಯದವಿರತ। ಲಿಂಗವಂಗವದೊಂದೆಯೆಂಬುವ। ಮಂಗಳದಭಾ
ವನೆಯೆಸರ್ವೋತ್ಕೃಷ್ಟವಾಗಿಹುದು॥ ೨೬ ॥

ಚಿನ್ನಬಣ್ಣಗಳಂತೆಪರಿಕಿಸೆ। ರನ್ನದೀಪ್ತಿಗಳಂತೆಮಿರುಗುವ।
ಚೆನ್ನಸಂಪಿಗೆಪುಷ್ಪಪರಿಮಳದಂತೆಧರೆಯೊಳಗೆ॥ಉನ್ನತದಲಿಂಗಾಂಗ
ಕವಿರತ। ಭಿನ್ನವಿಲ್ಲದೆಯೇಕವಾಗಿಹು । ದೆನ್ನುತಲಿತಿಳಿಯುವುದೆ
ಘನಸಿದ್ಧಾಂತವಾಗಿಹುದು ॥ ೨೭ ॥

ಸತಿಯುತತ್ಪತಿಯೊಡನೆ ತೋಷದಿ । ಪತಿಭಕುತೆಯಾಗಿರಲು
ಪರತರ । ಗತಿಮುಕುತಿನೋಡಲ್ಕೆಯೊಂದೇ ಅಹುದುಲಿಂಗಾಂಗ॥
ದ್ವಿತಯತಾನೊಂದೇಪರೀಕ್ಷಿಸೆ। ಪೃಥುವಿಯೊಳುಬೇರಿಲ್ಲವಂಗವು।
ಪತಿವ್ರತಾಲಕ್ಷಣದವರ್ತನದಿಂದಲಿರುತಿರ್ಕುಂ ॥ ೨೮ ॥

ಲಿಂಗವನೆಪತಿಯೆಂದುತಿಳಿಯುತೆ। ಪಿಂಗದಲೆಸತಿಯಾಗಿತಾನು
ರು। ಲಿಂಗವನುಪೂಜಿಸಲುಮೆರೆವೀ ರಸೆಯೊಳಗೆಸಾಕ್ಷಾತ್ ॥ ಲಿಂಗವೇ
ತಾನಾಗಿರ್ತೋಪ್ರ್ಪನು । ಲಿಂಗದೊಳುಮನವಿಡದವಸರನಿಗೆ। ಪಿಂಗದೆಂದಿ
ಗುನರಕ ನಿಸ್ಸಂಶಯವಿದೀಕ್ಷಿಸಲು ॥ ೨೯ ॥

ಇಷ್ಟಲಿಂಗವುಸತತತನ್ನಯ । ನಿಷ್ಟವೆಲ್ಲವಪರಿಹರಿಸಿಮಿಗೆ।
ಯಿಷ್ಟಸಿದ್ಧಿಯನೀವವಸ್ತುವಿದೆಂಬ ಘನತರದ ॥ ನಿಷ್ಠೆಯಂನೆಲೆ
ಗೊಳಿಸಿಪರಮತ । ರಷ್ಟವಿಧಸುಸಕೀಲಗಳನರಿ । ದಷ್ಟಮೂರುತಿಕೃ
ಪೆಯವಡೆವನೆ ಧನ್ಯನೀಜಗದೊಳ್ ॥ ೩೦ ॥

ವೀರಶೈವರುಮೆನಿಸುವವರಾ । ಮೂರುಲಿಂಗಗಳಂ ಧರಿಸಿಮಿ
ಗೆ। ಪಾರಮಾರ್ಥವಕಂಡುಬಾರರು ಮರಳಿಭವದೊಳಗೆ ॥ ಸಾರಸುಖ
ವನುಸೀರಿಹರುಷವ । ಮೀರಿಪಡೆಯಲೆನುತ್ತೆಕರುಣದಿ । ಮೂರುಗೂ
ಡಿಯೆ ವಂದುರೂಪದಿ ಬೆಳಗಿದೆ ಸುರಸೆಯೊಳ್ ॥ ೩೧ ॥

ಎದೆಯಮೇಲುರುಮಿರುಪಲಿಂಗವ । ಪದುಳದಿಂದಂ ಧರಿಸಿ
ಕೊಂಡಾ। ನದಿಯುಕೊಳಮೇಣ್ ತೀರ್ಥಯಾತ್ರೆಗಳಲ್ಲಿರಾಜಿಸುವ॥
ವಿದಿತದೇವರಮುಂದೆಬೀಳುತೆ। ಯದೆಯಲಿಂಗವಕೆಳಗೆಮಾಡುತ।
ಮುದದಿಬೇಡಿಕೊಳುತ್ತಲಿರ್ಪರುಮೂಢಜನರಕಟ ॥ ೩೨ ॥

ಎಡೆಯಲಿಂಗವಬಿಟ್ಟುಮನುಜರು । ಗುಡಿಯದೇವರಬಳಿಗೆ
ಗಮಿಸುತೆ । ಯಡೆಸುಕರ್ಪೂರಕಾಯಿಗಳನತಿಮುದದಿ ಕೊಡುತಿರ್ಪ
ರ್ ॥ ಸಡಗರದಿಯುತ್ಸವಗಳಂಕಡು। ದೃಢದಿಬಿಡದೆಸಗುವರು ತಮ್ಮ
ಗ। ಳೊಡೆಯರುಗಳಾಜ್ಞೆಯನುಮೀರುತೆ ಜ್ಞಾನಶೂನ್ಯರುಗಳ್ ॥೩೩॥

ತನುಮನವುಮೇಣ್ಭಾವಶುದ್ಧವು । ಕೊನೆಗೆಮುಕ್ತಿಯಸುಖ
ವುಸಿದ್ಧವು । ವಿನುತಲಿಂಗವದೆಸ್ಮೃದೇಹದಿರಾಜಿಸುತ್ತಿರಲು ॥ ಎನಿ
ತೊಮುಡಿಮೈಲಿಗೆಗಳುರುತರ। ಜನನಮರಣದಸೂತಕಂಗಳು । ಕನ
ಸುಮನಸಿನೊಳಿರದೆ ನಸಿಸುತೆ ಸುಖವುಸಲೆಲಭಿಕುಂ ॥ ೩೪ ॥

ಪರಮಲಿಂಗದಮಹಿಮೆಯುಸುರ | ಲ್ಕರಡೆ ಧರೆಯಂಪೊತ್ತ
ಮಿರುಪಾ | ಉರುಗಪತಿಗಳವಲ್ಲವೆನೆ ನರರಿಂಗದೇಸಳವೆ॥ ಒರೆವೆನು
ದದಿಂಮತ್ತೆಜಂಗಮ | ದುರುತರದಮಹಿಮೆಯನುವಿವರದಿ | ಸರುವ
ರಿದನಾಲಿಪುದು ಕರಮೇಕಾಗ್ರಚಿತ್ತದೊಳು ॥ ೩೫ ॥

ಜಂಗಮವೆಜಗದಾದಿದೇವನು | ಜಂಗಮವೆಜಗದೀಶರೂಪನು|
ಜಂಗಮವೆವರ ತ್ರಿಜಗವಂದಿತನನಘನನುಪಮನು ॥ ಜಂಗಮವೆಭೂ
ಲೋಕರುದ್ರನು | ಜಂಗಮವೆವೇದಕ್ಕತೀತನು | ಜಂಗಮವೆನಿಃಕಲ
ನು ನಿಶ್ಶೂನ್ಯನು ನಿರಂಜನನು ॥ ೩೬ ॥

ಹರನುತಾನೇಲೀಲೆಯಿಂದಲಿ | ನರನರೂಪದಿಬಂದುರಾಜಿಪ |
ಧರೆಯನಿಖಿಲಪ್ರಾಣಿನಿಕರಕೆ ದಯವತೋರುತ್ತೆ ॥ ಪರಮತತ್ವಗಳಿರ
ದೆಜಗದೊಳು | ಪರಡುತನುದಿನ ದುರಿತಗಳನುರು| ತರದಿನೀಗುತತ್ರಿಜ
ಗವಂದಿತನಾದಜಂಗಮನು ॥ ೩೭ ॥

ಮಿರುಪಬ್ರಹ್ಮಾಂಡದೊಳುಜನಿಸ್ರಿಸಿ | ಚರಿಪಸಕಲಪ್ರಾಣಿವಿಸ
ರಕೆ | ಬರುವಸರುವಕ್ಲೇಶಗಳ ಸಲೆದೂರಗೈಯುತ್ತೆ ॥ ಪರಮಮಮ
ತೆಯೊಳನಿಶತಾನುಂ | ಸರಸಸೇವೆಯನೆಸಗಿಮನದೊಳು | ಹರುಷಮಂ
ಮಿಗೆಪೊಂದಿ ಬೆಳಗುತ್ತಿರ್ಪಜ್ಞಾನನಿಧಿ ॥ ೩೮ ॥

ಪರಮದಿವ್ಯಜ್ಞಾನಜೋತಿಯು | ನರನರೂಪದಿಬಂದುಮೋದ
ದಿ | ಧರೆಯನೆಲ್ಲವಬೆಳಗುತಿಪ್ಪುದು ಚಿತ್ಪ್ರಕಾಶದೊಳು ॥ ತರಣಿಪೊ
ಗುರುಬೆಳಕನೀಯುತೆ | ತಿರೆಯಜೀವಿಗಳಿರದೆಕಾವನು | ಮಿರುಪ
ಜಂಗಮನಂತರಂಗವಬೆಳಗುವಂ ಒತದಿ ॥ ೩೯ ॥

ಪಾರಮಾರ್ಥದಶಿಖರಮೆನಿಸಿದ | ವೀರಶೈವಮತಪ್ರಭಾವವ|
ಸಾರುತಿರ್ಪಂಕೃತಿಗಳಿಂದಲಿಸರ್ವಲೋಕಕ್ಕೆ ॥ ಮೀರಿಮೆರೆಯುಪತ
ನ್ನನಡೆಯನು | ತೋರಿಲೋಕವುಚರಿಸಲೆಂದುಂ | ತೋರುತಿರ್ಪನು
ಹಿತವಸಕಲಪ್ರಾಣಿತತಿಗಳಿಗೆ ॥ ೪೦ ॥

ನಿರತಿಲಿಂಗದನಿಷ್ಠೆ ಪ್ರೇಮವು। ಕರುಣೆಜ್ಞಾನಸುಪರುಷವಾಕ್ಯ
ವು। ಪರುಷಹಸ್ತದಿಲೋಕದೊಳು ಘನವಂದ್ಯನಾಗಿರ್ಪ ॥ ಪರಮ
ಜಂಗಮಮೂರ್ತಿಯನುಪಮ। ಚರಣಯುಗಮೆನ್ನಯಶಿರಾಗ್ರದಿ।
ನಿರುತರಾಜಿಸಲೆಂದುವೇದವುಘೋಷಿಸುವುದೈದೆ ॥ ೪೧ ॥

ತರಣಿಯುದಯದಕಾಲದೊಳುಭವ। ಹರನರೂಪಸುಜಂಗಮ
ನವರ। ದರುಶನವಮಾಡಿದಡೆಜಗದಿ ತ್ರಿಕೋಟಿಲಿಂಗಗಳ ॥ ದರುಶನ
ದಫಲವದುವೆಶವಕದೊ। ಳಿರದೆಲಭಿಸುವುದೆರಗಲಗಣಿತ। ಪರಮತೀ
ರ್ಥಸ್ನಾನಫಲವದುದೊರೆವುದಿದುಸಿದ್ಧಂ ॥ ೪೨ ॥

ಜಂಗಮವನಿಂದೆಯನುಗೈಯುತೆ। ಲಿಂಗವಂಪೂಜಿಸುವಭಕ್ತ
ನು। ಭಂಗಕೊಳಗಾಗುವನುಭುವಿಯೊಳುಸಟೆಯಮಾತಲ್ಲಂ ॥ ಜಂಗ
ಮದದರ್ಶನದಮಾತ್ರದಿ। ಮಂಗಳಾತ್ಮಕರಾಗುವೆವುನಿಜ। ಜಂಗಮ
ವುಗುರುವಿಂಗೆಗುರುವಾಗಿಹುದುಲೋಕದೊಳು ॥ ೪೩ ॥

ಮನೆಮಠಗಳಾಸೆಗಳುಮೇಣುರು। ಬಿನುಗುಜೀವದಿಬಿನದಿಪಾಶೆ
ಯು। ಕನಸುಮನಸುಗಳಲ್ಲಿ ಸಹತ್ರೈಮಲದವಾಸನೆಗಳ್ ॥ ಜನಿತ
ವಾಗಿಯೆನಲಿಯುತಿರುತಿರೆ। ಘನವಿರಕ್ತಿಯಜಂಗಮೆನ್ನಲು। ಮನ
ಸುಬಾರದುಶಿವಶಿವಾಈಪರಿಯಚರರಿಂಗೆ ॥ ೪೪ ॥

ಛೀಎನುತೆವರಧರೆಧನಂಗಳ। ಛೀಎನುತೆಸತಿಸುತರಬಳಗವ।
ಛೀಎನುತೆಧರೆಯೊಳಗೆ ವರದೇಹಾದಿಭೋಗಗಳ ॥ ಛೀಎನುತೆನೆರೆಕಾ
ಮಕ್ರೋಧವ। ಛೀಎನುತೆಕಡುಲೋಭಮೋಹವ। ಛೀಎನುತೆಮ
ದಮತ್ಸರವಕಳೆಯುವನೆಜಂಗಮನು ॥ ೪೫ ॥

ಜಂಗಮವನೆರೆನಂಬಿಸೇವೆಯ। ಹಿಂಗದಂತೆಸಗುವನಭವಭ
ಯ। ಹಿಂಗಿನಿತ್ಯಾನಂದದೊಳು ಲೋಲಾಡುವನುಸತ್ಯಂ ॥ ಜಂಗಮ
ದಮಹಿಮೆಗಳನುಸುರಲು। ತುಂಗವಿಧಿಗಳವಲ್ಲನರರುಗ। ಳಿಂಗೆಸಾ
ಧ್ಯವೆಮತ್ತೆಭೂತಿಯಮಹಿಮೆಸೊಲ್ಲಿಸುವೆ ॥ ೪೬ ॥

ವರಫಣೆಗೆಶೃಂಗಾರಮಾಗಿಹ । ಪರಮಭಸ್ಮದಪರಿಯದಂತಿ
ನೆ । ಹರನಪಡುವಲುಬಡಗತೆಂಕಣ ಮೂಡಮೋಲ್ಮೊಗದಿಂ ॥ ನಿರು
ತದಿಂಪಿಂಗಳಶಿತಾಸಿತ । ಮಿರುಪಧೂಮ್ರಾರುಣದವರ್ಣನಿ । ಕರದಿ
ನಂದೆ ಸುಭದ್ರೆ ಸುರಭಿ ಸುಶೀಲೆ ಸುಮನೆಯೆನಲ್ ॥ ೪೭ ॥

ನಾಮಭೇದದಧೇನವುಗಳಿಂ । ದೀಮಹಿಂತಭೂತಿಯುಭಸಿತ
ಮುಂ । ನೇಮುಭಸ್ಮಂಕ್ಷಾರಮುಂ ರಕ್ಷೆಯದುಮುದರಿಂದ ॥ ಶ್ರೀಮ
ಹಾಭಸಿತವದುಪುಟ್ಟಿಹು । ದೀಮತಸುಮಾರ್ಗ್ಗಂಗಳ್ಕಿದಿಹ । ವೀಮು
ಹಿಗೆಕಲ್ಪಾನುಕಲ್ಪಸಕಲ್ಪವೈಕಲ್ಪ ॥ ೪೮ ॥

ಎಂಬವುಗಳೊಳುಕಲ್ಪವಿಧಿಯಿಂ । ದೆರಬಭೂತಿಯದುತ್ತಮ
ತರಂ । ಎಂಬುದದುದೊರಕದಿರೆಮಿಕ್ಕಾನಾಲ್ಕನೆಸಗುವುದು ॥ ಸಾಂಬ
ಲೇಪನಪ್ರಿಯವಿಭೂತಿಯ । ನಂಬಿಮಾಡುವವಿಧವಕೇಳಿರಿ । ಕೊಂಬು
ದುತ್ತಮಗೋಮಯವದಂ ಭುವಿಯೊಳಗೆಪತನ ॥ ೪೯ ॥

ಆಗಲೀಸದದಂಕರದೆಪಿಡಿ । ವಾಗಳಂಬುಜಪತ್ರದೊಳಗಿಡು ।
ವಾಗಸದ್ಯೋಜಾತಮೆಂತ್ರೋಚ್ಚರಣವಂಮಾಡಿ ॥ ಭೋಗಮೋಕ್ಷಸು
ಕಾರಣಾತ್ಮಕ । ವಾಗಿಮೆರೆದಿಹವಾಮದೇವದಿ । ಬೇಗಪಿಂಡಂಗಳನು
ಗೊಳಿಸುತೆತತ್ಪುರುಷದಿಂದೆ ॥ ೫೦ ॥

ಆರಲಿಡುತಲಘೋರಮಂತ್ರೋ । ಚ್ಚಾರಣದಿಶೈವಾಗ್ನಿಮ
ಧ್ಯದಿ । ಸೇರಿಸುವುದದುಕಲ್ಪವೈ ಗಹನಾಂತರದೊಳೊಣಗೀ ॥ ಶೋ
ರುಶಿಪರ್ಣಗೋಮಯವುಕ್ಕೆ । ಸಾರೆತಿಳಿಸಿದಪೂರ್ವವಿಧಸುವಿ । ಚಾರ
ದಿಂಸುಡಲದನುಮನುಕಲ್ಪವದೆನಿಸುತಿಹುದು ॥ ೫೧ ॥

ತಾನೆಸುಟ್ಟಾಬೂದಿಯೊಳುಕಸ । ವೇನುವುಳಿಸದೆವಸ್ತ್ರದಿಂದೆನ
ವೀನವಾಗಲುಶೋಧಿಸುತೆಗೋಮೂತ್ರದಿಂಪಿಂಡ ॥ ವೆಂನಿಯತದಿಂ
ಮಾಡೆಮನುಜಂ । ಮಾನಿತಸಕಲ್ಪವದೆನಿಸುವುದು । ಯೇನುಮನುಸ
ರಿಸದಿಹವಿಧವದಕಲ್ಪವೆನಿಸುವುದು ॥ ೫೨ ॥

ಎಂದರಿದುಮೇತದ್ವಿಭೂತಿಯ । ಮುಂದಮಹಿಮಾಖಿಳವಿಧಿಗಳಂ । ಹೊಂದಿ ಶ್ರೀಕಾಲಾಗ್ನಿರುದ್ರೋಪನಿಷದುಕ್ತಿಯೊಳು ॥ ಸಂದಿಹುದುಶೃತ್ಯಂತಸೂಕ್ತಾ । ನಂದಮಾರ್ಗದಿಸಿರವುಮುಖಪದ । ಮುಂದುಗೊಂಡಿರುವವಯವಗಳೊಳಗನವರತಬಿಡದೆ ॥ ೫೩ ॥

ಧಾರಣವಮಾಡುವತ್ರಿಪುಂಡ್ರದ । ಕಾರಣಂಮಿಗೆಸಿದ್ಧವಪ್ಪುದ । ಮಾರಯಿಪುತಿಂತಿಹಭಸಿತವದನಾ ಮಹಾಮಹಿಮಂ ॥ ಧಾರಣವಮಾಡುವನವಂಸ್ಥಿರ । ಭೂರಥನುಮಹನಿದಕೆಸಂಶಯ । ದೋರುವುದೆಯಣುಮಾತ್ರಮುಂಲಾಲಿಪುದುಮುಂದಿನ್ನೂ ॥ ೫೪ ॥

ಶ್ರೀಕರಂಮುಕ್ತ್ಯಂಗನಾಸುವ । ಶೀಕರಣಕೃತ್ಯಾಂಕತಿಲಕಂ । ಪ್ರಾಕಟಿತಸಂಸಿದ್ಧಿಕರಪ್ರಖ್ಯಾತಿಯುಹಭೂತಿ॥ ಆಕುಲಿತಘನಘೋರಪಾಪಾ। ನೀಕವಸುಧಾಭೃತ್ಸಮುಚ್ಚಯ । ಪಾಕಶಾಸನಪಾಣಿಸಂಸ್ಥಿತಹೇತಿಚಿದ್ಭೂತಿ ॥ ೫೫ ॥

ಉರಗರಾಟ್ಕಂಕಣಶರೀರಾಂ । ತರವಿಲೇಪನಪ್ರೀತಿಭೂತಿಯು । ಸ್ಫುರಿತಫಾಲತಲಾಂಬುಜೋದ್ಭವ ಪೂರ್ವವಿಲಿಖಿತದ ॥ ಪರಮಪಾಪಾಕ್ಷರನಿಶಿಗೆಭಾ । ಸುರಪ್ರಭಾಮಯಜೋತಿಭೂತಿಯು । ಸ್ಥಿರತರಾತ್ಮೀಯೈಕಮಾನಸಸದನುಪಮಸುಭಕ್ತಿ ॥ ೫೬ ॥

ಭಾವನಾಧಾರವುಸುಭೂತಿಯು । ಮೀವಿಭೂತಿಮಹಾಮಹತ್ತ್ವಯ । ನೋವಿನಿರವಿಸಲಾಮಹಾಸುರಗುರುವಿಗಳವಲ್ಲ ॥ ಸಾವಧಾನದಿಫಣೆಗೆಭಸಿತವ । ಭಾವಜಾಂತಕನಸಮುಸ್ಮರಣೆಯೊ। ಳಾವಕಾಲದಿಧರಿಸಲದರಿಂ ಸರ್ವಸುಖಸಿದ್ಧಂ ॥ ೫೭ ॥

ಸಾರಭೂತಿಯುಪರಮಲಿಂಗವು । ವೀರಶೈವದಚಿಹ್ನಮಿಪ್ಪುದು । ಭೂರಿಭಕ್ತಿಯೊಳವನುದೇಹದಿಧರಿಪಶರಣರನು ॥ ಮಾರಹರಸಮರೆಂದುಭಾವಿಸಿ । ಮೀರಿರಾಜಿಸುವವರಚರಣಕ । ಪಾರವಿನಯದಿನಮಿಪೆವೆನುತಾಗಮಗಳುಸುರುವವು ॥ ೫೮॥

ಹರನುವಹ್ನಿಯನೇತ್ರದಿಂಸಲೆ। ಸ್ಮರನದಹಿಸುತೆಭಸ್ಮಗೈದು ರು। ಮಿರುಪತನ್ನಯತನುವಿಗದನುಂ ಪೊಡೆದಮಾಳ್ಕಿಯೊಳು ॥ ಸಿರಿ ಸುಸತಿಸುತಹಿತರುಮೆಲ್ಲರು। ಸ್ಥಿರವುಯೆಂಬಾಶೆಯುಸುರಸೆಯೊಳು। ಹುರಿದಪರಮೋತ್ಕೃಷ್ಟಭೂತಿಗೆಭುವಿಯೊಳೆಣೆಯುಂಟೆ ॥ ೫೯ ॥

ಭಸಿತದಿಂತನುವದುವಿಶುದ್ಧಿಯು। ಭಸಿತದಿಂಪರಮನವುಶುದ್ಧಿಯು। ಭಸಿತದಿಂಮಿಗೆಭಾವ ಶುದ್ಧಿಯುಸರ್ವಸಿದ್ಧಿಪವು ॥ ಭಸಿತವಂಸಲೆಧರಿಸುವವರಿಗೆ। ವ್ಯಸನವಿಘ್ನಗಳಾವುಬಾರವು। ನಶಿಸಿ ಪೋಪವುಸಕಲಭೂತಪ್ರೇತಬಾಧೆಗಳು ॥ ೬೦ ॥

ಮೂರುಬೆರಳುಗಳಿಂದಭಸಿತವ। ಮೀರಿಭಕ್ತಿಯೊಳ್ಳೈದೆತಳೆಯಲು। ಮೂರುತಾಪಗಳಳಿದು ಪೋಪವುತವಕದಿಂದಿರದೆ ॥ ವೀರಶೈವರುಶ್ರೇಷ್ಠಮಾಗಿಹ। ಪಾರಮಾರ್ಥದತತ್ವಬಿಡಿಪುರು। ಸಾರಸುಖಮಂಪಡೆವರೀಭಸಿತಪ್ರಭಾವದೊಳು ॥ ೬೧ ॥

ಭಸಿತಮಂಹರಿಯಜರುಸಹಮಿಗೆ। ಸಸಿನೆಯಿಂಧರಿಸುವರೆನುತ್ತಲಿ। ಪೊಸೆದುಸಾರುವುದನಿಶಜಾಬಾ ಲೋಪನಿಷದವದು ॥ ವಸುಮತಿಯೊಳುರುಭಸಿತಧರಿಸುತ। ಲಸಮುಮುಕ್ತಿಯುವಡೆದುಸುಖಿಸು। ತ್ತಿಸೆವವರಕಥೆಗಳನುವಿವರಿಪೆ ಮುದದೊಳಾಲಿಪುದು ॥ ೬೨ ॥

ಓರ್ವಪಾಪಿಯುರೋಗಬಾಧಾ। ಪೂರ್ವಕದೆಸಂಚಾರಗೈವುತೆ। ಗುರ್ವಿನಿಂದಿಹಪಕ್ಕಣದ ಬಾಹ್ಯದೆಶ್ಮಶಾನವಹ ॥ ಊರ್ವಿಯೊಳ್ಬಿದ್ದಿರಲುಶುನಕಂ। ಸಾರ್ವದೇಹಂಭಸಿತಮಯವೆನೆ। ಉರ್ವಿಮೆಟ್ಟುತಲವನದೇಹವಕಾಲ್ಗಳಿಂತುಳಿಯೆ ॥ ೬೩ ॥

ಆಮಹಾಪಾತಕಿಯದೇಹದೆ। ನೇಮದಿಂಮುದ್ರೆಗಳುಮೊಪ್ಪಿರೆ। ಪಾಮರನುಮಾಸಮಯದೊಳ್ನಿಜ ಪ್ರಾಣಮಂಬಿಡಲು ॥ ತಾಮರಸಮಿತ್ರೋದ್ಭವನಭಟ। ರಾಮಹಾರಯದಿಂದಲವನಂ। ಭೀಮತರದಿಂ ಶಿಕ್ಷಿಸಲುಯಮನಿದಿರುನಿಲ್ಲಿಸಲು ॥ ೬೪ ॥

ಆಸಮಯದೊಳಗಾಕೃತಾಂತನು । ಮೂಸುಶೀಲನನೋಡಿಪ್ರಾಣಾಂ । ಶಾಸುಕಾಲದೊಳಾಗಿರುವ ಭಸ್ಮೈಕಧಾರಣದ ॥ ಲೇಸೆನಿಪ ಮಾಹಾತ್ಮ್ಯವಶದಿಂ । ದೇಸಮಸ್ತಾಘಗಳಕಳೆದು ಶು । ಭಾಸಮೇತನೆನಿಪ್ಪಕತದೆ ಮದೀಯಸಿಕ್ಷೆಗಿವಂ ॥ ೬೫ ॥

ಎಂಶುಪ್ರಾಪ್ತನೆನುತ್ತೆಸನ್ಮತಿ । ವಂತನವನಂಮಾನಪೂರ್ವಕ । ದಿಂತರುಣಶಶಿಶೇಖರನ ಲೋಕಕ್ಕೆಘನತರದ ॥ ಸಂತಸದಿಕಳುಹಿದನು ನಾಗಿಯ । ನಂತಮಹಿಮಾಸ್ಪದವೆನಿಪ ಭ । ಸ್ಮಂತಳೆದಸತ್ಕೃತ್ಯನಿಂತಿಹುದಂತುಮಲ್ಲದೆಯುಂ ॥ ೬೬ ॥

ಲೋಕಶ್ರೀಪ್ಮರೆಕೇಳ್ಳುದೀಭೂ । ಲೋಕದೇವನುಮೋರ್ವಘೋರಾ । ನೇಕಪಾಪಾಚಾರನಾಗಿರಲವನಬಂಧುಗಳು ॥ ಸಾಕಲಿತದುಷ್ಕೃತ್ಯಗಳಕಂ । ಡಾಕನಿಷ್ಮನಸೇರಲೀಯದೆ । ಲೌಕಿಕದೊಳವನಂ ಕುಲದೊಳುಬಹಿಷ್ಕರಿಸಲವನು ॥ ೬೭ ॥

ಸಕಲವಂನೆರೆಬಿಟ್ಟುಪೋಗುತೆ । ವಿಕಲನಾಗಿಯೆಘೋರವಿಪಿನಾಂ । ತಿಕದೊಳಿರುತಿಹಪಕ್ಕಣಪ್ರಾದೇಶವಂಸೇರಿ ॥ ಬುಕುತಿಗಿಲ್ಲದೆ ಖೇದಭಾಷಾ । ಪ್ರಕಟಕಾಕುಸ್ವರನಿಯುತನಾ । ಗಕಟಕಟಗೈದಿರ್ದಪಾಪಗಳಿಲ್ಲೆಯನುಭವಿಪ ॥ ೬೮ ॥

ಕಾರಣವನೀಜನರಕಣ್ಣಿಗೆ । ತೋರುತಿಪನಿದುಸತ್ಯಮೆಂದೆನೆ । ಪಾರುವನದೇಹಕ್ಕೆಕುಷ್ಟವುಪ್ರಾಪ್ತವಾಗಿರಲು ॥ ಆರುನೋಡಲಸಹ್ಯಮಾನಶ । ರೀರನಂತಮ್ಮಯನಿಕಟಮಂ । ಸೇರಲೀಯದಪೂತಿಗಂಧಾನಿಲವದಾಸ್ಥಾನ ॥ ೬೯ ॥

ಎಲ್ಲತುಂಬಿರಲಡಿಯಿಡಲುಬಲ । ವಿಲ್ಲದೀಷನ್ಮಾತ್ರಮುಂಪಿಡಿ । ದಲ್ಲಿಗಲ್ಲಿಗೆಕಡಿದುಬರುವೊಲು ಪಾರುವನದೇಹಂ ॥ ಮೆಲ್ಲಮೆಲ್ಲನೆಹಶಿವತಾಳದೆ । ಭಿಲ್ಲಗ್ರಾಮಸಮೀಪದಡವಿಯ । ಹುಲ್ಲಿನೊಳುತಿರುಗುತ್ತಲಿರ್ದನದಕ್ಕೆಪೂರ್ವದೊಳು ॥ ೭೦ ॥

ವನಹುತಾಶನದಲ್ಲಿಸುಟ್ಟ । ರ್ದನಲವಡಗಿದ ಗೋಮಯಶ
ಕಲ।ವನುನಿರೀಕ್ಷಿಸಿತನ್ನಹೊಟ್ಟೆಯುಹಶಿದಕಾರಣದೆ॥ ಮನವೆಳಸಿಭ
ರದಿಂದಕೈಕೊಂ। ಡನುನಯದೊಳಿನಿತಿನಿತುತಿನ್ನುತೆ। ಘನಭಸಿತರಾ
ಶಿಯೊಳುಬಿದ್ದನುಯೇಳಲಾರದಲೆ ॥ ೭೧ ॥

ಬಿದ್ದಿರಲುಘೋರಾಟವಿಯುಸುಡು। ತಿದ್ದಭೂತಲದುಷ್ಣದಿಂ
ವಡೆ। ದಿದ್ದಸಕಲಶರೀರಪಟಪಟ ಸೀಳ್ವುಮತ್ತವನಂ ॥ ಹೊದ್ದಿದ
ಸುವಂಬಿಡುವಸಮಯದೊ। ಳಿದ್ದುಬಂದರುಯಮನದೂತರು।ಗದ್ದ
ಲವಮಾಡುತ್ತೆಘೋರಗದಾದಿಪ್ರಾಣಿಗಳು ॥ ೭೨ ॥

ಅತಿಭಯಂಕರಯಮನಕಿಂಕರ । ತತಿಯುಸೂಕ್ಷ್ಮಶರೀರಮು
ಮನೂ। ರ್ಜಿತದಿಕೊಂಡೊಯ್ದಾತನಂ ಶಮನಾಂತಿಕದೊಳಿಡಲು॥
ಮೃತಪತಿಯುನಡುನಡುಗುತಂಶಂ। ಕಿತದಿನಿಜಕಿಂಕರರದೂರುತೆ।
ಕ್ಷಿತಿಯೊಳೀತಂದುಷ್ಕೃತಾನೇಕಗಳನೆಸಗಿದೊಡೇಂ ॥ ೭೩ ॥

ಕಾಲನಾಗುವಸಮಯದೊಳುಭವ । ಮೂಲಘನಕುದ್ದಾಲ
ವೆನಿಸಮ। ಹಾಲಸಿತಭಸ್ಮವನುತಿಂದನುಲೇಪಿಸಿಹನಾಗಿ॥ ನೀಲಗಳ
ತೇಜವನುಗೊಂಡಸು। ಶೀಲನಿಲ್ಲಿರಲಾಪನೆಂತುವಿ। ಶಾಲಸುಕೃತನು
ಮೆಂಬುದಂನೀವರಿಯದಿರ್ಪಿರಲಾ ॥ ೭೪ ॥

ಎನುತೆವೈವಸ್ವತನುನೂತನ । ಘನತರದಪುಷ್ಪಕವಿಮಾನ
ದೊ। ಳನುನಯದಿಕುಳ್ಳಿರಿಸಿಮುದ ದಿಂದತುಲವೈಭವದಿ॥ ಅನಿಮಿ
ಷರುಮಚ್ಚರಿಯಗೊಳುತಿರೆ। ಧನದಸಖಪಟ್ಟಣಕೆಕಳುಹಿದ। ನನು
ಪಮಸುಹಿತದಿಂದಲಾಯನಘಾತ್ಮನಂ ಮುದದಿ ॥ ೭೫ ॥

ಈವಿಧದಮಹಿಮೆಯೊಳುತ್ರಿಜಗವ । ಪಾವನವಮಾಡುವಸು
ಭಸಿತವ।ನಾವಗಂಧರಿಸುತ್ತಸಲೆ ಕೃತಕೃತ್ಯರಾಗುವುದು ॥ ಸಾವಧಾ
ನದಿಕೇಳಿಕೈನೀ। ವೀವಸುಂಧರೆಯೊಳಗೆರಾಜಿಪ। ಪಾವನದರುದ್ರಾ
ಕ್ಷಿಮಹಿಮೆಯನೊರೆವೆನೋದದೊಳು ॥ ೭೬ ॥

ರಾಕ್ಷಸಾನ್ವಯನಾಯಕರಪೊಳ॥ಲೀಕ್ಷಿತಿಯತಲದಲ್ಲಿದಹಿಂಸೆನಿ ।
ಶೀಕ್ಷಣೆಯಮಾಡುವಮಹೀರಥನಕ್ಷಿಕಂಕಣವು ॥ ಆಕ್ಷಣವೆಭೂಪತನ
ವಾಗೆಸಲ । ಲಕ್ಷಣದಿಭೂಜನರುಗಳಭವ । ಮೋಕ್ಷರಂಮಾಡುವತನ
ದಿರುದ್ರಾಕ್ಷಿಭೂಜಗಳು ॥ ೭೭ ॥

ನೇಮದಿಂಸಂಜನಿಸಿದವುಗಿರಿ । ಧಾಮಪ್ರಿಯಕಾರಣಸುಭೂಷ
ಣ । ಸೋಮವಹ್ನ್ಯರ್ಕಾಂಶ ರುಚಿರಶಿವಾಕ್ಷಮಣಿಗಳನು ॥ ಆಮಹೇ
ಶೋಕ್ತಕ್ರಮದಿಸ । ಪ್ರೇಮದಿಂತನುವಿನೊಳುಧರಿಸಲು । ಕಾಮಿತಾ
ರ್ಥಗಳಿರದೆದೊರೆವುವುಭರದಿಭೂತಳದೊಳ್ ॥ ೭೮ ॥

ಹರನನೇತ್ರದಬಿಂದುಸರವನು । ನಿರುತಕಂಠದಿಧರಿಸೆಹರುಷದಿ।
ಪರಮಶಾಂತಿಸುತೇಜಜೋತಿಯು ನೆಲಸುವವುಮತ್ತಂ ॥ ದುರಿತನಿಕ
ರವುಭಸ್ಮವಾಗುತೆ । ಪಿರಿದುಸಿರಿಯಾರೋಗ್ಯಮೋಕ್ಷಗ । ಳಿರದೆಭರ
ದಿಂಲಭಿಸುವವುಪುಸಿಯಲ್ಲಮೀವಚನಂ ॥ ೭೯ ॥

ನೊಸಲೊಳಗೆವರಭಸಿತಲಿಂಗವ । ನೆಸೆವಕೊರಳೊಳಗಕ್ಷಿಮಾ
ಲೆಯ । ನೊಸೆದುಸತತಂಧರಿಸಿಘನತರಹಸಿತಮುಖದಿಂದೆ ॥ ಮಿಸುಪ
ಮೂರ್ತಿಯನೋಡೆಸಾಕ್ಷಾತ್ । ಪಶುಪತಿಯೆನಿಜಮೆಂದುತಿಳಿಯು ।
ತ್ತಸಮಭಕ್ತಿಯೊಳವನಚರಣಕ್ಕೆರಗುವನೆಧನ್ಯಂ ॥ ೮೦ ॥

ಪ್ರತಿದಿನವುರುದ್ರಾಕ್ಷಿಧಾರಣ । ವತಿಹಿತದಿಮಿಗೆಮಾಡಿಕೊಳ
ಲೀ । ಕ್ಷಿತಿಯೊಳಗೆಶತಕೋಟಿ ಗೋದಾನಗಳಫಲವಿರದೆ ॥ ಶಿತಿಗಳನ
ಕರುಣದೊಳುದೊರೆವುದು । ವಿತತಮಣಿಯಂತೇದುಗೌರೀ । ಪತಿಯ
ಸ್ಮರಿಸುತಕುಡಿಯಲಂತ್ಯದಿಬೆರೆವನಾಹರನೊಳ್ ॥ ೮೧ ॥

ಸುರರುತಾಳ್ದರುವೇದಧರಿಸಿದ । ವರಕೆ ! ಹರಿಯಜರರಿದುತಳೆ
ದರು । ಹರುಷದಿಂದಿದನಾವನೋರ್ವನು ಧರಿಸಿದೊಡೆನೋಡೆ ॥ ಧರೆ
ಯೊಳೆಂತಹದುರಿತಮಾದಡು । ಹರಣವಾಗುತರುದ್ರಲೋಕಕೆ। ತೆರ
ಳಿಸರ್ವದಸುಖದಿಲೋಲಾಡುವನುಮಿದುಸತ್ಯಂ ॥ ೮೨ ॥

ಪೂರ್ವದೊಳುಶಬರನುವಿಪಿನದೊಳ । ಗೋರ್ವನಾಮೃಗಯಾ
ವಿಹಾರಣ । ಪೂರ್ವಕಂಬಂದಿರೆ ಸರೋವರತೀರಸದ್ದೇಶ ॥ ದೂರ್ವಿ
ಯೊಳುಬಿದ್ದಿರ್ದ್ದಶೋಭಿತ । ಶರ್ವಲೋಚನಸಜನಿತಮಣಿಗಳ । ಸಾರ್ವ
ದೇಹದಿಧರಿಸದೊಂದಂ ಶ್ವಾನಗಳದಲ್ಲಿ ॥ ೮೩ ॥

ಬಂಧಿಸುತೆಬೇಂಟೆಯಕೃತಕವಮಂ । ಹೊಂದಿರುವನಂವಿಪಿನ
ಕ್ರೋಡವು । ಮಂದಗತಿಯಿಂಬಂದು ಶುನಿಸಹನಾಗಿಕೊಲಲಾಗ ॥
ಇಂದುಧರಕಿಂಕರರುಶೀಘ್ರದೆ । ಬಂದುರುದ್ರಾಕ್ಷಿಯನುನಿಜಕರ ।
ದಿಂದೆಮುಟ್ಟಿದಫಲವುಹೊಂದಿತ್ತೆಂದುವನಚರಸಂ ॥ ೮೪ ॥

ಕೊರಳೊಳಗೆಮಣಿಯಿರ್ದಶುನಕವ । ನಿರದೆಶಿವಲೋಕಕ್ಕೆಕ
ರದೊ । ಯ್ದುರುಹರುಷದೊಳುಪರಮ ನಿಜಪದವಿತ್ತುಮನ್ನಿಸಿದರ್ ॥
ಆರರೆರುದ್ರಾಕ್ಷಿಯಮಹತ್ವವ । ನಿರವಿಸಲುಹರಿಯುಜರಿಗಳವ ।
ಲ್ಲೊರೆವೆಕೇಳಿರಿ ಮತ್ತೆಪಂಚಾಕ್ಷರಿಯಮಹಿಮವನು ॥ ೮೫ ॥

ಶ್ರೀತುಹಿನಗಿರಿಜಾತ್ಮಸರಸೀ । ಜಾತಷಟ್ಚರಣಂರವೀಂದುಸು ।
ವೀತಿಹೋತ್ರಾಕ್ಷನುಮಮರಸಂಯಮಿವರಾನೀಕ ॥ ಪ್ರೀತಿಸಂಪೂಜಿ
ತಪದಾಂಭೋ । ಜಾತನುದ್ಯೋತಿತಶರೀರನು । ಶೀತಕರಜಾಮಾತಗ
ರ್ವ್ವೋದ್ಯೂತವಿಖ್ಯಾತ ॥ ೮೬ ॥

ನಾಗಿಹಶಿವಂಯೋಗಿಜನಕ । ಲ್ಪಾಗಮನಭವನೆನಿಸುತಿರಲಾ ।
ನಾಗಮುಖಪಿತನಾಸ್ಯಪಂಚಕದಿಂದಲುತ್ಪನ್ನ ॥ ವಾಗಿರಲುಪಂಚಾ
ಕ್ಷರೀಯೆನ । ಲಾಗಿಪೆಂಪೆನಿಸಿರ್ಪುದಂ ಚೆ। ನ್ನಾಗಿವಿವರದೆತಿಳಿಸುವೆನು
ನೀವಾಲಿಪುದುಕ್ರಮದಿಂ ॥ ೮೭ ॥

ಭೂತನಾಥನಮಿಗೆವಿರಾಜಿಪ । ಪೂತಪಂಚಾಸ್ಯಂಗಳಿಂದಲಿ ।
ಸಾತಿಶಯದಿಂ ಸಕಲಮಂತ್ರಕ್ಕಧಿಕವಾಗಿರ್ಪ ॥ ಖ್ಯಾತಪಂಚಾಕ್ಷರ
ಗಳಿಂತು । ದ್ಭೂತನಾಗಿಹವೆಲ್ಲಕೂಡ । ಲ್ಯಾತತಂಶಿವತನುವೆನಿಪ
ಪಂಚಾಕ್ಷರೀಮಂತ್ರ ॥ ೮೮ ॥

ರಾಜನಾಗಿರುತಂಜಗದೆವಿ । ಭ್ರಾಜಮಾನವೆನಿಪ್ಪಮಂತ್ರಸ ।
ಮಾಜವಮಾತ್ರುವುಸುಪ್ರಣವಯುತ ಮನಿಸಿಜಪಿಸಲ್ಕೆ ॥ ತೇಜವಾದ
ಷಡಕ್ಷರಿಯುನಿ । ರ್ವ್ಯಾಜದಿಂದಾಗುವುದುತನ್ಮಂ । ತ್ರಾಜಪ್ಪೈಕಂ ಪ್ರ
ಥಿತಪೃಥಿವೀರಥಿಕನಾಗುವನು ॥ ೭೯ ॥

ಅಲ್ಲದಾಕೇವಲನರನುಮೆನೆ । ಸಲ್ಲದಾಗಿಯುಮಿದಕೆಸಂಶಯ ।
ವಿಲ್ಲವೀಭೂತಳದೆತವೆ ವಿಭ್ರಾಜಿಸುತ್ತಿರುವ ॥ ಸಲ್ಲಲಿತಪಂಚಾಕ್ಷರಿಯು
ಸುರ । ವಲ್ಲಭನವರಥೇನುವೆನಿಪುದು । ಬಲ್ಲಿದಸುಪಂಚಾಕ್ಷರಿಯುಸು
ರಕುಜವುಪರಿಕಿಸಲು ॥ ೮೦ ॥

ಸಾರಪಂಚಾಕ್ಷರಿಯುಚಿಂತಾ । ಪೂರಸನ್ಮಣಿಯಹುದು ಪರ
ಮೊಂ । ದಾರಪಂಚಾಕ್ಷರಿಯಫಲಕಿಂ ಮಿಗಿಲುಫಲಮಿಹುದೆ ॥ ಆರು
ಮಾದೊಡುಮರವೆಯಿಂದವಿ । ಚಾರಿಸದಲೆನಮಶ್ಶಿವಾಯಯೆ ।
ನಾರಯುದಿಬ್ರಹ್ಮಘ್ನದೋಷಾದಿಗಳತೊಲಗಿಪುದು ॥ ೮೧ ॥

ಎನಲವಿರತಂಜಪವಮಾಡುವ । ಘನಫಲವನೆಣಿಸಲ್ಕೆಸಾಧ್ಯ
ವೆ । ವನಜಸಂಭವಮುಖ್ಯಪ್ರಾಜ್ಞರು ಪರಮಪರಿಪೂತ ॥ ವಿನುತ
ಮಾದೀಮಂತ್ರಜಪದಿಂ । ದನುಪಮಿತಪದವಿಯನುಪಡೆದರು । ಘನ
ದುರಿತರಾಶಿಯನುಸಂಹರಿಸುವುದುಶೀಘ್ರದೊಳು ॥ ೮೨ ॥

ಪಿರಿದುಶಾಂತವದಾದತಾಣದಿ । ಸರಸದಿಂದಲಿಕುಳಿತುಕೊಳುತು
ರು । ಪೊರಗೆಬಿಡುತಿಹಶ್ವಾಸವನುಮಿಗೆ ತಡೆದುನಿಲ್ಲಿಸುತೆ ॥ ಪರಮ
ಪಂಚಷಡಕ್ಷರಿಯಘನ । ತರದಮಂತ್ರವಜಪಿಸೆಪರಮನೊ । ಳಿರದೆ
ವರಮುನಬೆರೆದುಮಿಗೆಯಾನಂದವನುಭವಿಪಂ ॥ ೮೩ ॥

ಲಿಂಗದೊಳುಘನಮನವನಿಲಿಸುತೆ । ತುಂಗಮಂತ್ರವಸ್ಮರಿಸಿ
ಮೋದದಿ । ಪಿಂಗದಮಳಶ್ರದ್ಧೆಯಿಂದಲಿ ಧ್ಯಾನಮಂಗೈಯ್ಯೆ ॥
ಅಂಗಲಿಂಗವುಸಂಗಮಾಗುತೆ । ಮಂಗಳಾತ್ಮಸುತೇಜಮೀರಿ । ಶೃಂಗ
ಸುಖವನ್ನೇರುವಸುಸಾಮರ್ಥ್ಯಲಭಿಸುವುದು ॥ ೮೪ ॥

ಗುರುವೊರೆದವರಮಂತ್ರವಧುಘನ । ತರದರಿವನೀಯುತ್ತಲಿಹ
ನಿಂ । ಮರವೆನೀಗುತೆಹರುಷದಿಂನೆರೆಪರವಕಾಣುತ್ತೆ ॥ ಪರಮನೊಳು
ತವೆಬೆರೆದಬಳಿಕಂ । ಮರಳಿಮರೆನೀಭವಕೆಬಾರದೆ । ನಿರುತಪರಮನೊ
ಳಿರದೆರಮಿಸುವತೆರದೊಳೆಸಗುವುದು ॥ ೯೫ ॥

ಪರಮಪಂಚಾಕ್ಷರಿಯಜಪಿಸುವ । ನರಗೆಗರಳವದಮೃತವಾಗು
ವು । ದುರುಮಿರುಪಕಾಳೋರಗವುಸರವಿಯೊಲಿದಾಗುವುದು ॥ ಕರಡಿ
ಪುಲಿಕಂಠೀರವಂಗಳು । ಕರುವಿನಂತಾಗುವವುಕೊರಳಸು । ಕೊರೆವ
ಕರವಾಳವದುಕುಸುಮದರಸದೊಲಾಗುವುದು ॥ ೯೬ ॥

ಇಂದ್ರಿಯಂಗಳನಿಗ್ರಹಿಪಕಡು । ದಂದುಗವುಬೇಡಿಂದ್ರಕೀಲ
ದಿ । ಸಂದತಪದಿಂದಾಯಸವಪಡುತಿರ್ಪುದದುಬೇಡ ॥ ನಿಂದಿರಲು
ಬೇಡಗ್ನಿಯೊಳುಮಿಗೆ । ಚಂದಿರಾಯಣವ್ರತದಿಬಹುಪರಿ । ಕಂದಿ
ಕುಂದಿಲಿಬೇಡಶಿವಮಂತ್ರವನೆನಂಬುವುದು ॥ ೯೭ ॥

ಕೊಡುವಕೊಳ್ಳುವಸಮಯದೊಳುತ । ಕ್ಕಡಿಯತೂಗುವಸಮ
ಯದೊಳುಸಲೆ । ಬಿಡದೆಹೊಲದೊಳುರಂಟೆಗಳಹೊಡೆವಾಗಲೆಕ್ಕಣಿಕೆ ॥
ಪಿಡಿದುಬರೆಯುವಸಮಯದೊಳುನೆರೆ । ಪುಡುವಿಡುವರತಿಕ್ರೀಡೆಯೊ
ಳುಸಹ । ತೆಡೆಬಿಡದಲರನಿಮಿಷನುಡಿವುದುಮೃಡನಮಂತ್ರವನು ॥೯೮॥

ಹರನಮಂತ್ರದಮಹಿಮೆಯನುಬಿ । ತ್ತರಿಸುವಡೆಫಣಿರಾಜಗಳ
ವ । ಲ್ಲರರೆಪರಿಕಿಸಲೊಂದುನಾಲಿಗೆಯುವಗೆವಶವಹುದೆ ॥ ಧರೆಯೊಳು
ರುಪಾವನವದೆನಿಸಿಹ । ಪರಮಪಾದೋದಕದಮಹಿಮೆಯ । ಪಿರಿದು
ಹರುಷದೊಳೊರೆವೆನಾಲಿಪುದಮಳಚಿತ್ತದೊಳು ॥ ೯೯ ॥

ಪರಮಶಿವನಾಜ್ಞಾನರಸವದು । ಗುರುವುಲಿಂಗಸುಜಂಗಮರವ
ರ । ಚರಣದ್ವಾರದಿಪರಿದುಬಂದವನಿಯೊಳುಘನವಿಮಳ ॥ ಕರುಣರ
ಸವದುಮೆನಿಸಿಮೆರೆದತಿ । ಪರಮಪಾದೋದಕವದಾಗು । ತ್ತುರುತರದಿ
ಬೆಳಗುತ್ತಲಿರ್ಪುದುವೀರಶೈವರೊಳು ॥ ೧೦೦ ॥

ಏರಿನಿಂದಿಳುಕಲಿಗೆಭರದಿಂ । ನೇರವಾಗಿಯೆಪರಿವಗುಣವದು ।
ನೀರಿಗೆಲ್ಲಂಸಹಜವೆಂಬುವಸತ್ಯಮಾರ್ಗದೊಳು ॥ ಮಾರವೈರಿಯ
ಜ್ಞಾನರಸವದು । ಮೀರಿದಾಕೆಂಜಡೆಯೊಳಿಂದುರು । ಸಾರಕರುಣಾ
ಮೃತವದಾಗಿಸುಪದದಿಪರಿಯುವುದು ॥ ೧೦೧ ॥

ಬೇರುಮೇಲುಂತುದಿಯಕೆಳಗುಂ । ನೇರವಾಗಿಹದೇಹವೃಕ್ಷ
ವು । ಪೀರುತಿಪ್ಪುದುಭಕ್ತಿಸ್ವಾದವಪಾದದಿಂದ್ಯೈದೆ ॥ ಪೀರಿಹೃದಯ
ಸುಮಸ್ತಕದೊಳುಂ । ಮೀರಿಮೆರೆಯುವಕರುಣಜ್ಞಾನಂ । ಪೂರವಾ
ಗುತೆಸುರಿಸುತಿರ್ಪುದುವುಭಯನೇತ್ರಗಳಿಂ ॥ ೧೦೨ ॥

ಕುಡಿವಜಲಭುಂಜಿಪಪದಾರ್ಥದಿ । ತೊಡುವವಸ್ತ್ರಗಳಲ್ಲಿನ
ಮೃಗ । ತೊಡೆಯುರುಗಳತಿಶುದ್ಧಭಾವವಕಲ್ಪಿಸಿರುತಿಪ್ಪರ್ ॥ ಮೃಡ
ನುದಯದೊಳುತ್ರಿವಿಧರೂಪದಿ । ಜಡರುಗಳಿಗುರುತರಕರುಣಮಂ ।
ಬಿಡದೆಕೊಡುವಂಪಾದತೀರ್ಥದರೂಪದಿಂದನಿಶಂ ॥ ೧೦೩ ॥

ವಾರಣಾಸಿಪ್ರಯಾಗಸರಸತಿ । ಚಾರುನರ್ಮದಗಂಗೆಗೌತಮಿ ।
ಸಾರಸಪ್ತಸಮುದ್ರಶತಕೋಟಿಗಳಿಗಿರುತಿರ್ಪ ॥ ಭೂರಿಸತ್ವವುತ್ರಿಜಗ
ವಂದಿತ । ಮಾರಹರನಿಭಜಂಗಮನಮಿಗೆ । ಸಾರತರಚರಣೋದಕಕ್ಕಿ
ರುತಿರ್ಪುದಿದುದಿಟವು ॥ ೧೦೪ ॥

ಜ್ಞಾನನಿಧಿಗಂಜನವುಪಿರಿದ । ಜ್ಞಾನಪರ್ವತಕಸಮುಪವಿಕ
ಡು । ಹೀನಭವತರುಪರಶುರುಜೆಪಂಕಪ್ರಭಾಕರನು ॥ ಭಾನುಸುತಕ
ಡುಕ್ರೂರಭಯಕುರು । ಹೀನದುರಿತಾರಣ್ಯಕಗ್ನಿನಿ । ಧಾನಭಕ್ತಿಗೆಶೇ
ವಿತರಸುರಧೇನುವಾಗಿಹುದು ॥ ೧೦೫ ॥

ಪೊಡಮಡುತನುಜ್ಞೆಯನುಪಡಕೊಂ । ಡೊಡನೆಚರಚರಣವ
ನುಹರುಷದಿ । ಪಿಡಿದುಕರುಣಾಮೃತವಪಡೆದಿರದೊಡನೆಶೇವಿಸುತೆ ॥
ಮುಡಿಗೆನೇತ್ರಕೆತೊಡೆದುಮುಳಿದುದ । ಕುಡಿದುನಿರ್ಬ್ರವಮಾಡಿದೃಢ
ವ್ರತ । ನಡೆಸಲೀಪರಿಪೊಡವಿಯೊಳುಮೃಡನಾಗಿಸುಖವಡೆವಂ ॥ ೧೦೬ ॥

ಒಮ್ಮೆ ಶರಪಾದೋದಕವತನೆ । ನೆಮ್ಮಿ ಶೇವಿಸೆನಿಖಿಲದುಷ್ಕೃ
ತ । ಬೊಮ್ಮಹತ್ಯಾದಿಗಳುನೆರೆ ನಿರ್ಮೂಲವಾಗುವವು ॥ ಸುಮ್ಮನ
ಲ್ಲಿದುಕೋಟಿಜನ್ಮದಿ । ಹಮ್ಮಿನಿಂದೆಸಗಿರ್ದದುರಿತವ । ಗಮ್ಮನುರು
ನೀಗುತ್ತಪರಬೊಮ್ಮನೊಳುಬೆರಸುವುದು ॥ ೧೦೭ ॥

ವೀರಶೈವನುಲಿಂಗಪೂಜೆಯ । ಶೀರಿಸಿದನಂತರದಿಶರನುರು ।
ಚಾರುಚರಣಾರ್ಚನೆಯನೆಸಗುತ್ತಾಮಹಾಚರನ ॥ ಮೀರಿಮೆರೆಯು
ವಪಾದತೀರ್ಥವ । ಭೂರಿಭಕ್ತಿಯೊಳ್ಕೈದೆಸೇವಿಸಿ । ಮೂರವೈರಿಯ
ಕೃಪೆಯಪಡೆದುರುಧನ್ಯರಾಗುವುದು ॥ ೧೦೮ ॥

ಪರಮಪಾದೋದಕಕೆಮಿಗಿಲಾ । ಗಿರುವವಸ್ತುವುತ್ರಿಭುವನದೊ
ಳಿ । ಲ್ಲುರುಪವಿತ್ರವುಮೆನಿಸಿದಿದರ ಮಹತ್ವಬಣ್ಣಿಸಲು ॥ ಹರಿಯಜ
ರಿಗಳವಲ್ಲವೆನೆನಾ । ನೊರೆವೆನೇರಾಜಿಪಪ್ರಸಾದದ । ಪರಮಮಹಿಮೆ
ಯಸೊಲ್ಲಿಸುವೆಮನವಿರಿಸಿಲಾಲಿಪುದು ॥ ೧೦೯ ॥

ಶಿವನುಕರುಣಿಸಿದನ್ನವನುವರ । ಶಿವಪ್ರಸಾದವದೆಂದುತಿಳಿಯು
ತೆ । ಸವಿಯುಕಟುಪುಳಿಲವಣವೆಂಬುವ ಭೇದಮಿಲ್ಲದಲೆ ॥ ಸವಿಸಿ
ಮೋದದಿಧನವನಾರ್ಜಿಸಿ । ಜವದಿಜಂಗಮಕುರುಸಮರ್ಪಿಸಿ । ಶಿವ
ನುಮಿಕ್ಕುದನಿತ್ತನೆನುತಂ ಭಕ್ತಭಾವಿಪುದು ॥ ೧೧೦ ॥

ಹರನುಪರತರಲಿಂಗರೂಪದಿ । ಮೆರೆವನಿಮ್ಮಯಕಂಠದೊಳು
ಮಿಗೆ । ಮರೆಯಬೇಡಿರಿನೊದಲು ಲಿಂಗಕ್ಕೆಡೆಯತೋರುವುದಂ ॥
ಪರಮಲಿಂಗವುತೃಪ್ತಿಯಾಗಲು । ಹರುಷಪೊಂದುವವೆಲ್ಲಪ್ರಾಣಿಗ ।
ಳಿರದೆಶಿವನಂ ನೆನೆದುನಿರುತಪ್ರಸಾದಸೇವಿಪುದು ॥ ೧೧೧ ॥

ನಾನುನನ್ನದುಮೆಂದುನೀವತಿ । ಹೀನಮನದಿಂ ಗಳಿಸಿಕೊಂಡು
ರು । ದಾನಧರ್ಮವ ನೆಸಗದಿರ್ದಡದೇನುಸಾರ್ಥಕವು ॥ಸಾನುರಾಗದಿ
ಪರಮಪುರಹರ । ತಾನೆಯಿತ್ತಿಹನೆಂದುತಿಳಿಯುತೆ । ದಾನಗೈವಡೆಯ
ದುವೆಪರಮಪ್ರಸಾದವರಿಯುವುದು ॥ ೧೧೨ ॥

ವರಪ್ರಸಾದವದಲ್ಲದನ್ನವ । ಹರುಷದಿಂಸೇವಿಸುವನರನಿಗೆ । ಪರಮಮುಕ್ತಿಯುದೊರೆಯದೆಂದಿಗು ಹರನನಿರ್ಮಾಲ್ಯ ॥ ನಿರುತಶಿ ರದೊಳುಧರಿಸಿನೆರೆಸಂ । ಚರಿಸುತಿಹಭಕ್ತಂಗೆತವಕದಿ । ದೊರಕೊಳು ಗುಸತಿಸುತರುಸಿರಿಮೋಕ್ಷವದುಶತಸಿದ್ಧಂ ॥ ೧೧೩ ॥

ವರಪ್ರಸಾದವಸೂಸವಲೆಘನ । ತರದಭಕ್ತಿಯೊಳೈದೆಸೇವಿಸೆ । ಪರಮಪದವಿಯುದೊರೆದು ಧರೆಗೀಶ್ವರನುಮಾಗುವನು ॥ ಪಿರಿದು ಪೂತಪ್ರಸಾದಮಂವರ । ಧರಣಿಯೊಳುಶೇವಿಸಿಸುಮೋಕ್ಷವ । ನಿರದೆ ಪಡೆದುರುತರದಕಥೆಯಂಪೇಳ್ವೆನಾಲಿಪುದು ॥ ೧೧೪ ॥

ಇಳೆಯೊಳಿರ್ದನದೋರ್ವಭಕ್ತಂ । ನಳಿನಶರಘಸ್ಮರಪದಾಂಬು ಜ । ಲುಳಿತಷಟ್ಪದನೆನಿಪ ಶ್ರದ್ಧಾಮೋದಸಂಚಿತನು ॥ ಲಲಿತದಿವ್ಯ ಪ್ರಭಾವದಿಂ ಸ । ದ್ವಿಲಸಿತಾಭವಶರಣಮಂದಿರ । ದೊಳಗೆಭಿಕ್ಷವ ಕೊಂಡುಜಲಪೂರಿತತಟಾಕಧರಾ ॥ ೧೧೫ ॥

ವಲಯದೊಳುಪರಿಶುದ್ಧನಾಗುತೆ । ಜ್ವಲನಲೋಚನನರ್ಚ ನಾಂತದಿ । ಫಲಿತಮುಕ್ತಿಯಹೇತುವೆನಿಪಮಹಾಪ್ರಸಾದವನು ॥ ಸುಲಲಿತದಸದ್ಭಾಜನದೆನೆಲೆ । ಗೊಳಿಸಿಲಿಂಗಾರ್ಪಿತವಮಾಡುತೆ । ಜಲದೊಳಾಚಷಕವನುಬಿಟ್ಟಾಚರವರಂಪೋದಂ ॥ ೧೧೬ ॥

ಅಂತುನೀರೊಳಗಿಟ್ಟಭಾಜನ । ದಂತರದೊಳಿನಿತೊಂದುಕಣ ವುಜ । ಲಾಂತರದಿಚರಿಸುವಝಷದಸುಕೃತಾತಿಶಯದಿಂದಂ ॥ ಮುಂತೆಯುಳಿದಿರೆಚರಣಶೇಷವ । ದಂತವಕದಿಂನುಂಗಲಾಕ್ಷಣ । ವಂತವಿಲ್ಲದಸೌಖ್ಯಮೂರದಿಕೆಲವುದಿನವಿರಲು ॥ ೧೧೭ ॥

ದೈವವಶದಿಂದೋರ್ವಶಬರನು । ಮಾವನಾಂತರದಲ್ಲಿಬೇಟೆ ಗೆ । ಕಾವಲಿರ್ದೇಬಳಲಿಬಂದನು ಬಹಳನೀರಡಿಸಿ ॥ ಆವನೇಚರನತಿ ಶಯದೊಳಿರು । ನಾವನಾಳಿಯಕಾಣುತಿದರೊಳು । ಭಾವಜನಕೇತು ಗಳುನೆಲಸಿರುತಿರ್ಪವೆಂದೆನುತ ॥ ೧೧೮ ॥

ಆಪುಳಿಂದಕನತುಲಮುತ್ಸಂ । ಪ್ರಾಪಕದಿಬಲೆವೀಸಿಶಳಿಯ ಲು । ।ಚಾಪಲಾಟನಯುಕ್ತಮೀನ್ಗಳಶ್ರೇಣಿಯೊಳುಸುಕೃತ ॥ ರೂಪ ವಪ್ಪಪ್ರಸಾದಭೋಗಪ್ರ । ತಾಪಮತ್ಸ್ಯವುಸಿಕ್ಕಿಬಲೆಯಲದ । ನೇಪರೀ ಕ್ಷಿಸಿನೋಡೆತನುರೋಮೋದ್ಗಮವದಾಗೆ ॥ ೧೧೯ ॥

ಜಾಲದೊಳಗಿರಲದನುಶಬರನು । ಮೂಲಯುಕೆಕೊಂಡುಯ್ದು ತನಗನು । ಕೂಲಮಾನಸಳಪ್ಪಹೆಂಡತಿಯಾದವಳಕರೆದು ॥ ಲಾಲಿಸು ತಲವಳಿಂಗೆತನ್ನ । ತ್ತಾಸ್ಯಳಿಯಂತೋರುತ್ತಲೆಂಪಸು । ಲೋಲಲೋ ಚನೆನೋಡಿದೆಯಸುಂದರವೆನಿಪಮೀನಂ ॥ ೧೨೦ ॥

ತಂದೆನಿದಬಾಣಸವಮಾಡತಿ । ಚಂದವೆನೆಸನಿಯುವೊಲುಶೀ ಘ್ರದೊ । ಳೆಂದೆನಲುಮವಳಂತೆಮಾಡುತಲವಗೆಬಡಿಸಿದಳು ॥ ತಿಂದ ನವನತಿಶಯಮುದಂಚಿತ । ಮಂದಹಾಸಾನ್ವಿತಮುಖದೊಳುಪು । ಳಿಂದನಾರುಚಿಗಳಿಗೆಮತಿಯುಗ್ಗಡಿಸಿಯುಗ್ಗಡಿಸಿ ॥ ೧೨೧ ॥

ಅದುಮೊದಲುಗೊಂಡಾಶಬರನುರೆ । ಸದಯಮಾನಸನಾಗಿಕೊ ಲ್ಲುವು । ದೆದೆಯೊಳಿನಿತಿಲ್ಲದೆಗಿರೀಶ್ವರನಂಘ್ರಿಪದ್ಮಗಳಂ ॥ ಹೃದ ಯದೊಳುನೆಲೆಗೊಳಿಸಿರುತ್ತಿರೆ । ಮದದಿಕೂಡಿದಕಿಟಿಯದೊಂದಿನ । ಬೆದರಿಸುತ್ತಂ ಪಕ್ಕಣಂ ಬೊಕ್ಕಲ್ಲಿಮನುಜರನು ॥ ೧೨೨ ॥

ಕೊಲ್ಲುತಂಬರುತಿದ್ದುದಿದಿರೊಳು । ಭಿಲ್ಲನಂನೋಡುತ್ತೆಮದನಿ ಯು । ತೋಲ್ಲಸಿತದಂಷ್ಟ್ರದೊಳು ಪೊಡೆಯಲ್ಕವನುಗತಜೀವಂ ॥ ಅಲ್ಲೆಬಿದ್ದಂಪವಿಹತಾಚಲ । ವಲ್ಲಿಯೇಬೀಳ್ವಂತೆಯವನಂ । ಖುಲ್ಲ ನೆನುತಂಯಮನದೂತರುನರಕಬಾಧೆಯನು ॥ ೧೨೩ ॥

ಮಾಡಲೂಹಿಸಿಮನದಿಕೋಪವು । ಮೂಡಿಕೊಂಡೊಯ್ಯುವಕೆ ಬಂದಿರೆ । ನೋಡಿಯೀಶ್ವರದೂತರೆಂದರು ನಿಲ್ಲಿನಿಲ್ಲಿರೆಲೋ ॥ ನಾಡೆ ಜಂಗಮಶೇಷವದುಕೈ । ಗೂಡಲನುಭವಿಸಿರ್ಪನಂಹಿಡಿ । ಬೇಡಶಿವ ಭಕ್ತಪ್ರಭಾವದಿಮಿಗೆಸುಕೃತಿಯಿವನು ॥ ೧೨೪ ॥

ಶಮನನಿಲಯವಸಾರ್ವನಲ್ಲಿಂ । ಭ್ರಮಿತರುಗಳೀಶೊಲಗಿರೆ ಸ್ನುತ । ಲಮುಳತರಸುರಭೂಜಕುಸುಮಾನ್ವಿತವಿಮಾನದೊಳು ॥ ಕ್ರಮದಿಮೂರ್ತ್ತವಮಾಡಿಸಲುಘನ । ಪ್ರಮದನಾಗಿರೆದಿವ್ಯಸುರಮುನಿ । ಸಮುದಯಂಸನ್ನುತಿಸೆಪ್ರಮಥಾಧಿಪನಲೋಕವನು ॥ ೧೨೫ ॥

ಭರದಿಸೇರುತ್ತಾತನುರಿವಿ । ಸ್ಫುರಿಸುತತ್ಯನುಪಮಸುಸಖ್ಯ । ಸ್ಥಿರತರಾನುಭವೈಕತೃಪ್ತಿಯೊಳಿರ್ದನದರಿಂದೆ ॥ ಚರನಶೇಷಮಹಾಪ್ರಭಾವವ । ಪರಮಭಕ್ತರೆತಿಳಿವುದೆಸ್ನುತೆ । ಹರುಷದಿಂತನ್ಮಹಿಮೆಯನುನಿರವಿಸಿಬುದಲ್ಲದೆಯುಂ ॥ ೧೨೬ ॥

ಭಸಿತರುದ್ರಾಕ್ಷಾಭರಣನಾ । ಗೆಸೆದುಪಂಚಾಕ್ಷರಸುಮಂತ್ರಾ । ಭ್ಯಸನದಿಂಮಹಿತೇಷ್ಟಲಿಂಗವಧರಿಸಿಗುರುಭಕ್ತಿ ॥ ರಸದಿಸಂಗತನಾಗುತಿರುತಿರ । ಲಸಮವಿಮಳಪ್ರಸಾದಮೆಂಬುದು । ಮಿಸುಪಭಕ್ತರೆಭರದಿಸಂಪ್ರಾಪ್ತಿಸುವುದೆಂದುಲಿದಂ ॥ ೧೨೭ ॥

ಚಾರುಭಕ್ತವೃಂದವದುಘನ । ಸಾರತರದಷ್ಟಾವರಣಗಳ । ಪಾರಮಹಿಮಂಗಳನುಮನಮಿಟ್ಟಾಲಿಸತಿಶಯದಿ ॥ ಭೂರಿಮುದಮಂಪೊಂದಿಶ್ರೀಗಳ । ವೀರವಾಣಿಯಪೊಗಳುವಡೆಮಿಗೆ । ಮೀರಿದಾಸುರಗುರುವಿಗಳವಲ್ಲೆನುತೆಕರಮುಗಿದು ॥ ೧೨೮ ॥

ನಿತ್ಯಚರಬಸವಾರ್ಯಪಾಲಿಸು । ನಿತ್ಯಸದ್ಗುರುದೇವಪಾಲಿಸು । ನಿತ್ಯಪಾಲಿಸುಭಕ್ತಚಿಂತಾಮಣಿದಯಾಂಬುಧಿಯೇ ॥ ನಿತ್ಯಸದ್ಗುರುನಾಥಪಾಲಿಸು । ನಿತ್ಯಪೂರ್ಣಾನಂದಪಾಲಿಸು । ನಿತ್ಯಪಾಲಿಸುದೇವದೇವನೆಭಕ್ತಸಂಕುಲವ ॥ ೧೨೯ ॥

ಎಂದುಪರಿಪರಿನುತಿಸಿಶ್ರೀಗಳಿ । ಗಂದುಚರಣಕೆನಮಿಸಿತಮ್ಮಯ । ಸಂದಬೋಧೆಯಕೇಳಿಪರಮಕೃತಾರ್ಥರಾದೆವುನಾವ್ ॥ ಎಂದುಚರವರರಿಂದಪರಕೆಯ । ಪೊಂದಿಮನದೊಳುಧ್ಯಾನಿಸುತಲಾ । ನಂದದಿಂದಲಿತಮ್ಮತಮ್ಮಾಲಯಕೆತೆರಳಿದರು ॥ ೧೩೦ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣ
ಕ್ಷರಗಳಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ
ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು
ಕೇಳುವುದು ಹದಿನೈದನೆಯ ಸಂಧಿ ॥ ೧೩೧ ॥

ಕೃತ್ರಿಮಗುಣಘ್ನೆ ನಿರುಪಾಧಿಕೆ ವಿರೋಧಜನನಾಶಿನಿ ಪಟೀರಘನಗಂಧಿ ಕುಚ
ವಸ್ತ್ರೆ । ಮಿತ್ರನಿರತಾರ್ಚಿತ ಪದದ್ವಯೆ ಧನಾಢ್ಯೆ ಮೃದುಭಾಷಿಣಿ ಸುಗಾನ
ಹಿತೆ ಕುಂಭಕುಚಯುಗ್ಮೆ ॥ ಶತ್ರುಕುಲಭಂಜನಿ ಕುಬುದ್ಧಿಹರೆ ಚಿನ್ಮಯೆ ಸುದ
ರ್ಶನಿ ಮಹಾಮಹಿಮೆ ಸಾಧುಜನಲೀಲೆ । ಚಿತ್ರತರರೂಪಿಣಿ ಶಿವಾನ್ವಿತೆ ನಿರಂತರ
ಮೃಡಾಣಿ ಸಲಹೆನ್ನನೆಲೆಮಾತೆ ಮಹದೇವಿ ॥ ೧೩೨ ॥

ಸಂಧಿ ೧೫ ಕ್ಕಂ ಪದ ೬೭೧ ಕ್ಕಂ ಮಂಗಲಂ

ಮಹಾ ಶ್ರೀ. ಶ್ರೀ.



॥ ಓಂ ಶ್ರೀ ಪರಮೇಶ್ವರಾಯನಮಃ ॥

# ಹದಿನಾರನೆಯ ಸಂಧಿ



ಸೂಚನೆ ॥ ಎಸೆವಶಿಹಪುರದೊಳಗೆದೀವಿಗೆ ।
ಯುಸಮುಮಹಿಮುವತೋರಿಭಕ್ತನಿ ।
ಗುಸುರಿದನು ಹರುಷದೊಳು ಷಟ್‌ಸ್ಥಲಗಳಮುಹತ್ವವನು ॥

ಪ್ರಣವಮಯಪರತತ್ವಪರಶಿವ । ತ್ರಿಣಯಮೃತ್ಯುಂಜಯಮ
ಹೇಶ್ವರ । ವಿನುತಘನತ್ರಿದಶಾರಿಮರ್ದನ ತ್ರಿವಿಧಸರ್ವೇಶ ॥ ಗುಣರಹಿ
ತತ್ರಿಗುಣಪ್ರವರ್ತಕ । ಗಣಪದಪ್ರದಪ್ರಣತರಕ್ಷಕ । ರಣವಿಜಯಶ್ರೀ
ವಿಮಳಶಂಕರನೀಗೆವಿಜಯವನು ॥ ೧ ॥

ವಸುಧೆಯೊಳುಶೋಭಿಸುವಶಹಪುರ । ದಸಮುಪುರಹರಭಕ್ತ
ನೋರ್ವನು । ಪಶುಪತಿಯಸಮರೂಪ ಶ್ರೀಚರಬಸವದೇವಂಗೆ ॥
ಎಸೆವಶ್ರಾವಣಮಾಸವದುಬರ । ಲಸಮಭಕುತಿಯೊಳೆಸಗಿಬಿನ್ನಹ ।
ಸಸಿನೆಯಿಂದಾಲಯಕೆ ಲಿಂಗಾರ್ಚನೆಯಗೈಯ್ಯಲ್ಕೆ ॥ ೨ ॥

ಕರೆದುಕೊಂಡುರುತರದಭಕುತಿಯೊ । ಳಿರದೆಪೋಗಿವಿಶೇಷ
ಶೋಭಿಸು । ತಿರುತಲಿರ್ದಾಸನದಮೇಲಾಯತಿಯಕುಳ್ಳಿರಿಸಿ ॥ ತ್ವರಿ
ತಸ್ನಾನಕೆಸಿದ್ಧಗೈಯುತೆ । ಚರವರರಸ್ನಾನಕ್ಕೆಯೆಬ್ಬಿಸ । ಲುರುತನ
ರದಹರುಷದೊಳು ಸ್ನಾನವನೆಸಗಿಶಿವಪೂಜೆ ॥ ೩ ॥

ಕೋಣೆಯೊಳಗೇಕಾಗ್ರಚಿತ್ತದಿ । ಧ್ಯಾನವಂಗೈಯುತ್ತೆ ಶಿವನಂ ।
ಸಾನುರಾಗದಿಪೋಗಿಗದ್ದುಗೆಮೇಲೆಕುಳಿತೈದೆ ॥ ಆನಿಗಮುದುಕ್ತಿಯೊ
ಳುಕಿಂಚಿತ । ನೂನಮಾಗದತೆರದಿಮಿಗೆಸಂ । ಧಾನಭಕುತಿಯೊಳೆಸಗಿ
ಲಿಂಗಾರ್ಚನೆಯಬಳಿಕಾಗಳ್ ॥ ೪ ॥

ಮುಂದೆವುರಿಯುತ್ತಿರ್ದದೀಪವ। ದಂದುತೈಲವುಪೂರ್ಣವಾಗುತ।
ನೊಂದಿಪೋಗುತಲಿರಲುಕಂಡಾಕ್ಷಣವೆಚರವರನು ॥ ಇಂದುಧರನಂ
ಸ್ಮರಿಸಿಯಾಕ್ಷಣ । ಮಂದಹಾಸದಿದೀಪದೊಳುಜಲ । ವಂದುಹಾಕ
ಲು ತೈಲದಂತುರುತರಪ್ರಕಾಶದೊಳು ॥ ೫ ॥

ಉರಿಯುತಿರುತಿರ್ದುದನುಭಕ್ತನು । ಭರದಿಕಂಡಾಶ್ಚರ್ಯ
ಪೊಂದುತ। ಚರವರನಮುಹಿಮಾತಿಶಯವಂನೋಡಿ ಮುದವಾಂತು॥
ಪರಶಿವನರೂಪಿಗಳೆ ತಮ್ಮಯ । ಚರಣಧೂಳಿಯು ಮೆರೆಯುವೆ
ಮ್ಮೀ। ಪರಮಗೃಹದೊಳುಬೀಳ್ವಕಾರಣದಿಂದ ಯಮ್ಮಗಳ ॥ ೬ ॥

ಜನುಮಸಾರ್ಥಕವಾಯಿತೀಗಳ್ । ಮಿನುಗುವೀಧರೆಯೊಳಗೆತ
ಮ್ಮೊಲು । ಘನಮಹಿಮರಾಗಿರ್ದವರ ನಾಕಾಣೆನಿನ್ನೆವರಂ ॥ ಎನುತ
ಪರಿಪರಿನುತಿಸಿಸ್ವಾಮಿಗ । ಳನುಪಮುದಚರಣಕ್ಕೆವಂದಿಸಿ। ಯನಘ
ರೂಪರೆ ತಮ್ಮಪರತರಮುಖದಿನಾನೀಗಳ್ ॥ ೭ ॥

ಮೆರೆವಷಟ್‌ಸ್ಥಲಗಳಮಹತ್ವವ । ನರಿಯಬೇಕೆನುತಿರುವೆನದ
ರಿಂ । ದಿರದೆಕೃಪೆದಳೆದೀಗಳಪ್ಪಣೆಕೊಡಿಸಬೇಕೆನಲು ॥ ಚರವರನು
ಮುದವಾಂತುನಿನ್ನಯ । ಪಿರಿದಪೇಕ್ಷೆಯತೆರದೊಳಾಗಲಿ । ವೊರೆವೆ
ನೀಗಳ್ ವಿವರದಿಂಮನವೊಲಿದುಲಾಲಿಪುದು ॥ ೮ ॥

ಮೆರೆವಲಿಂಗಾಗ್ಯೈಕ್ಯಜ್ಞಾನಕೆ । ಪರಮಷಟ್‌ಸ್ಥಲಜ್ಞಾನವೆನು
ತಲಿ । ವೊರೆಪರಂಗವು ತನ್ನಗುಣಗಳಹಿಂಗಿಲಿಂಗದೊಳು ॥ ಬೆರೆಯ
ಲ್ಷಟ್‌ಸೋಪಾನಗಳನುಂ । ವಿರಚಿಸಿರುವರುಬ್ರಹ್ಮವಿದ್ಯೆಯ । ನರಿದ
ಯಮ್ಮಯ ಪರಮತರಪೂರ್ವಜರವಾವೆನಲು ॥ ೯ ॥

ಮೆರೆವಭಕ್ತಮಹೇಶಮೇಣ್ಣನ । ತರಪ್ರಸಾದಪ್ರಾಣಲಿಂಗಿ
ಸು । ಶರಣಪರತರದೈಕ್ಯವೆಂದಾರುಸ್ಥಲಗಳಿಹವು ॥ ಕರಮೆಸೆಯು
ತಿರ್ಪಿಸ್ಥಲಂಗಳ । ಪರಮಪರಿಯಂಸರಸವಾಗಿರ । ದೊರೆವೆಕ್ರಮ
ವಿಡಿದೀಗಳೊಂದೊಂದಾಗಿಲಾಲಿಪುದು ॥ ೧೦ ॥

ಗುರುಸುಲಿಂಗಸುಜಂಗಮಗಳುರು । ಚರಣದಲಿಘನತರದಭಕ್ತಿ
ಯ । ನಿರಿಸಿಪರತರಕಾಯಕದೊಳಾರ್ಜಿಸುತದ್ರವ್ಯವನು ॥ ವರತ್ರಿವಿ
ಧದಾಸೋಹವನುಬಹು । ಸರಸದಿಂಮಿಗೆಗೈಯ್ದುನಿರುತದಿ। ಮೆರೆವ
ನರನೇಭಕ್ತನೆನಿಪನು ವೀರಶೈವರೊಳು ॥ ೧೧ ॥

ಲಿಂಗವೆನ್ನಯಮಾತೆಯೆಂದುಂ। ಪಿಂಗದಮಳಶ್ರದ್ಧೆಯಿಂದಲಿ।
ಜಂಗಮಹಿಮಸುಭಕ್ತಕೂಸಿನತೆರದಿ ಚರಿಸುವನು ॥ ಅಂಗಗುಣಗಳಿ
ವಳಿಯಲೆಂದುಂ । ಲಿಂಗಗುಣಗಳವುಳಿಯಲೆಂದುಂ । ಲಿಂಗಮಾತೆ
ಯ ಘನತರದಪ್ರೇಮವನುಪಡೆಯುವನು ॥ ೧೨ ॥

ನನ್ನಕುಲವದುಹೆಚ್ಚುಯೆನುತಲಿ । ನಿನ್ನಕುಲವದುಕಡಿಮೆ
ಯೆನುತಲಿ। ಕುನ್ನಿಯೊಲುವರಭಕುತ ತಾನಾವಾಗಲುಂಬೊಗಳಂ ॥
ಚೆನ್ನಲಿಂಗವಧರಿಸಿಭಕ್ತಿಯೊ । ಳ್ಭಿನ್ನಕಾಯಕಗಳನುಮಾಳ್ಪವ ।
ರನ್ನುಶ್ರೇಷ್ಠರೆನುತ್ತಕಾಂಬನು ಭಕ್ತಿಭಾವದಲಿ ॥ ೧೩ ॥

ಕೂಸಿನೊಲುವರಭಕ್ತಿಯಿರಿಸಿಸು । ದಾಸನೊಲುಸೇವೆಯನುಗೈ
ಯ್ದುರು । ಮೀಸಲಾಗಿಹನಡೆನುಡಿಗಳಿಂದೈದೆಶೋಭಿಸುತೆ ॥ ಕಾಸಿತೆ
ಗೆದಾಚಿನ್ನದೊಲುಮಿಗೆ । ಸೋಸಿತೆಗೆದಾತುಪ್ಪದೊಲುಸಲೆ। ಯೀಶ
ನೊಲ್ಮೆಯಪೊಂದಿಬೆಳಗುತ್ತಿರುವವನೆಭಕ್ತಂ ॥ ೧೪ ॥

ನೇಮನಿಷ್ಠೆಸುವ್ರತಗಳಿಂದಲಿ । ಕಾಮಲೋಭಗಳನ್ನುಹರಿ
ದುರು । ಸ್ವಾಮಿಯೆನ್ನಿಸಿಭಕ್ತಗಣಕತಿಬೋಧೆಗೈಯ್ಯುತ್ತೆ ॥ ನೇಮ
ವ್ರತಕುರುಭಂಗಮೊದಗಲು । ಭೀಮಶಪಥವತೊಟ್ಟುದೃಢದಿಂ ।
ಸೋಮಧರನುರುಕೃಪೆಯಪಡೆವನೆ ಪರಮಮಾಹೇಶಂ ॥ ೧೫ ॥

ಮೂರುವಿಧದಸುದೀಕ್ಷೆಪೊಂದುತೆ । ಮೂರುಸ್ನಾನವುಮೂರು
ಪೂಜೆಯು । ಮೂರುಲಿಂಗದತೃಪ್ತಿಗೈಯ್ದುರು ಶುದ್ಧನಾಗುವನು ॥
ಮೂರುಕರಣವುಶುದ್ಧಮಾಗಲು । ದೂರಮಾಡುತೆಸ್ವಾರ್ಥದಿರವನು।
ವೀರಶೈವರಧರ್ಮಸೇವೆಯಮಾಳ್ಪಸಂತತದಿ ॥ ೧೬ ॥

ಹರಪುರಾಣಸುಪುಣ್ಯಕಥೆಗಳ । ಮಿರುಪಪರತರಕೀರ್ತನಂಗಳ । ಸರಸಮಾಗಿಹನೀತಿಘನತರಧರ್ಮತತ್ವಗಳ ॥ ಮೆರೆವಪ್ರವಚನಗಳನುಮತ್ತಂ । ಪರಮಭಾಷಣಗಳನುವಿವರದೊ । ಳೊರೆವಪ್ರೇಮದಿ ಶ್ರೋತೃವೃಂದಕೆಪರಮಮಾಹೇಶಂ ॥ ೧೭ ॥

ಲಿಂಗವನುಬಿಟ್ಟನ್ಯದೈವಕೆ । ಪಿಂಗದೊಂದಿಸುತಿರ್ಪಭ್ರಷ್ಟಗೆ । ಸಿಂಗದಂದದಿಗರ್ಜಿಸುವನುರುಹಂಗುಮಿಲ್ಲದಲೆ ॥ ಲಿಂಗಧರ್ಮಕ್ಕಾಗಿತಾನುಂ । ಹಿಂಗಿಬಿಡುವಸುಪ್ರಾಣವನ್ನುಂ । ಭಂಗಗೆಡುತಲಿ ಬಾಳಲಾರನುಲಜ್ಜೆಯಿಂಭುವಿಯೊಳ್ ॥ ೧೮ ॥

ಪರರಹೊನ್ನನುಹೆಣ್ಣುಗಳನುಂ । ದುರುಳಮನದಿಂನೋಡಲಾರನು । ಮರುಳುತನದಿಂದಾಶೆಗೆಳಿಪರ ಸಹಿಸನವನೆಂದುಂ ॥ ಹೊರಗೆವೊಂದುಂಒಳಗೆವೊಂದುಂ । ಬರಿದೆಡಂಭವಬಡಿಯುವವರಿಗೆ । ವರಮಹೇಶನುಶ್ರೇಷ್ಠಬುದ್ಧಿಯಪೇಳಿಪೊರೆಯುವನು ॥ ೧೯ ॥

ತನ್ನರಸನೆಸುವಾಣಿಚಿತ್ತಗ । ಳನ್ನುಪರಮಪ್ರಸನ್ನಗೊಳಿಸು । ನ್ನತದಿವಿಮಳಪ್ರಸಾದಿಯೆನಿಸಿಸುಶಾಂತಿಯಿಂದನಿಶಂ ॥ ಸನ್ನುತಾತ್ಮನದಾಗಿತನ್ನಯ । ಬನ್ನವನ್ನುರುನೀಗಿಭುವಿಯೊಳು । ಚೆನ್ನಸೆಯುತಿರುತಿರ್ದುಸಂತತತೃಪ್ತನಾಗುವನು ॥ ೨೦ ॥

ಮಿತದೊಳನ್ನಂಮಿತದಿಪಾನಂ । ಮಿತದಿನಡೆಯುಂಮಿತದಿನುಡಿಯುಂ । ಹಿತದೊಳಿರ್ದುರುಶಾಂತಿಸುಖಮುಂ ಸತತಮನುಭವಿಪಂ ॥ ಹಿತವಮಾಳ್ಪಂಮೌನಯೋಗದಿ । ರತನುಭಾವಿಸೆವಿಘ್ನವ್ಯಸನದಿ । ಸತತಮನವದುಶಾಂತಿಗೊಳ್ಪಲಿಯೆನುತೆಯತ್ನಿಸುವಂ ॥ ೨೧ ॥

ಚಿತ್ತದೊಳಗುರುಕಳೆಯುವ್ಯಾಪಿಸಿ । ನಿತ್ಯಮೊಗದೊಳುನಗೆಯತೋರಿಸು । ಸತ್ಯವಚನಸುಸರಳಭಾವದ ಶಾಂತಮೂರ್ತಿಯುತಾಂ ॥ ಹತ್ತಿರಕೆಬರುತಿರ್ಪಜನರನು । ಹತ್ತಗರೆದುರುಪ್ರೇಮದಿಂದಲಿ । ಮುತ್ತಿನಂತಹಮಾತನಾಡಿ ಸುತೃಪ್ತಿಗೊಳಿಸುವನು ॥ ೨೨ ॥

ಅಂಗಸುಖವನುಹಿಂಗಿತಾನುಂ | ತುಂಗಲಿಂಗದತೃಪ್ತಿಗಾಗಿ
ಯೆ | ಸಾಂಗಗೊಳಿಪಂಕಾರ್ಯವಂ ಕ್ಲೇಶಕ್ಕೆನಗುತಿರುವಂ || ಹಂಗಿ
ನನ್ನಸುವಸ್ತ್ರತೊರೆದುರು | ತಂಗುಳನ್ನವಹರಕುಬಟ್ಟೆಯ | ಪಿಂಗದ
ಮಳಪ್ರೇಮದಿಂದಪ್ರಸಾದಿಸೇವಿಪನು || ೨೩ ||

ಜಗದಸರ್ವಪ್ರಾಣಿಗಳನುಂ | ಬಗೆದುತನ್ನಯಪ್ರಾಣದಂತೆಯೆ |
ಮಿಗಿಲುಭೂತದಯೂದಿಪರಮ ಪರೋಪಕಾರಗಳಿಂ || ಬಗೆಬಗೆಯ
ಲುರುಹಿತವನೊಳ್ಪನು | ಝಗಿಪಮೂರ್ತಿಪ್ರಾಣಲಿಂಗಿಯು | ಸೊಗ
ಸಿನಿಂದಂ ಕರುಣರಸವನುಸುರಿಸುತಿರುತಿರ್ಪಂ || ೨೪ ||

ತನ್ನಲಿಂಗವುಪ್ರಾಣವಾಗಿಯು | ಚೆನ್ನಪ್ರಾಣವುಲಿಂಗವಾಗಿ
ಯು | ಬನ್ನಬಡುತಿಹಜೀವಿಪರತರಪ್ರಾಣಲಿಂಗವದು || ಸನ್ನುತದೊ
ಳಾಗಿರೆ ಸುಕರುಣವ | ನನ್ನಿಯಿಂದಲಿನೀಡಿನಿರುತಂ | ಸನ್ನುತಾತ್ಮ
ಪ್ರಾಣಲಿಂಗಿಯು ಪರರ್ಗೆಹಿತವನೊಳ್ಪಂ || ೨೫ ||

ಪರರಸುಖವೇತನ್ನಸುಖವದು | ಪರರನೋವೇತನ್ನನೋವದು |
ಪರರುಮಿಗೆಮನನೊಂದುಕೊಂಡಡೆ ಕಳವಳಿಪಸತತಂ || ಪರರುತನಗ
ತಿಕಷ್ಟಕೊಟ್ಟಡು | ಹರಣವಾಡುತ್ತಿರಲಿಜೀವವ | ದುರುಳರನುನೀಂ
ಕರುಣಿಸೆನುತಲಿ ಹರನಬೇಡುವನು || ೨೬ ||

ಸ್ವಾನುಭವದುರುತುಟ್ಟತುದಿಯನು | ತಾನುಮುದದಿಂಕಂಡು
ಲೋಕದೊ | ಳ್ಹೀನಜಂತುಗಳಲ್ಲಿಲಿಂಗದಭಾವತಾಳುವನು || ಜ್ಞಾನಿಪ
ರತರಪ್ರಾಣಲಿಂಗಿಯು | ಸಾನುರಾಗದಿಸಕಲಜೀವಕೆ | ಸಾನುನಯ
ದಿಂ ಸುಖದಘನಮಾಧುರ್ಯರಸವೀವಂ || ೨೭ ||

ಹೃದಯದೊಳುಘನಕರುಣರಸದುರು | ನಿಧಿಯುಸೂಸುತೆಪರಿ
ಯುತಿರ್ಪುದು | ಮುದದಿನಿಖಿಲಸುಪ್ರಾಣಿಕೋಟಿಗಳದರೊಳೀಸುವ
ವು || ಸದಯಗುಣವರಧಾಮಪುರಹರ | ಪದುಳದಿಂಸಲೆಪ್ರಾಣಲಿಂಗಿ
ಸು | ಯದೆಯೊಳಿರ್ದುಂ ಕರುಣರಸದುರುಧಾರೆಸುರಿಸುವನು || ೨೮ ||

ಅರಿವಿನಮುಳಜ್ಯೋತಿಯನು ಮಿಗೆ । ಮಿರುಪ ಹೃದಯದೊಳಿ
ರಿಸಿಕೊಂಡುರು । ಶರಣಲಿಂಗದಕೂಡೆನಿರುತದಿ ಸರಸವಾಡುವನು ॥
ಶರಣಲಿಂಗದಸತಿಯುಮೆನಿಸುತೆ। ಧರೆಯೊಳಿರ್ದುಂ ಇಲ್ಲದೊಲುಮಿಗೆ।
ಮೆರೆಯುತಿರ್ಪನು ಬಾಹ್ಯಸುಖದುಃಖಗಳ ದಾಂಟುತ್ತೆ ॥ ೨೯ ॥

ಶರಣಪಿಡಿದಿಹಮಣ್ಣು ಚಿನ್ನಂ । ಶರಣನುಡಿದಿಹ ನುಡಿಯು
ಪ್ರಣವಂ । ಶರಣ ನಡೆದಿಹನಡೆಯುಲೋಕಕೆ ಮೋಕ್ಷಪಥವನಿಶಂ॥
ಶರಣಕುಡಿಯುವಜಲವು ತೀರ್ಥವು । ಶರಣನೋಡುವ ವಸ್ತುಶುದ್ಧ
ವು । ಶರಣನುರುಚರಣಗಳಧೂಳಿಯು ಪರಮಪಾವನವು ॥ ೩೦॥

ಲಿಂಗದಲಿ ವರಶರಣನಿರುತದಿ । ಸಂಗಿಯಾಗುತೆಮರೆದುತನ್ನಂ।
ಶೃಂಗಸುಖವನ್ನೇರಿಯಿಳಿವಂ ಲೀಲೆಯಿಂದ್ವೈದೆ ॥ ಲಿಂಗದೊಡನತಿ
ಜೀಕೆಯಾಡಿಸು । ತುಂಗಮೋಕ್ಷದ ಶಿಖರವೇರುತೆ । ಲಿಂಗಗೂಡಿಯೆ
ಮರಳಿಧರೆಗಿಳಿಯುವನು ಭರದಿಂದಂ ॥ ೩೧ ॥

ಶರಣಸೌಖ್ಯದಸೀಮೆಮೀರಿ ಸು । ಶರಣದುಃಖದಪಾರಗಂಡು
ರು । ಶರಣಭಯದಿಂ ದೂರನಾಗುತೆ ಮರಣಕಂಜನವಂ ॥ ಶರಣ
ಸಂತತಪರಮಭಾವದೊ । ಳ್ಸರಸಮೂಡುರು ಹರುಷದಿಂ ಮಿಗೆ।ಮೆರೆ
ಯುವನು ನುತಿನಿಂದೆಗಳ ಕೊಡಕಿಂಗೆ ಬೀಳದಲೆ ॥ ೩೨ ॥

ಅಂಗಲಿಂಗದ ಭೇದವಳಿದತಿ । ಲಿಂಗದೊಳು ಬೆರೆದ್ವೈದೆತಾನುಂ।
ಲಿಂಗರೂಪದಿ ಜಗದಿಸಂತತ ಬೆಳಗುತಿರುತಿರ್ಪಂ ॥ ತುಂಗ ಪರತರ
ಹಂಸನಾಗಿ ಸು । ಲಿಂಗಚಿತ್ಸರಸಿಯೊಳು ನಿತ್ಯದಿ । ಪಿಂಗದಮಳಾ
ನಂದದಿಂದಿರದೈಕ್ಯ ರಮಿಸುವನು ॥ ೩೩ ॥

ಹೊರಗೆಶಬ್ದವು ಶೂನ್ಯವಾಗಿಸು । ಮಿರುಗುತಿಹುದತಿ ಪ್ರಣವ
ವನಾದವು । ಮಿರುಪಲಿಂಗದರೂಪವೊಂದೇ ಮಿನುಗುತಿಹುದಿರದೆ ॥
ಪರಮತರದಪ್ರಕಾಶಮಿಂಚುತೆ। ಪರಿಯುತಿಹುದದು ಪೂರವಾಗಿರ।
ದುರುಸಮಾಧಿಯೊಳೈಕ್ಯನಿರತನದಾಗಿರಲ್ಕಾಗಳ್ ॥ ೩೪ ॥

ನೀರಿಸಲಿ ಲವಣವದುಬೆರೆದುರು । ಕ್ಷೀರದಲಿಸವಿಗೂಡಿರಾಜಿಪ। ಸಾರಸೊಡರಿನೊಳಮಳಜ್ಯೋತಿಯದಡಗಿ ಕಾಣ್ಬಂತೆ ॥ ಪಾರಮಾರ್ಥ ಸುಲಿಂಗದೊಳುಬಹು । ನೇರವಾಗಿರಿಸ್ಯೆದೆಯಂಗವ । ತೋರುತಿರು ತಿಹನೇಕವಾಗಿರದೈಕ್ಯ ಸ್ನೇಹದೊಳು ॥ ೩೫ ॥

ಪರಮನೊಳುನೆರೆಬೆರೆದ ಬಳಿಕಂ । ಮರಳಿಬಾರನು ಭವಕೆ ಯೆಂದಿಗು । ನಿರುತಮುಕ್ತಿಯಸುಖವಪಡೆದುರು ರಮಿಸುತಿರುತಿಹನು॥ ಪರಮಶಿವತನ್ನಂಶವನು ಸಲೆ। ಯಿರಿಸಿಧರಣಿಯೊಳೆಲ್ಲ ಕೊನೆಗುರು। ಸರಸದಿಂ ತನ್ನಂಶವನು ನೆರೆಹೀರಿಕೊಂಬುವನು ॥ ೩೬ ॥

ಪರಮಭಕ್ತಂಗನಿಶ ಶ್ರದ್ಧೆಯು । ವರಮಹೇಶಂಗಮಳನೈಷ್ಠೆ ಯು । ಸರಸವಿಮಳಪ್ರಸಾದಿಗುರುತರಸಾವಧಾನವು ಮೇಣ್ ॥ ಮಿರು ಪ ಪರತರಪ್ರಾಣಲಿಂಗಿಗೆ । ಪರಮತರದಾಸ್ವಾನುಭವವದು । ಶರಣ ಗರಿವೈಕ್ಯಂಗೆ ಘನತರಮೋಕ್ಷಸುಖವನಿಶಂ ॥ ೩೭ ॥

ಈತೆರದೊಳೆಸೆಯುತ್ತಲಿರುತಿಹ । ಪೂತಷಟ್‌ಸ್ಥಲಗಳ ಮಹತ್ವ ವ । ಸಾತಿಶಯದಿಂ ತಿಳಿದುಪರತರವೀರಶೈವರುಗಳ್ । ಭೂತಲದೊ ಳಾಚರಿಸಿಯದರೊಲು । ಭೂತನಾಥನ ಕೃಪೆಯಪಡೆಯು । ತ್ತೋತು ನಿತ್ಯಾನಂದಸುಖದೊಳು ಸತತ ರಮಿಸುವದು ॥ ೩೮ ॥

ಇಂತುಷಟ್ಸ್ಥಲಗಳಮಹತ್ವವ । ಕಂತುಹರಸಮರೂಪಬೋಧಿ ಸ । ಲಂತಕಾಂತಕಭಕ್ತನಾಲಿಸಿ ಹರುಷದಿಂದುಬ್ಬಿ ॥ ಕಾಂತಿಮಯ ಚರರಿಂಗೆ ವಂದಿಸಿ । ಸಂತಸದಿಪರಕೆಯನುಪಡೆದು ನಿ । ತಾಂತಸುಖ ದಿಂದಿರ್ದನುರು ಚರಬಸವಯತಿಕೃಪೆಯಿಂ ॥ ೩೯ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆ ಮೇಣ। ಕ್ಷರಗಳಲಿಷಟ್ಸಕ್ಕರದಘನದಂತೆತಿರೆಯೊಳಗೆ ॥ ಮೆರೆಯುತಿಹುದೀವರ ಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳು ವುದು ಪದಿನಾರನೆಯ ಸಂಧಿ ॥ ೪೦ ॥

ಸಂಧಿ ೧೬ ಕ್ಕಂ ಪದ ೧೧೧೧ ಕ್ಕಂ ಮಂಗಲಂ ಮಹಾ ಶ್ರೀ ಶ್ರೀ

|| ಶ್ರೀ ಜಗದ್ಗುರು ರೇಣುಕಾಚಾರ್ಯಾಯನಮಃ ||

# ಹದಿನೇಳನೆಯ ಸಂಧಿ



ಸೂಚನೆ || ಭಾಳಲೋಚನರೂಪಚರವರ |
ಜೋಳಿಗೆಯಘನತರಪವಾಡವ |
ಲೀಲೆಯಿಂತವೆತೋರಿ ಪಂಚಾಚಾರಗಳನೊರೆದಂ ||

ಅಂಧಕಾಸುರಮಥನಸಿಂಧುರ | ಬಂಧುರಾಜಿನವಸನವನರು
ಹ| ಬಂಧುಶತಸಾಹಸ್ರಕೋಟಿದ್ಯುತಿವಿತತಿಚೈತ್ರ || ಇಂದುಧರಶಿವನ
ಭವವ್ಯಡಶಿತಿ | ಕಂಧರಪರಂಜೋತಿಸಂಶ್ರುತಿ| ಬಂಧವಿರಹಿತಭಕ್ತವ
ತ್ಸಲ ಸಲಹುಸಂತತದಿ || ೧ ||

ಚರಬಸವಯೋಗಿಗಳುತಮ್ಮಿಯ| ಪುರದಿವರಭಕ್ತರನುಸಲಹು
ತ | ಪರತರಷ್ಟಾವರಣಮಾರ್ಗವಜನಕೆಬೋಧಿಸುತ || ಹರಮತವ
ಪಾಲಿಸುತನುತಿಪರ | ದುರಿತವಂಕಳೆಯುತ್ತತಮ್ಮಿಯ | ವರಮತಕೆ
ಸಂತಸದಿಬಂದರು ತ್ವರಿತದಿಂದಾಗಳ್ || ೨ ||

ಜಂಗಮರಿಗತ್ಯಂತವಿನಯದಿ | ಲಿಂಗಪೂಜೆಯಗೈಸುತವರಿ
ಗೆ | ಯಿಂಗಿತದಿದಾಸೋಹದೊಳು ಭೋಜನವಗೈಸುತ್ತೆ || ಪಿಂಗದೀ
ಪರಿಪ್ರತಿದಿನದಿಗುರು | ಲಿಂಗಚರರಂತೃಪ್ತಿಗೊಳಿಸುವ | ಮಂಗಲದ
ಕಾರ್ಯದೊಳಿಕಾಲವಕಳೆಯುತಿಸೆದಿರ್ದರ್ || ೩ ||

ಇಂತುಶ್ರೀಗಳುನಡೆಸುತಿಪ್ಪನಿ | ತಾಂತವರದಾಸೋಹದೊಳು
ಪರ | ಪ್ರಾಂತದಿಂಪ್ರತಿವರುಷಶ್ರೀಗಿರಿಮಲ್ಲಿಕಾರ್ಜುನನ || ಕಾಂತಿಮ
ಯಯಾತ್ರೆಯನುಗೈಯಲು |ಶಾಂತಿಯುತದೃಢಮಾನಸದೊಳುಸ|
ಮಂತುಕಂಬಿಯಕಾಯಕವನಿರದ್ಯೆದೆಕೈಕೊಂಡು || ೪ ||

ಮೆರೆವಸೊಲ್ಲಾಪುರವೆಮೊದಲಾಗಿ । ಗಿರುವಪ್ರಾಂತದಿ ಬರ್ಪ
ಜನರಿಗೆ । ಪಿರಿದೆಸೆವಶಹಪುರದಮೇಲೆಯೆ ಪೂತಶ್ರೀಗಿರಿಗೆ ॥ ತೆರಳು
ತಿಹಪಥವಿರುವ ಕತದಿಂ । ಪರಮಯಾತ್ರಿಯನೆಸಗುವಖಿಲರು । ನಿ
ರುತ ಶಹಪುರದೊಳಗೆವಸತಿಯಗೈದು ಗಮಿಸುವದು ॥ ೫ ॥

ಸತತರೂಢಿಯುಮಾದಕತದಿಂ । ಪ್ರತಿವರುಷಶ್ರೀಗಿರಿಗೆ ತೆರಳು
ವ । ವಿತತಭಕ್ತಮಹೇಶ್ವರರಸಂದೋಹ ಶಹಪುರದಿ ॥ ಒತಿದಿವಸತಿ
ಯನೆಸಗಿ ವರಪಶು । ಪತಿನಿಭಸುಬಸವಾರ್ಯರಿಟ್ಟ । ದಃತುಳ ದಾ
ಸೋಹದೊಳುಸಂಭ್ರಮದಿಂ ಸುಭೋಜನವ ॥ ೬ ॥

ಮೋದದಿಂ ತವೆಗೈದುತೆರಳುವ । ಸಾದರದಪದ್ಧತಿಯುಬಿರ್ದಿರ।
ಲಾದಯಾನಿಧಿಬಸವಯೋಗಿಗಳದರ ಪರಿಯಂತೆ ॥ ಮೇದಿನಿಯೊಳತಿ
ಭಕ್ತಿಯಿಂದಲು । ಮಾಧವನ ವರಮನುವಪಠಿಸುತ । ಗಾಢವಾಗಿ
ಯೆ ಸತತದಾಸೋಹವನು ನಡೆಸಿರಲು ॥ ೭ ॥

ಒಂದುವತ್ಸರ ಬಸವಶ್ರೀಗಳಿ । ಗೆಂದುಮದುಬರದಿರ್ದವ್ಯಾಧಿ
ಯು । ಬಂದುದಶದಿನಶಯನಸ್ಥಲಘನವಾಗಿ ಪಿಡಿದಿರ್ದು ॥ ಮುಂದ
ತನದಿಂ ಮೇಲಕೇಳದೆ । ಬಂದಜನರೊಳು ಮಾತನಾಡದೆ । ಕಂದಿ
ಕುಂದಿದಮುಖದಿ ನಿತ್ಯೂಟೋಪಚಾರಗಳ ॥ ೮ ॥

ಎಸಗದತಿವ್ಯಥೆಯಿಂದ ಮಲಗಿರ । ಲಸಮದಾಸೋಹದೊಳು
ಕೆಲಸವ । ನೆಸಗುತಿರ್ಪವರವರಗ್ರಾಮಕೆ ಗಮಿಸಿರಲುಸುತನ ॥ ಮಿಸು
ಪಸತಿಯುವಿಯೋಗವಾಗಿರ। ಲುಸುರಲೇಂ ದಾಸೋಹಕಾರ್ಯವ। ಸಸಿ
ನೆಯಿಂ ಕೈಕೊಂಡುನಡೆಸುವರಿಲ್ಲದಿರುತಿರ್ಪ ॥ ೯ ॥

ಸಮಯದೊಳೆ ಶ್ರೀಗಿರಿಗೆಪೋಗುವ । ವಿಮಳಕಂಬಿಯಕಾಯ
ಕವನತಿ। ಸುಮನದಿಂ ಕೈಕೊಂಡಜಂಗಮನಿಕರಮುದದಿಂದೆ ॥ ಅಮಿ
ತರಾಜಿಸುತಿರ್ದಚರವರ । ರಮಳಮಠದೊಳುಮೆಂದಿನೊಲು ಸ । ಕ್ರ
ಮದಿಬಂದಿಳಿಯಲ್ಕೆ ತಲ್ಪದೊಳಿರ್ದಬಸವಾರ್ಯಂ ॥ ೧೦ ॥

ಚರಸಮೂಹವನೋಡಿಮನದೊಳು । ಮರುಗಿಮರೆವೀಜಂಗ ಮರನುಪ । ಚರಿಸುವವರಾರಿಲ್ಲದೋಲಾಯ್ತೀಗಳೆಂದೆನುತೆ ॥ ಭರದೊಳವರಂಕರೆದುನಿಕಟಕೆ । ಚರವರರೆನಾನೀಗರುಜೆಯಿಂ । ಪಿರಿದು ಬಳಲುತಲಿರ್ಪೆತನ್ಮೃಗಶೀಗಸತ್ಕರಿಸಿರ್ ॥ ೧೧ ॥

ಆರುಮಿಲ್ಲದಕಾರಣದಿನಾಂ । ಭೂರಿವ್ಯಸನವಪೊಂದಿರುವ ವಾ । ರಾರಿತಂದಿಹಕ್ಲೇಶಕೀಗಾರೇನುಮಾಡುವುದು ॥ ಸಾರವಚನವ ನೊಂದುನಿಮಗಾಂ । ಭೋರನುಸುರುವೆಕೇಳ್ವುದೆಮರಿಗೆ । ತೋರುತಿ ಹಗುಂಟದೊಳುಹಾಯ್ಕಿದಪರಮಜೋಳಿಗೆಯೊಳ್ ॥ ೧೨ ॥

ಆವವಸ್ತುವನೀವುಮನದೊಳು । ಭಾವಿಸುತಕರವಿಡುವಿರದು ವರ । ಭಾವಜಾರಿಯಪರಮಕೃಪೆಯಿಂದಿರದೆಯಾಕ್ಷಣದೊಳ್ । ಆವವಿಧದಿಂಕೊರತೆಯಿಲ್ಲದೆ । ವೋವಿದೊರಕುವುದಿದುವೆನಿಶ್ಚಯ । ತೀವಿದೋತ್ಸಹದಿಂದೆಪರಿಪರಿತೆರದಭಕ್ಷ್ಯಗಳ ॥ ೧೩ ॥

ತೊಳಪತಾವುಗಳಿರ್ಪಪರಿಯಂ । ತಲಘುತರದಿಂ ತಮ್ಮಕರದೊಳಿ । ಸುಲಲಿತದೊಳಿಸಗುತ್ತಸುಖದಿಂ ಭೋಜನವಗೈದು ॥ ಮಲಹರನಸ್ಮರಿಸುತ್ತಲವಿರತ । ನಿಲದೆವಿಶ್ರಾಂತಿಯನುಪೊಂದುತೆ । ಕೆಲವುದಿನವಿಲ್ಲಿರ್ದುಕುಶಲದಿಗಿರಿಗೆಗಮಿಸುವುದು ॥ ೧೪ ॥

ಎಂದೊರೆದವಾಕ್ಯಗಳಘನಮುದ । ದಿಂದಚರತತಿಕೇಳಿಕರುಣಾ । ಸಿಂಧುಶ್ರೀಚರಬಸವಸ್ವಾಮಿಗಳುಲಿದಪರಿಯಂತೆ ॥ ಅಂದುಮಡಿಗೆಯಮಾಡಿಕೊಳಲಿಕೆ । ಮಂದಹಾಸದೊಳೊಪ್ಪಿಮಿಗೆಭರ । ದಿಂದಗುಂಟದಿರಾಜಿಸುವಜೋಳಿಗೆಯಬಳಿಗೈದು ॥ ೧೫ ॥

ಕರವನಿಡಲಾಗಿರದೆತಮ್ಮಯ । ಪಿರಿದುಮನಸಿನಬಯ್ಕೆಯೊಲುಪರಿ । ಪರಿಯಸಾಮಗ್ರಿಗಳುದೊರೆದವುವೊಂದೆಜೋಳಿಗೆಯೊಳ್ ॥ ಚರನಿಕರತತ್ಕ್ಷಣವೆಪರಮ । ಚ್ಚರಿಯಪೊಂದುತಿದೇಂ ವಿಚಿತ್ರವು । ಧರೆಯೊಳಿಂತಹಘನಸಮಾಡವಕಾಣೆನಾವೆಂದುಂ ॥ ೧೬ ॥

ತಿರೆಯೊಳಗೆಕಲ್ಯಾಣನಗರಿಯೊ । ಳುರುತರದಜಸವಡೆದುಮೆರೆ
ದಿಹ । ಕರುಣನಿಧಿಬಸವೇಶನೀವಿಧವಾದಮಹಿಮೆಗಳ ॥ ಧರೆಯರಿ
ಯೆತೋರಿದನುಮೆನುತಲಿ । ವರಪುರಾಣದೊಳೊರೆಯುತಿರ್ಪುದ ।
ಹರುಷದಿಂಕೇಳಿರ್ದವಲ್ಲದೆ ಮೆರೆಯುವೀಯುಗದೊಳ್ ॥ ೧೭ ॥

ಇನಿತುಘನಮಹಿಮರನುಕಾಣುವ । ಘನಸುಯೋಗವುದೊರೆ
ದನಾವುಗ । ಳೆನಿತುಸುಕೃತಿಗಳೋಮಹಾಪರಮೇಶನಿದನರಿವಂ ॥
ಎನುತೆಪರಿಪರಿನುತಿಸಿಮೂರ್ದಿನ । ಬಿನದಿಸುತಮಠದೊಳಗೆತಮ್ಮಾ
ಯ । ಮನಕೆಬಂದಪದಾರ್ಥಗಳನೆಲ್ಲವನುಚೋಳಿಗೆಯಿಂ ॥ ೧೮ ॥

ತೆಗೆದುಕೊಳುತುರುಪರಮಪಕ್ವಾ । ನ್ನಗಳನೆಸಗಿಕೊಳುತ್ತೆ
ಭೋಜನ । ಸೊಗಸಿನಿಂದಂಗೈದುಮೂರ್ದಿನವಾದನಂತರದಿ ॥ ಅಗ
ಹರನಸಮರೂಪರಾಗಿ । ದಗಣಿತಪವಾಡಗಳತೋರುತ । ಜಗದೊ
ಳತಿಪೂಜ್ಯತೆಯಪಡೆದಿಹಬಸವಯೋಗಿಗಳ ॥ ೧೯ ॥

ಸನ್ನಿಧಿಯೊಳಾಗಮಿಸಿವಿನಯದಿ । ಚೆನ್ನೆಸೆವಸಾಷ್ಟಾಂಗಪ್ರ
ಣಮವ । ನನ್ನಿಯಿಂತವೆಗೈದುತಮ್ಮಯಪರಮಮಹಿಮೆಯನು ॥
ಬಣ್ಣಿಸಲ್ಕೀಧರೆಯಪೊತ್ತಿಹ । ಪನ್ನಗೇಂದ್ರಂಗಸದಳಂಸಂ । ಪನ್ನ
ಮೂರ್ತಿಯೆ ಯಮಗದೀಗಳ್‌ಸಾಧ್ಯವಾದಪುದೆ ॥ ೨೦ ॥

ಎಂದುವಿಧವಿಧವಾಗಿಪೊಗಳುತ । ಲಿಂದುತಾವೆಮಗೀಗಳೆಸಗಿ
ದ । ಸಂದಸತ್ಕಾರದೊಳುಘನಸಂತೃಪ್ತರಾಗಿಹೆವು ॥ ಕಂದುಗೊರಳನ
ರೂಪರಹತ । ಮ್ಮಿಂದನಾವುಗಳೀಗಘನಮುದ । ದಿಂದಪಂಚಾಚಾ
ರಗಳಲಕ್ಷಣವವಿವರದೊಳು ॥ ೨೧ ॥

ಅರಿತುಕೊಳಬೇಕೆನುವಬಯ್ಕೆಯು । ಭರದಿಮನದೊಳುಮೂ
ಡಿಹುದುಘನ । ತರದಿಬೋಧಿಸಿಯಮ್ಮಭೀಷ್ಟವಸಲ್ಲಿಸುವುದೆನುತೆ ॥
ಹರುಷದಿಂಮಿಗೆಬೇಡಿಕೊಳೆಪುರ । ಹರನರೂಪಿಗಳನುಮತಿಸಿನಿ ।
ಮ್ಮುರುಬಯಕೆಯೊಲುಸೊಲ್ಲಿಸುವೆ ಮನನಿಟ್ಟುಲಾಲಿಪುದು ॥ ೨೨॥

ಎಂದುವಚನವನಿತ್ತುವ್ಯಾಧಿಯೊ । ಳಂದುಬಳಲುತಲಿರ್ದಡುಂ
ನಲ । ವಿಂದಲವರಿಗೆವೀರಶೈವಾಚಾರಗಳನೈದೆ ॥ ಒಂದೆಮನದಿಂ ತಿಳಿ
ದುಕೊಳುವಾ । ಸಂದಬಯಕೆಯದುದಯಿಸಿದಕ್ಷತ । ದಿಂದೆವ್ಯಾಧಿಯ
ಲಕ್ಷಿಸದೆಬೋಧಿಸಲು ತೊಡಗಿದನು ॥ ೨೩ ॥

ಚರವರರೆಶ್ರೀಗುರುವುನಮಗುರು । ತರದಪರುಷದಿ ಕರಕೆಕೊ
ಟ್ಟಿಹ । ಕರವೆಸೆಯುತಿರ್ಪಿಷ್ಟಲಿಂಗದಪೊರತು ಮತ್ತಾವ ॥ ಮೆರೆವ
ಮೂರ್ತಿಯಪೂಜಿಸದೆ ಘನ । ತರದನಮ್ಮಯಭಕ್ತಿಭಾವಗ । ಳಿರದೆ
ಶಿವಲಿಂಗಾರ್ಚನೆಯೊಳಿಟ್ಟಸಮಪರಶಿವನೆ ॥ ೨೪ ॥

ವಿತತಪತಿನಾವಾತನನುಪಮ । ಸತಿಯುಮೆನುತಂ ತಿಳಿದುಗರ
ತಿಯು । ಸತತತನ್ನಯಪತಿಯೊಳೀಘನ ಪ್ರೇಮಭಕ್ತಿಯನು ॥ ಅತಿಶ
ಯದಿತೋರುವೊಲುನಾವುಗ । ಳತುಲನಮ್ಮಯಲಿಂಗದಲ್ಲಿಯೆ । ಮಿ
ತವದಿಲ್ಲದ ಭಕ್ತಿಯಿಡುತಿಹುದಲ್ಲದೆಯು ಮತ್ತಂ ॥ ೨೫ ॥

ಪರಮಶಿವನಸ್ವರೂಪರೆನಿಸಿದ । ನಿರುಪಮಿತಗುರುಚರರಪೊರ
ತುಂ । ಮೆರೆವಮತ್ತಿನ್ನಾವಮೂರ್ತಿಗಳಲ್ಲಿಯುಂ ಜಗದಿ ॥ ಪರಮದೇ
ವರ ಭಾವನೆಯನಿಡು । ತುರುಮನದೊಳರ್ಚಿಸದಲಿರ್ಪುದೆ । ನಿರುಮ
ಳದಶಿವಕರದಲಿಂಗಾಚಾರಮೆನಿಸುವುದು ॥ ೨೬ ॥

ಪೊತಮೆನಿಪುದ್ಯೋಗಮಂ ಮಿಗೆ । ಭೂತಳದಿಕೈಕೊಂಡುತೋ
ಷದೊ । ಳೋತುಧನಸಂಗ್ರಹವಗೈದದನನಿಶ ಗುರುಲಿಂಗ ॥ ಭೂತ
ಪತಿನಿಭಚರರಸೇವೆಗೆ । ಪ್ರೀತಿಯಿಂದರ್ಪಿಸುವುದಲ್ಲದೆ । ಸಾತಿಶಯ
ದಿಂ ದೀನಜನರಿಗೆ ದಾನವೆಸಗುವುದು ॥ ೨೭ ॥

ಆರಿಗುಂನಿಷ್ಕರುಣೆಯಿಂ ಕಡು । ಕ್ರೂರಹಿಂಸೆಯಕೊಡದಲಿ
ರ್ಪುದು । ಸಾರತರಕಾರ್ಯಂಗಳಿಗೆ ಧನವೆಚ್ಚವೆಸಗುವುದು ॥ ಬೇರೆ
ಯವರೊಡವೆಗಳನಪಹರಿಸದೆ । ಭೂರಿಶೀಲದಿವರ್ತಿಪುದು ಮೇಣ್ ।
ಧಾರಿಣಿಯೊಳಿರುತಿರ್ಪನಿಖಿಲಪ್ರಾಣಿನಿಕರಕ್ಕೆ ॥ ೨೮ ॥

ತನ್ನೊಲೇಸುಖದುಃಖಬರ್ಪವು । ಯೆನ್ನುತಲಿಕವೆತಿಳಿದವುಗ
ಳೊಳು । ವುನ್ನತದಪ್ರೀತಿಯನುತೋರುತಲೊಳಹೊರಗೆಸತತಂ ॥
ಭಿನ್ನಭೇದವನೆಸಗದುರುಸಂ । ಪನ್ನತನದಿಂಸತ್ಯಮಾರ್ಗದಿ । ಸನ್ನು
ತದಿವರ್ತಿಪುದೆಸುಸದಾಚಾರಮೆನಿಸುವುದು ॥ ೨೯ ॥

ಮೆರೆಯುತಿರ್ಪಂಗದಲಿಲಿಂಗವ । ಧಿರುವವರಶಿವಭಕ್ತನೇಪುರ ।
ಹರನಸಮನೆಂದರಿದುಮವನೊಳುಕೀಳುಮೇಲುಗಳಂ ॥ ಸರುವಥಾ
ಎಸಗದಲೆತಿರೆಯೊಳು । ಪರಮಶಿವಭಕ್ತಿಯೊಳುಕೂಡುತೆ । ಕರಮೆಸೆ
ವಸದ್ವೀರಶೈವನದಾವಕಾಯಕವಂ ॥ ೩೦ ॥

ಎಸಗುತಿರ್ದಡುಮವನಸಂಗಡ । ಸಸಿನೆಯಿಂದೂಟೋಪಚಾರ
ಗ । ಳಿಸಗಿಬಳಿಕೆಯಭೇದಮಿಲ್ಲದೆಮಾಡುತಿಹುದನಿಶಂ ॥ ಅಸಹನೆ
ಯೊಳಿಸಗಿದಡೆಭೇದವ । ಗಸಣೆಗೊಳುವನುನರಕದೊಳುನಿಜ । ಪಶು
ಪತಿಯವರಭಕ್ತರೊಳುಸಮಭಾವಮಂತಿಳಿದು ॥ ೩೧ ॥

ಅವರಸದನವಪೊಕ್ಕುಮಿಕ್ಕದ । ನವಿರತದೊಳತಿಭಕ್ತಿಯಿಂ
ವರ । ಶಿವಮನುವಪಿಸುತ್ತಸವಿಸುವುದೇಶಿವಾಚಾರಂ ॥ ಶಿವನಮೇ
ಣ್ವರಶಿವನಭಕ್ತರ । ಶಿವಸ್ವರೂಪರುಮಾದಗುರುಚರ । ರವನಿಯೊಳು
ಮಿಗೆಪಳಿಯುವುದನಸುಮಾತ್ರಕಿವಿಗೊಡುತೆ ॥ ೩೨ ॥

ಕೇಳದೆಂದಿಗುಮೊಂದುಪಕ್ಷದಿ । ಕೇಳಿದಡೆಕಿವಿಗಳ್ಗೆತಾಪವ ।
ತಾಳಿಪ್ರಾಯಶ್ಚಿತ್ತಮಂಮಿಗೆಮಾಡಿಕೊಂಡಿರದೆ ॥ ಕೀಳುನಿಂದೆಯ
ಗೈದವರನಾ । ವೇಳೆಯೊಳಿಸಲೆಶಿಕ್ಷಿಸುವುದೇ । ಮೇಲೆನಿಪನಿರುಪಮ
ಗಣಾಚಾರತ್ವಮೆನಿಸುವುದು ॥ ೩೩ ॥

ಧರಣಿಯೊಳುಮಿಗೆರಾಜಿಸುತ್ತಿಹ । ಸರುವಶಿವಭಕ್ತರ್ಗಳೆಲ್ಲರು ।
ಪರಮಪೂಜ್ಯರುಮೆಂದರಿದುಮವರೊಳಗೆನಿರುತದಲಿ ॥ ಪಿರಿದುಮಿನ
ಯದಿನಡೆದುಕೊಳುತುರು । ದೊರೆವಡೆದಸದ್ವೀರಶೈವರ । ಪರಶಿಶು
ವುಶೋಭಿಸುವತೊಟ್ಟಲೊಳಿರ್ಪುದಂ ಕಂಡು ॥ ೩೪ ॥

ಅಸಮಪೂಜ್ಯತ್ವವನುಪಡೆದಿ । ರ್ದೆಸೆವನಾಯಕನಿವನೆನು ತ್ತಲಿ । ಸಸಿನೆಯಿಂತಿಳಿದೆರಗಿಘನತರನಮ್ರಭಾವದೊಳು ॥ ಒಸೆದುನ ಡೆದುಕೊಳುತ್ತಲವರುಗ । ಳಸಮಸೇವೆಯನೆಸಗುವುದೆಘನ । ನಿಸು ಪಭೃತ್ಯಾಚಾರಮೆಂದೆನಿಸುವುದುಲೋಕದೊಳು ॥ ೩೫ ॥

ಈತೆರದಿಪರಿಶೋಭಿಸುವಘನ । ಪೂತಪಂಚಾಚಾರಗಳನಿರ । ದೋತುಲಕ್ಷದೊಳಿಡುತಲದರೊಲುವರ್ತಿಸುವರಿಂಗೆ ॥ ಸಾತಿಶಯಶು ಭವಿಭವದೊರೆದುರು । ಭೂತನಾಥನಕೃಪೆಯುವಡೆದತಿ । ಭೂತಳದೆ ಸಂತಸದಶರಧಿಯೊಳನಿಶನಲಿಯುವರು ॥ ೩೬ ॥

ಎಂದುಬೋಧಿಸಲೆಸೆವಜಂಗಮ। ವೃಂದವದುಬಸವಾರ್ಯರು ಸುರಿದ । ಸಂದಬೋಧೆಯನಸಮಸದುಭಕುತಿಯೊಳುಮನವಿಟ್ಟು ॥ ಅಂದುಮಾಲಿಸಿಪರಮಸಂತಸ । ಪೊಂದಿಪರಿಪರಿಯಿಂದನುತಿಸುವ । ಚೆಂದಮಂಪೊಗಳಲ್ಕೆನಾಗೇಂದ್ರಂಗದಳವಲ್ಲ ॥ ೩೭ ॥

ಭವಹರನವರಕೃಪೆಯಮಹಿಮನೆ । ಭುವಿಯಭಕ್ತರಪ್ರೀತಿಪು ರುಷನೆ । ಭವದಬಂಧನಧ್ವಾಂತರವಿಮೇಣ್ದೀನರಕ್ಷಕನೆ ॥ ಶಿವನ ಧರ್ಮವಬೀರುವಾತನೆ । ಶಿವನಪುತ್ರನೆಮುಕ್ತಿಮೂಲನೆ । ಶಿವಕರದ ಬೋಧೆಯೊಳುಭಕ್ತರನುದ್ಧರಿಸುವವನೆ ॥ ೩೮ ॥

ಎಂದುವಿಧವಿಧನುತಿಸಿತಮ್ಮಯ । ಸಂದಬೋಧಾಮೃತದಿ ಮೋದವ । ಪೊಂದಿಪರಮಕೃತಾರ್ಥರಾದೆವುಲೋಕದೊಳುನೋಡೆ ॥ ಇಂದುಶ್ರೀಪರ್ವತಕೆತೆರಳಲು । ಚೆಂದದಿಂದಪ್ಪಣೆಯನೀಯುವು ದೆಂದುಚರವರರಿಂದಪರಕೆಯ ಪಡೆದುತನೆನಡೆದರ್ ॥ ೩೯ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆ ಮೇಣ ಕ್ಷರಗಳಲಿಷಟ್ಚಕ್ಕರದಘನದಂತೆತಿರೆಯೊಳಗೆ ॥ ಮೆರೆಯುತಿಹುದೀವರ ಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳು ವುದು ಪದಿನೇಳನೆಯ ಸಂಧಿ ॥ ೪೦ ॥

ಸಂಧಿ ೧೭ ಕ್ಕಂ ಪದ ೧೦೫೨ ಕ್ಕಂ ಮಂಗಲಂ ಮಹಾ ಶ್ರೀ ಶ್ರೀ

॥ ಓಂ ಶ್ರೀಸಹಸ್ರಾಕ್ಷಾಯ ನಮಃ ॥

# ಹದಿನೆಂಟನೆಯಸಂಧಿ.

★  ★

ಸೂಚನೆ:— ಜಲವಷ್ಟ್ರುತವನುಮಾಡಿಭಕ್ತಾ ।
ವಳಿಗುಣಿಸಿಶಿವಶರಣರೊರೆದಿಹ ।
ಲಲಿತವಹವರವಚನಶಾಸ್ತ್ರದ ಮಹಿಮೆಯುಸುರಿದನು ॥

ನಿಖಿಳಭುವನಾವಳಿಯನೊಳಕೊಂ । ಡಖಿಳಸೃಷ್ಟಿಸ್ಥಿತಿಲಯಂಗಳ । ಪ್ರಕಟತರಮೆನೆನಡೆಯಿಸುತಮಾಯಾವಿನೋದದಲಿ ॥ ಸುಕರದಿಂದಜಹರಿಹರಾದ್ಯರ । ವಿಕಳಗೊಳಿಸುತೆತೊಳಗಿಬೆಳಗುವ । ಸಕೃತಿಯಂಸಲೆತಾಳ್ದ ಸಾಂಬಸದಾಶಿವನೆಸಲಹು ॥ ೧ ॥

ಒಂದುವತ್ಸರಬಸವಯೋಗಿಗ । ಳಿಂದುಧರನಪರಾವತಾರಿಯು । ಮೆಂದುತಿರೆಯೊಳುಜಸವಪಡೆದುರುಸೊನ್ನಲಾಪುರದಿ ॥ ಚಂದದಿಂಮಿಗೆರಾಜಿಸುತ್ತಿಹ । ಸಂದಭಕ್ತರಬಂಧುಕರುಣಾ । ಸಿಂಧುಶ್ರೀಯತಿಸಿದ್ಧರಾಮೇಶನಪುರಾಣವನು ॥ ೨ ॥

ಎಸೆವತಮ್ಮಯಮಠದಿಪ್ರಾರಂ। ಭಿಸಲುಘನಸಂಭ್ರಮದೊಳದನುಂ । ಮಿಸುಪಪಶುಪತಿಭಕ್ತತತಿಶ್ರವಣವನುಗೈಯಲ್ಕೆ ॥ ಸಸಿನೆಯಿಂದಲಿಬಂದುಮಿಗೆಮನ । ಮೊಸೆದುಪ್ರತಿದಿನಕೇಳಿಘನಸಂ । ತಸದಿತೆರಳುತಲಿರ್ದರಾಚರವರನಪೊಗಳುತ್ತೆ ॥ ೩ ॥

ಇಂತುಪರಮಪುರಾಣವದುವರ । ಕಂತುಹರನುರುತರದಕೃಪೆಯಿಂ । ಕಾಂತಿಮಯವೆನಿಸಿರದೆನಡೆದುದುಮೂರುತಿಂಗಳುಗಳ್ ॥ ಸಂತತದಿಮೆರೆವೀಪುರಾಣವ। ಸಂತಶಾಂತಿಯುತಚರಬಸವದೇವಗೆ। ಸದಿಪರಿಪೂರ್ಣಗೊಳಿಸುವಯೋಚನೆಯದುದಿಸಿ ॥ ೪ ॥

ವರಪುರಾಣಸಮಾಪ್ತಿಕಾರ್ಯಕ್ಕೆ । ಭರದಿಸಾಹಿತ್ಯಗಳನೆಲ್ಲವ।
ಹರುಷದಿಂ ಶೇಖರಿಸಿಘನಭಕ್ತಿಯೊಳುಶಿವಗಣಕೆ ॥ ಪರಮತರದಾ
ರೋಗಣೆಯನುಂ । ಪಿರಿದೆಸಗಬೇಕೆನುತೆಪರಿಪರಿ । ತೆರದಭಕ್ಷ್ಯಾನ್ನಗ
ಳನಾಡಿಸಿಚರಗಣಕ್ಕಾಗಳ್ ॥ ೫ ॥

ಪೆಸರುವಡೆದಿಹಸಿದ್ಧರಾಮನ । ಲಸಿತಪೌರಾಣದಸಮಾಪ್ತಿ
ಯ । ಮಿಸುಪಸಂಭ್ರಮಕಖಿಳಚರನಿಕರವದುತವಕದೊಳು ॥ ಸಸಿನೆ
ಯಿಂದಾಗಮಿಪುದೆನುತಲಿ । ಪೊಸೆದುಬಿನ್ನಹವೆಸಗೆಚರತತಿ । ನಸುನ
ಗುತಲಾಗಮಿಸಿತತಿಸಂತಸದಿಸಂಭ್ರಮಕೆ ॥ ೬ ॥

ಪರಮಚರಮೂರ್ತಿಗಳಿಗಾಸನ। ವಿರಿಸಿಮುಂದೋಷ್ಣೋದಕದಿ
ಮೃದು । ಚರಣಗಳತೊಳೆದಷ್ಟವಿಧದಿಂದರ್ಚಿಸುತಮತ್ತಂ ॥ ಪರಿ
ಪರಿಯೊಳುಪಚರಿಸುತವರಿಗೆ।ಸರಿಸದೊಳಗನುಕೂಲವೆನಿಸುವ। ತೆರದಿ
ಮೆರೆವಡ್ಡಣಿಗೆಗಳಸಾಲ್ವಿಡಿದುತಾನಿಟ್ಟು ॥ ೭ ॥

ನೆರೆವಿರಾಜಿಪಪಾತ್ರೆಗಳನತಿ । ತ್ವರಿತದಿಂಮುಂದಿರಿಸಿಘನತರ।
ಮಿರುಪಬಟ್ಟಲುಗಳನುಕೊಟ್ಟಾಬಳಿಕ ಚರವರನು ॥ ಪರಿಪರಿಯ
ಪಕ್ವಾನ್ನಗಳನತಿ । ಹರುಷದಿಂದೆಡೆಮಾಡಿಭಕುತಿಯೊ । ಳುರುತರದ
ಶಿವಲಿಂಗಕರ್ಪಿತವಾಗಲೆಂದೆರಗೆ ॥ ೮ ॥

ಹರಗಣಂಗಳುತಮ್ಮಲಿಂಗಕೆ । ಹರುಷದಿಂದರ್ಪಿಸುತಲುಂಡ
ರು । ಹರಹರಮಹಾದೇವಶಂಕರಶಂಭುವೆಂದೆನುತೆ ॥ ತ್ವರಿತದಿ
ನೀಡಿದರುಬೇಡಿದ । ಸರಸವಾದಪದಾರ್ಥಮೆಲ್ಲವ । ತಿರೆಯೊಳಿಂತಾ
ರಾಧನೆಯನಾವ್ಕಾಣೆವೆಂದೆನುತೆ ॥ ೯ ॥

ಪಲವಿಧದಿಪೊಗಳುತ್ತಭೋಜನ। ಸಲಿಸಿಘನಸಂತೃಪ್ತಿಪೊಂದಿ
ದ । ಬಳಿಕಭಕ್ತಾವಳಿಯಪಂಕ್ತಿಯುಸಾಗಲಾಗೈದೆ ॥ ಮಲಹರನವರ
ಭಕ್ತವೃಂದವು । ಸಲಿಸುತಿರಲಾವೇಳೆಯೊಳಿಫ್ಪುತ । ಸಲಿಸನೀಡಲಿಕೆ
ಲ್ಲೆನುತಚರವರಗೆತಿಳುಪಿದರು ॥ ೧೦ ॥

ಪರಶಿವನಪರನೂವತಾರಿಗ । ಳುರುಮಹಾಮಹಿಮಾನ್ವಿತರು
ಸ । ಚ್ಚರಿತಶುಭತರಗಾತ್ರರನುಪಮದಿವ್ಯಮೂರ್ತಿಗಳು ॥ ಭರದೊಳಾ
ಲಿಸಿಜಲವಭಾಂಡದಿ । ತ್ವರಿತದಿಂ ತವೆತುಂಬಿಬಸವನ । ಪರಮನಾ
ಮವಪಠಿಸಿಪೂಜೆಯನೆಸಗಿ ನಂತರದಿ ॥ ೧೧ ॥

ಸಲಿಸಲಿಕೆನೀಡುವುದೆನುತ್ತಲಿ । ನಲುಮೆಯಿಂದೊರೆಯಲ್ಕೆ
ಭಕ್ತರು । ನಿಲದೆಭಾಂಡದಿಜಲವತುಂಬುತಚರವರನುಮುದದಿಂ ॥
ಉಲಿದಪರಿಪೂಜೆಯನುಗೈದಾ । ಬಳಿಕನೋಡಲು ಘಮಘಮಿಸು
ತಿಹ । ಸುಲಲಿತದಘೃತಮಾಗಿಶೋಭಿಸುತಿರ್ದುದೇನೆಂಬೆ ॥ ೧೨ ॥

ಆಗಭಕ್ತಾವಳಿಗೆನೀಡಲು । ರಾಗದಿಂಸಲಿಸುತ್ತಲೀಘೃತ ।
ಭೋಗಿಸುವನರರೇಕೃತಾರ್ಥರುನೋಡೆಲೋಕದೊಳು ॥ ಈಗಳೀಪರಿ
ಜಲದಿಘೃತವನು । ಬೇಗದಿಂತವೆಗೈದುಭಕ್ತಿಯ । ಯೋಗಮಂಜಗ
ಕಿರದೆಬೀರಿವಪರಮಚರವರನು ॥ ೧೩ ॥

ಪರಿಕಿಸರಲ್ಕೀಮೆರೆವಭುವನದ । ನರನುಮಲ್ಲವುಸರುವರನ್ನು ।
ದ್ಧರಿಸಲಿಕೆಬಂದಿರ್ಪಬಸವೇಶ್ವರನೆಪೆರನಲ್ಲಂ ॥ ತಿರೆಯೊಳೀಪರಿಮಹಿ
ಮವೆಸಗಿದ । ನರನನಾವಿನ್ನೆವರಕಾಣೆವು । ಮೆರೆವಧರಣಿಯೊಳೀಪರಿ
ಯಘನಮಹಿಮರಾರುಂಟು ॥ ೧೪ ॥

ಎನುತೆಗಣತಿಂತಿಣಿಯುಪೊಗಳ । ಲ್ಕನಿತರೊಳುಚರಗಣಕೆವೀ
ಳ್ಯವ । ಮನನೊಲಿದುಮಿಗೆದಕ್ಷಿಣೆಯಸಹಿತಿತ್ತುಸಂಭ್ರಮದಿ॥ ಅನ
ಘರೂಪರಜಂಗಮರನತಿ । ವಿನಯದಿಂಸತ್ಕರಿಸಿಕಳುಪಿದ । ನೆನಲಿ
ಕಿಂತಹದಾನಿಗಳುಧರ್ಮಿಗಳೊಳರೆಜಗದಿ ॥ ೧೫ ॥

ವರಗಣಾರಾಧನೆಗೆಕೂಡಿದ । ಪರಮಭಕ್ತಸಮೂಹವೆಲ್ಲವು ।
ಹರಶರಣಬಸವಾದಿಪ್ರಮಥರವದನದಿಂಪೊರಟ ॥ ವರವಚನಶಾಸ್ತ್ರದ
ಮಹತ್ವವ । ನರಿದುಕೊಳಬೇಕೆನುವಬಯ್ಕೆಯು । ತ್ವರಿತದಿಂದು
ದ್ಭವಿಸಲಾಹರಭಕ್ತಸಂದೋಹಂ ॥ ೧೬ ॥

ಮಾರಹರನಿಭಬಸವಯೋಗಿಯ । ಚಾರುಸನ್ನಿಧಿಗೈದಿವಂದಿ
ಸಿ । ಭೂರಿಮಹಿಮಾಕರನೆತಮ್ಮೆಯವದನದಿಂದೀಗಳ್ ॥ ಮೀರಿಬೆ
ಳಗುವವಚನಶಾಸ್ತ್ರದ । ಸಾರಮಹಿಮವನರಿದುಕೊಳ್ಳುವ । ಪಾರ
ಕಾಂಕ್ಷೆಯುಪುಟ್ಟಹುದುತಾವಿದನುಕ್ಕೃಪೆದಳೆದು ॥ ೧೭ ॥

ಒರೆದುಧನ್ಯರವಾಳ್ಪುದೆನುತಂ । ಪರಿಪರಿಯೊಳುರುಬೇಡಿ
ಕೊಳಲಾ । ಚರವರನುಹರಭಕ್ತರಾಕಾಂಕ್ಷೆಯನುತವೆತಿಳಿದು ॥ ಧರ
ಣಿಯೊಳುಘನಜಸವನಾಂತಿಹ । ವರವಚನಶಾಸ್ತ್ರದಮಹತ್ವವ ।
ನೊರೆಯುವೆನುನಿಮ್ಮಿಚ್ಛೆಯೊಲುಮನವಿಟ್ಟುಲಾಲಿಪುದು ॥ ೧೮ ॥

ಚಿನುಮಯನಭಕ್ತರಿರಪನ್ನೊಂ । ದನೆಯುಶತಮಾನವದುಪರಿ
ಶಿಸ । ಲನುಪಮಿತಶ್ರೀ ವೀರಶೈವದಧರ್ಮಕ್ರಾಂತಿಯುಗಂ ॥ ಘನ
ತೆವಡೆದಾಪರಮಕಾಲದ । ವಿನುತಮಾದಿತಿಹಾಸವೀಕ್ಷಿಸೆ । ಮಿನುಸ
ಧರೆಯೊಳುಧಾರ್ಮಿಕಕ್ರಾಂತಿಗಳೊಳತಿಶಯದ ॥ ೧೯ ॥

ಕಾಲವೆನುತಲಿಪೇಳುಬಹುದೀ । ಕಾಲದೊಳೆಶ್ರೀ ವೀರಶೈವ
ದ । ಮೇಲೆನಿಪಧರ್ಮಪ್ರಚಾರದಕಾರ್ಯವದುಭರದಿ ॥ ಪೇಳಲಸ
ದಳವಾಗಿಸಾಗಿತು । ಶೂಲಿಸಮರಾಗೆಸೆದಬಸವಸು । ಶೀಲ ಶ್ರೀ ಚರ
ಚೆನ್ನಬಸವನುಪಮಿತಪ್ರಭುದೇವ ॥ ೨೦ ॥

ದುರಿತಹರ ಶ್ರೀ ಸಿದ್ಧರಾಮೇ । ಶ್ವರನುಘನವೈರಾಗಿಣಿಯು
ಮೆನಿ । ಸಿರದೆಮಿಗೆಮೆರೆದಕ್ಕಮಹದೇವಿಗಳೆಮೊದಲಾದ ॥ ಪರಮ
ಪ್ರಮಥರೆತಿರೆಯೊಳೀಘನ । ತರದಧರ್ಮೋದ್ಧಾರಕಾರ್ಯದಿ । ಪಿರಿ
ದುಪರಮಪ್ರಧಾನಪಾತ್ರವವಹಿಸಿರಾಜಿಸಿದರ್ ॥ ೨೧ ॥

ಮೇದಿನಿಯೊಳಿವರಿಗೆಸಹಾಯಕ । ರಾದಶತಸಂಖ್ಯಾಕಪರತರ।
ಸಾಧುಶರಣರನಿಕರವೀಕಾರ್ಯವನುಕೈಕೊಂಡು ॥ ಸಾಧಿಸಿತುಮಿಗೆ
ತೃಪ್ತಿಕರಮಾ । ಗಾದಿನಾಥನಕೃಪೆಯೊಳಿರದೀ । ಆದರದಧಾರ್ಮಿಕ
ದಚರ್ಚೆಯುಘನಪ್ರಭಾವವದು ॥ ೨೨ ॥

ಎಲ್ಲಕಡೆಗುರುಪರಡಿಂತೀಗಿನ। ಮೇಲ್ಮೆಯುಗದೊಳುತಾರುರೇಡಿ
ಯೊ। ವುಲ್ಲಸವನತಿಕೊಡುವಗಾಡಿವಿಮಾನವೊದಲಾದ ॥ ಸಲ್ಲಲಿತಸಾ
ಮಗ್ರಿಗಳುಮಾ। ಗೆಲ್ಲಕಡೆಸಲೆವ್ಯಾಪಿಸಿರ್ದೊಡೆ। ನಿಲ್ಲದೀಗಳ್ನಿಖಿಲ
ಬ್ರಹ್ಮಾಂಡದೊಳುಮಿಗೆಮೆರೆವ ॥ ೨೩ ॥

ವೀರಶೈವಸಮಾಜವನುನಾವ್। ಭೂರಿಹರುಷದಿಕಾಣುತಿರ್ದ
ವು।ಮೀರಿಪರಮಪ್ರಸಾರಕಾರ್ಯವಸಾಗಿಸಲ್ಕಾಗಳ್ ॥ ಸಾರತರದನು
ಕೂಲತೆಗಳಾವ್। ಧಾರಿಣಿಯೊಳಿರದಿರ್ದೊಡಂಕಾ। ಮಾರಿಶರಣರಪ
ರಮಧಾರ್ಮಿಕದಪ್ರಭಾವವದು ॥ ೨೪ ॥

ದೊರೆವಡೆದರಾಮೇಶ್ವರದಿಮಿಗೆ। ಮೆರೆಯುವಹಿಮಾಚಲದಪ
ರಿಯಂ। ತರವುಘನತರಪ್ರಸರಿಸಿತ್ತಾಕತದಿಜನರುಗಳು ॥ ಪಿರಿದುಹರು
ಷದಿಬೇರೆಬೇರೆಯ। ಪರಮನಾಡಿನೊಳಿರ್ದನೇಕರು। ಭರದಿಧಾವಿಸಿ
ಮೆರೆವಕಲ್ಯಾಣಕ್ಕೆಬಂದಾಗಳ್ ॥ ೨೫ ॥

ವಿದಿತಬಸವೇಶ್ವರನನೇತೃ। ತ್ವದಕೆಳಗೆಯೊಂದೊಂದುವಿಧ
ಮಾ। ದಧಿಕತರಕಾಯಕವಕೈಕೊಂಡರುಮಹಾಮುದದಿ॥ ಸದಯರಾ
ದವರೊಳಗೆಕೆಲಬರು। ಬುಧರುಮೇಣ್ರಾಜಾಧಿರಾಜರು। ಸದುಭಕುತಿ
ಯಿಂದೈದೆರಾಜಿಸುತಿರ್ದರೇನೊರೆವೆ ॥ ೨೬ ॥

ಎತ್ತನೋಡಿದೊಡತ್ತಮಹಘನ। ನೆತ್ತಶ್ರೀ ವರವೀರಶೈವದ।
ಸತ್ಯಧರ್ಮದಚರ್ಚೆಯೇಸಡೆದಿತ್ತುಸಂಭ್ರಮದೆ ॥ ಸ್ತುತ್ಯವಹಧ
ರ್ಮದಪ್ರಸಾರವ। ನತ್ಯಧಿಕತರದಿಂದಗೈಯಲಿ। ಕುತ್ತಮೋತ್ತಮ
ಸಾಧನವದೆಂದರೆಧರಿತ್ರಿಯೊಳು ॥ ೨೭ ॥

ಪಿರಿದುರೂಢಿಯಮಾತೃಭಾಷೆಯೆ। ಪರಮಸಾಧನಮಾದುದೆ
ನುತಲಿ। ಶಿರೆಯೊಳಗೆಘನನೆತ್ತಮತಸಂಸ್ಥಾಪಕರುನಲವಿಂ ॥ ಒರೆವ
ರುರೆಕಲ್ಯಾಣನಗರವು। ಮೆರೆವಶರಣರಕಾಲದೊಳುಘನ। ತರದಕನ್ನ
ಡನುಡಿಯಪರಮಪ್ರಧಾನಕೇಂದ್ರವದು ॥ ೨೮ ॥

ಆಗಿಪಿರಿದುವಿರಾಜಿಸುತ್ತಿರೆ । ಭೋಗಿಭೂಷಣರೂಪಬಸವನು । ಮಾಗಳಖಿಲರಿಗಧಿಪತಿಯುತಾನಾದಕತದಿಂದೆ ॥ ರಾಗದಿಂಕನ್ನಡದ ನುಡಿಯೊಳೆ । ಬೇಗದಿಂಪೊಸಮಾದರಿಯಸೊಗ । ಸಾಗಿತೋರುವ ವಚನವಾಙ್ಮಯವ್ನೈದೆರಚಿಸಿದನು ॥ ೨೯ ॥

ಧರೆಯೊಳೀವಾಙ್ಮಯವುಕೇವಲ । ವರಸರಸಸಾಹಿತ್ಯದೃಷ್ಟಿ ಯೊ । ಳಿರದೆತವೆವೇದಾಂತಘನಸಿದ್ಧಾಂತಮೇಣೆಸೆವ ॥ ಗುರುತರ ಷ್ಟಾವರಣಷಟ್‌ಸ್ಥಲ । ಪರಮಪಂಚಾಚಾರತತ್ವಗ । ಳುರುವಿವೇಚ ನೆವಿಮಳಸತ್ಯವಹಿಂಸೆಕಾಯಕವು ॥ ೩೦ ॥

ಅಸಮತರದಾಬ್ರಹ್ಮಚರ್ಯವು । ಮಿಸುಪಶಿವಯೋಗವದು ಮೇಣ್ಜ್ಞಾನ । ರಸಿಕನೀತಿಸುಭಕ್ತಿಯೋಗಾದಿಗಳೆನೊದಲಾದ ॥ ವಿಷಯ ವಿಸರದಿಕೂಡಿರಸೆಯೊಳು । ಪೊಸತೆನಿಸಿಕರಮೆಸೆಯುತಿರ್ಪುದು । ವಸು ಧೆಯೊಳುಶ್ರೀ ಬುದ್ಧದೇವನುಮೀರಿದೋತ್ಸಹದಿಂ ॥ ೩೧ ॥

ಆದಿಯಿಂಮಿಗೆಮಾತೃಭಾಷೆಯ । ದಾದಪಾಲೀಭಾಷೆಯಲ್ಲಿ ಯೆ । ಬೋಧಕರಮಾದಸಮಧಾರ್ಮಿಕಗ್ರಂಥಗಳಬರೆದು ॥ ಮೇದಿನಿ ಯೊಳದನೆಂತುಜನರಿಗೆ । ಸಾದರದಮೇಲ್ಪಂಕ್ತಿಯನುಸಲೆ । ಶೋಧಿ ಸುತೆತೋರಿರ್ಪನಾಘನತರದಪದ್ಧತಿಯಂ ॥ ೩೨ ॥

ಪಿರಿದುಹರುಷದೊಳನುಸರಿಸಿಯೇ । ಶರಣರುರುತರವಚನವಾ ಙ್ಮಯ । ವಿರದೆಸಿದ್ಧವಪಡಿಸಿದರುಸಲೆಸಕಲಜಗವರಿಯೆ ॥ ನೆರೆವಿರಾ ಜಿಪಭಾರತೀಯರ । ಪರಮಧರ್ಮಗ್ರಂಥಗಳುಮಿಗೆ । ದೊರೆವಡೆದ ಗೀರ್ವಾಣದೊಳೆಬಹುರಚಿತವಾಗಿಹವು ॥ ೩೩ ॥

ಅವುಗಳುರುಸಾಮಾನ್ಯಜನರಿಗೆ । ತವೆತಿಳಿಯದತಿಕಷ್ಟಕರ ಮಾ । ದವುಗಳೆನುತಂತಿಳಿದುಜನಚಿಂತಿಸುತಲಿರ್ಪುದನು ॥ ಭವನಶರ ಣರುಕಂಡುಸದಯದಿ । ಭುವನದೊಳಗಾಮಾರ್ಗತಪ್ಪಿಸು । ತವಿರತಂ ವರಧಾರ್ಮಿಕಗ್ರಂಥಗಳುಜಗದೊಳಗೆ ॥ ೩೪ ॥

ಪಿರಿದುರೂಢಿಯಮಾತೃಭಾಷೆಯೊ । ಳಿರುವುದೇಮೇಲಾದಮಾ
ರ್ಗವು । ನರರಿಗಿದರಿಂದಧಿಕಹಿತಮಿನ್ನೊಂದುಮಿಲ್ಲೆನುತೆ ॥ ನೆರೆತಿಳಿದು
ಬಸವಾದಿಪ್ರಮುಖರು । ಮೆರೆಯುವೀಆಶ್ಚರ್ಯಕಾರಕ । ಪರಮಪೊ
ಸವಾಙ್ಮಯವಬೆಳಕಿಗೆತಂದರತಿಮುದದಿಂ ॥ ೩೫ ॥

ಈತೆರದವಚನಗಳರಚಿಸಿದ । ಪೂತಶರಣರಸಂಖ್ಯೆಯದುಮೀ ।
ಭೂತಳದೊಳೀಕ್ಷಿಸಲುಮುಸ್ನೂರಿರ್ಪುದಿದುದಿಟವು ॥ ಭೂತಪತಿಘನ
ಕೃಪೆಯೊಳವರುಗ । ಳೋತುರಚಿಸಿದವಚನಸಂಖ್ಯೆಯು । ಖ್ಯಾತ
ಬುಧರುಸುರುವರುಯೆರಡೆಂಭತ್ತುಕೋಟಿಯುಮೆಂದ್ ॥ ೩೬ ॥

ಈಪರಿಯಪೊಸಪದ್ಧತಿಯಘನ । ರೂಪದಿಂರಾಜಿಸುವವಾಙ್ಮ
ಯ । ವಾಪಿತಾಮಹಗೈದಸೃಷ್ಟಿಯೊಳಾವಭಾಷೆಯೊಳು॥ ರೂಪಿತವ
ದಾಗಿಲ್ಲವಿನ್ನೆವ । ರಾಪರಮಶರಣರಸಹಾಸವ । ಭಾಪುಭಾಪುರೆವರ್ಣಿ
ಸಲ್ಕಾಬ್ರಹ್ಮಗಳವಲ್ಲ ॥ ೩೭ ॥

ಎಂದುಮಾಂಗ್ಲವಿದ್ಯಕೋವಿದ । ರಿಂದುಘನತರಶಾಸ್ತ್ರವೇತ್ತ
ರು । ಸಂದಕನ್ನಡದೊಳಗೆಸಲೆಪಾಂಡಿತ್ಯಮುಳ್ಳವರು ॥ ಮಂದವಿಶ್ವಾ
ಸದೊಳುಮನದಾ । ನಂದದಿಂದುಸುರುತ್ತಲಿರ್ಪುದ । ನಿಂದುಜಗದೊ
ಳಗೆಲ್ಲಸಂತತಕೇಳಿನಲಿಯುವರು ॥ ೩೮ ॥

ಮೆರೆಯುವೀಪರವಚನಶಾಸ್ತ್ರವು । ತಿರೆಯೊಳಗೆನಿಜಸುಖದಪ
ಥಮಂ । ತ್ವರಿತತೋರುವುದೆನುತೆಮುಕ್ತಿಯಶಾಸ್ತ್ರಮೆನುತ್ತೈದೆ ॥
ಕರೆವರೀವರವಚನಶಾಸ್ತ್ರವು । ಪರಮವೇದಾಗಮಪುರಾಣಗ । ಳುರು
ತರೋಪನಿಷತ್ತುಗಳಿಗಿಂಬಹುಮಿಗಿಲೆನುತ್ತೆ ॥ ೩೯ ॥

ನಿರಘುಶರಣರುಸಾರುವರುಮಿದು । ಪರಮನಿಖಿಲಾಗಮಗಳರ್ಥ
ವ । ದೊರೆವಡೆದಶಾಸ್ತ್ರಗಳನಿರ್ಮಳಸರ್ವಸಂಪದವ ॥ ಉರುಗಹನ
ವಹವೈದಿಕಾರ್ಥದ । ಪಿರಿದುಸಾರವಸಕಲಧರ್ಮದ । ಕರಮೆಸೆವಹಿ
ರಿಮೆಯನುತಿಳುಪಿಕೊಡುತ್ತಲಿರುತಿಹುದು ॥ ೪೦ ॥

ಆದಕತದಿಂಹರಶರಣರಿಗೆ । ಮೋದದಿಂಸಲೆಶರಣುಬಂದವ। ರಾದರದಪಂಥವನುಪಿಡಿಯುತ್ತವರವಿುಗೆವೆುರೆವ ॥ ಮೇದಿನಿಯೊಳು ರುವೇದಕಿಂಮಿಗಿ। ಲಾದವಚನಾಮೃತವಸವಿದತಿ। ಸಾದರದೊಳಮ್ಮ ತತ್ವವನುಪಡೆಯುವುದೆಘನಲೇಸು ॥ ೪೧ ॥

ಅನುಭವಜ್ಞಾನವದುಶೋಭಿಪ । ತನುಗುಣಾದಿಗಳೆಲ್ಲವಂಸು। ಟ್ಟನುಪವಿುತಲಿಂಗದಗುಣಂಗಳದೊರೆಕಿಸುತಜವದಿ ॥ ವಿನುತಲಿಂಗಶ ರೀರವನುಮಾ। ಗನುನಯದೊಳಿಸಗುವುದುವಚನದೊ । ಳನಘಪರ ಶಿವಶರಣರೈಕ್ಯವಪೊಂದಿರಾಜಿಸುವರ್ ॥ ೪೨ ॥

ಧರಣಿಯೊಳಗಾನಿರಘದೇವನ । ಪರಮವೇದಾದಿಗಳುಕಾಣ ದೆ। ನಿರುತತಪಿಸುತಲಿಹವುವೇದಾತೀತನೆಂದೆನಿಸಿ ॥ ಕರೆಸಿಕೊಳುವಾ ದಿವ್ಯದೇವನು । ದೊರೆವನೇವೇದದೊಳುನೋಡಲು । ಮೆರೆವವೇ ದಂಗಳಿಗಭೇದ್ಯನುಮಾದಪರಶಿವನ ॥ ೪೩ ॥

ಪರಮಸಾಹಸದಿಂದಭೇದಿಸು। ಶಿರದೆಕಂಡರುಸೋಡೆಶರಣರು। ಮೆರೆವವೇದಾಗಮಗಳನುಸರಿಸುವುದಕಿಂಹರನ ॥ ಶರಣರುಗಳನುಸರಿ ಸುತಿಹುದೇ। ವರವಿಬುಧರಿಗೆಹಿತವದಾಗಿಹು । ದರಿಯೆಶರಣರುವೇ ದಕಿಂಘನಬಲ್ಲಿದರುಸಹಜಂ ॥ ೪೪ ॥

ಧಾರಿಣಿಯೊಳಿರುತಿರ್ಪಜನಗಳು । ಭೂರಿಭಕ್ತಿಯೊಳಾವದೇವ ನ । ಚಾರುದರ್ಶನವೆಸಗಬೇಕೆಂದಿರ್ಪರಾಭವನಂ ॥ ಮೀರಿಸಾಹಸ ದಿಂದಲರಸದೆ। ಮಾರಹರಶರಣರಸಮೀಪಕೆ। ಸಾರಿಬಂದರೆತಮ್ಮಪ ರತರಮನದಕೊನೆಮೊನೆಯ ॥ ೪೫ ॥

ಮೇಲಡಗಿಮೆರೆವವನನಿಮುಗುರು। ಲೀಲೆಯಿಂತೋರಿಸಿಕೊಡು ತ್ತಿಹ। ಕಾಲಸಿತಪರಮಾತ್ಮನನುನಿಮ್ಮಲ್ಲಿಯೇನಿಮ್ಮ ॥ ಮೇಲೆನಿಪ ಸದುಮನದಕೊನೆಮೊನೆ। ಮೇಲೆಯೇನೀವುಗಳುತವಕದಿ । ಪೇಳ ಲೇಂಕಾಂಬುವೊಲುಗೈವರುಘನವಿವೇಚನೆಯಿಂ ॥ ೪೬ ॥

ಶರಣರುರುದೇವತ್ವಪೊಂದಿಯೆ। ಪರಮಬೋಧೆಯಗೈವಕತ
ದಿಂ। ತಿರೆಯೊಳಗೆತಾವ್ಚರಿಪವರಪಥದೊಳಗೆನಿಮ್ಮೃಗಳ॥ ಹರುಷ
ದಿಂದೊಯ್ಯುವರುಪರಿಕಿಸೆ। ಧರೆಯೊಳವರಿಂಪರಮಮಿತ್ರರು। ದೊರೆ
ಯರವರಾವಚನಗಳಿಗಿಂ ಹಿತವದಿನ್ನಿಲ್ಲ ॥ ೪೭ ॥

ಕಿರುಕುಳದಲೋಹವನುಕನಕವ। ಭರದಿಮಾಡಲುಬಲ್ಲಪರುಷ
ದೊ। ಲುರುತರಂಗವಲಿಂಗವನುಮಾಗೆಸಗಲುಂಬಲ್ಲ॥ ಶರಣರಸುವ
ಚನಗಳನಂಬಿಯೆ। ಧರೆಯೊಳಗೆನೆರೆಬಾಳ್ವುದುಚಿತವು। ದುರಿತಕರ
ಭವರೋಗಪೀಡಿತರಾದನಿಮ್ಮೃಗಳ ॥ ೪೮ ॥

ಅಧರಕವುನಸುಕಹಿಯೆನಿಸಬಹು। ದುದರಕವುಸಿಹಿಯಾಗಿ
ತೋರ್ಪುವು। ಮುದದಿಬೇವನುಸವಿವವರುಮೀರಸೆಯೊಳೀಕ್ಷಿಸಲು॥
ವಿದಿತವಜ್ರಶರೀರರಾಗುತೆ। ಪದುಳದಿಂಸುಖಿಸುವೊಲುಶರಣರ। ಸದ
ಮಳಸುವಚನಗಳಸವಿದವರೀಧರಿತ್ರಿಯೊಳು ॥ ೪೯ ॥

ಪರಮಸುಖಮಂಪೊಂದಿಕಡೆಯೊಳ। ಗಿರದೆನಿತ್ಯಾನಂದಮು
ಕ್ತಿಯ। ನೆರೆಪಡೆದುಮೀಭವಕೆಪುನರಪಿಬಾರರಿದುಸತ್ಯಂ॥ ತಿರೆಯೊಳ
ಗತಾವುಗಳುಶ್ರೇಯಸ। ದೊರೆಕಿಸುತ್ತೆಸೆದಿರ್ಪುದದುಮಂ। ತಿರಲಿಕೇ
ವಲಸ್ವಾರ್ಥಿಗಳುತಾವಾಗದೀಜಗದ ॥ ೫೦ ॥

ಜನರಮಿಗೆಯುದ್ಧಾರಗೈಯುವ। ವಿನುತಶರಣರುಶೋಭಿಸು
ತಲಿ। ರ್ಪನುಪಮಿತಪಹವಚನಸೋಪಾನಗಳಮೇಣ್ಯೈದೆ॥ ಮಿನಗು
ತಿರ್ಪೀವಚನಜೋತಿಯ। ನನುನಯದೊಳಿತ್ತಿರ್ಪರದರಿಂ। ಘನಸ
ಹಾಯವಪೊಂದಿಮಿಗೆಯನುಭವವಪಡೆಯುವುದು ॥ ೫೧ ॥

ಬೆಳಗುವೀವರವಚನವಾಹಿನಿ। ಯೊಳಗೆಕಳಪೆಯದೆಂಬುದಿಲ್ಲ
ವು। ಮಳಲುನೊರೆತೆರೆಕೆಸರುಮೆಲ್ಲವುಪರಮಸಿಹಿರುಚಿಯು॥ ಇಳೆ
ಯೊಳೆಲ್ಲಾವಿಷಯವಿಸರದಿ। ತೊಳಗಿಬೆಳಗುವವಚನವಾಹಿನಿ। ನಿಲ
ದೆಯೆದುರಿಗೆಪರಿಯುತಿರಲದತೆಜಿಸಿಜಡಮತಿಯಿಂ ॥ ೫೨ ॥

ಚಾರುವೇದಾಗಮಗಳೆಂಬುವ । ಬೇರೆಬಾವಿಯತೋಡಿಲವಣ
ದ । ನೀರಸವಿದಂತಾಗುವುದುಮಿದುಸತ್ಯಮರಿಯುವುದು ॥ ಭೂರಿಶ
ಬ್ದಾಡಂಬರದೊಳೀ । ಧಾರಿಣಿಯೊಳಿರುತಿರ್ಪಶೃತಿಗಳ । ನಾರುಮಾಲಿ
ಸಿಕೆಟ್ಟುಪೋಗದೆವಚನಗಳನಂಬಿ ॥ ೫೩ ॥

ಬದುಕಿಕೊಳುವುದೆಪರಮಯೋಗ್ಯವು । ಮುದದೊಳಿವುಶಿವಪ
ಥವತೋರ್ಪವು । ವಿದಿತವಚನಗಳಿಹಪರಗಳೆರಡಕ್ಕವಶ್ಯಕವು ॥ ಸದ
ಮಳದವಚನಗಳನಂಬಿಯೆ । ಚದುರತನದಿಂದೆನಿತೊಮಹಂತರು ।
ಬಿದುಧರನಪದವಿಯನುಪಡೆದುರುಜಗದಿಬೆಳಗುವರು ॥ ೫೪ ॥

ಪರಮಮುಕ್ತಿಯಸುಖದಮಾರ್ಗವ । ನಿರದೆಸುಲಭೋಪಾಯ
ದಿಂದಂ । ನರರಿಗತಿತವಕದೊಳುವಿವರದಿತಿಳುಪಿಕೊಡುತಿರ್ಪ ॥ ಸರಸ
ಶಾಸ್ತ್ರವುವಚನಗಳನುಳಿ । ದರಿಯೆತಿರೆಯೊಳುಮೆಲ್ಲಿದೊರೆಯದು ।
ಮೆರೆಯುತಿರ್ಪವುಗಳಮಹತ್ವವಬಣ್ಣಿಸಲ್ಕಳವೆ ॥ ೫೫ ॥

ರಸೆಯೊಳಗೆವಚನಗಳರಚಿಸಿ । ರ್ಪಸಮಶರಣರಲಕ್ಷಣವನ
ಸು । ವುಸುರುವೆನುಸಲೆಕೇಳ್ವುದವರುಗಳತಿವಿನಯರೆನಿಸಿ ॥ ಎಸೆವ
ಲಿಂಗದಪೊರತುಮಿಗೆಮನ । ಮೊಸೆದುಮತ್ತಾವುದುಕು ನಸುಮೋ ।
ಹಿಸುವರಲ್ಲವುವಿಷವನೆರೆದವರಿಂಗೆಯಮೃತವನುಂ ॥ ೫೬ ॥

ಎರೆವವರುನಿಜಮಾರ್ಗದಿಂಪರ । ತರದಪ್ರಾಣವುಪೋದಡುಂ
ದೃಢ । ತರದೊಳನಿಶಂ ಬೇರೆಪಥಮಂ ಪಿಡಿಯದಿರ್ಪವರು ॥ ಪರತ
ನುವಿನಾಶಿಯದುಬಹುಪರಿ । ಪರಿಕಿಸಲ್ತಿಲಮಾತ್ರಮಿಲ್ಲದ । ರರರೆಮಾ
ನಪಮಾನಗಳಹತಿಗೆಂದುಮೀಭುವಿಯೊಳ್ ॥ ೫೭ ॥

ಬೀಳರವರೊಳುಪರಮತರಪಾ । ತಾಳಗಡೆಯಂಪಚ್ಚಿನೋಡ
ಲು । ಪೇಳಲೇನಭಿಮಾನವಹಂಕಾರಗಳುದೊರೆಯವವು ॥ ನಾಳೆನಾಡ
ದಕಿರಲಿಯೆಂಬುವ । ಕೀಳುಭಾವನೆತಲೆಯೆದೋರದು । ಲೀಲೆಯಿಂ
ಮಿಗೆಸತ್ಯಸಂಗತಿಗಳನೆಬಹುಶ್ರಮದಿಂ ॥ ೫೮ ॥

ಧಾರಿಣಿಯೊಳುರುತರಪ್ರಯೋಗಿಸಿ । ತೋರಿಸಲುಮುಂದಿರುವ
ವರುಮುದ । ವೇರಿನನ್ನದುತನ್ನದೆಂಬುವ ಭೇದಭಾವವದು॥ ತೋರದ
ವರುರುಮೆರೆವಪಂಚಾ । ಚಾರಮುಷ್ಟಾವರಣಷಟುಸ್ಥಳ। ಸಾರಜ್ಞಾನ
ಸುನಿಷ್ಠೆಗಳೊಳತಿ ಬಲ್ಲಿದವರನಿಶಂ ॥ ೪೯ ॥

ಪರಮತರಲಿಂಗೈಕ್ಯದೃಷ್ಟಿಯೊ । ಳಿರದಹಿತ ಜಾತ್ಯಾಭಿಮಾನ
ವ । ಮುರಿದುಭವಿಭಕ್ತರುಗಳೆಂಬೆರಡೇ ವಿಭಾಗವನುಂ ॥ ಪಿರಿದುಹರು
ಷದಿಗೈದುನಡೆವವ । ರುರುದುರಾಚಾರತ್ವತನದಿಂ । ನಿರುತಘನತರವೈ
ರಭಾವದಿವರ್ತಿಸುವರೊಳಗುಂ ॥ ೫೦ ॥

ಸಲೆತಿಳಿದುಪ್ರೀತಿಸುವರೊಳಗುಂ । ನಿಲದೆಯೊಂದೇದೃಷ್ಟಿ
ಯಿಂ ಮನ । ಮೊಲಿದುಮಿಗೆನೋಡುವವರೀಘನ ವಿಶ್ವಬಾಂಧವ್ಯ ॥
ಬೆಳಿಸಲತಿ ತವಕವನುಪಟ್ಟವ । ರಿಳೆಯೊಳಗೆಸಲೆಸಿತಿಗಳನಿಗಿಂ । ತಲ
ಘುತರಮೆನಿಸಿದಷಪಾಡಂಗಳನುಗೈದವರು ॥ ೫೧ ॥

ಪೇಳಲಸದಳವಾದದಯೆಯಿಂ । ಲೀಲೆಯಿಂ ಸಲೆತೋರುವವ
ರತಿ । ಶೀಲದಿಂ ನಡೆವವರುನಿರ್ಮಳತರದಕಾಯಕವೆ ॥ ಮೇಲೆನಿಪ
ಕೈಲಾಸವೆನುತಲಿ । ಪೇಳುವವರೀ ಮೆರೆವಜಗದೊಳು । ಬಾಳುತಿರು
ತಿಹಸಕಲಜೀವಾತ್ಮರಿಗೆಲೇಸನ್ನೇ ॥ ೫೨ ॥

ಪಿರಿದುಹರುಷದಿಬಾಳುಸುವವರುರು । ತರದಿಸ್ತ್ರೀಸ್ವಾತಂತ್ರ್ಯಕ
ಲ್ಪಿಸಿ । ಮೆರೆವವರುಮಿಗೆಬೆಳಗುವೀ ಲೋಕದೊಳೆಸಾಹಸದಿಂ ॥ ಪರ
ಮನಿತ್ಯಾನಂದಮುಕ್ತಿಯಾ । ಸರಸಸುಖವನುಭವಿಸುವವರತಿ । ದೊರೆ
ವಡೆದತಮ್ಮಯಸುಮತಮದು ವಿಶ್ವಮತವಾಗಲ್ ॥ ೫೩ ॥

ನೆರೆಯುಚಿತವಾಗಿರ್ಪತೆರದೊಳು । ವರವಿವೇಕದಿಕಲ್ಪಿಸಿರುವ
ವ । ರುರುದಯದೊಳಸ್ಪೃಶ್ಯರುದ್ಧಾರವನುಗೈದವರು ॥ ಚರಕದಿಂ
ಮಿಗೆತೆಗೆದನೂಲಿನ । ಪರಮವಸ್ತ್ರವಧರಿಸುವವರೀ । ತಿರೆಯೊಳಗೆಜನ
ರುಗಳಸತ್ಯಾಗ್ರಹದ ಬಲದಿಂದಂ ॥ ೫೪ ॥

ಹಿತದಿಸುಪಥವಪಿಡಿಸುವವರತಿ । ಸತತಸತ್ಯವ ಹಿಂಸೆಘನತಿ
ಯ । ಕ್ಷಿತಿಯೊಳಗೆಪರಮೋತ್ಸಹದಿ ಬೀರಿರುವವರುನೋಡೆ ॥ ವಿತ
ತಶೃತಿತತಿಗಿಂತ ಭುವಿಯೊಳ । ಗತುಳವಾಗಿಹವಚನಶಾಸ್ತ್ರವ । ನತಿ
ಮುದದಿಕನ್ನಡದಿ ವಿರಚಿಸಿಜಸವಪಡೆದವರು ॥ ೬೫ ॥

ಆದಶ್ರೀ ಬಸವಾದಿಪ್ರಮುಥರ । ಸಾಧುಹೃದಯದಿಪೊರಟಶಾ
ಸ್ತ್ರದ । ಗಾಧಮಹಿಮವವರ್ಣಿಸಲು ಹರಿಯಜರಿಗಳವಲ್ಲ ॥ ಮೇದಿ
ನಿಯಕಲ್ಯಾಣನಗರಿಯೊ । ಳಾದಘನತರವಚನಶಾಸ್ತ್ರದ । ಗಾಧಪರ
ಮಪವಾಡಮೊಂದನು ಪೇಳ್ವೆನಾಲಿಪುದು ॥ ೬೬ ॥

ಒಂದುಶತವರುಷಗಳಪಿಂದೆಯೆ । ಚೆಂದದಿಂ ಶೋಭಿಸುತಲಿ
ರ್ದಾ । ಸಂದಶೂಲಿಯಪೇಟೆ ಶ್ರೀ ಖಟ್ವಾಂಗಯತಿವರರು ॥ ಇಂದು
ಧರನನುಭಜಿಸುತತ್ಯಾ । ನಂದದಿಂ ಕಲ್ಯಾಣನಗರಿಗೆ। ಬಂದುಪ್ರಭು
ಸ್ವಾಮಿಗಳಮಠದೊಳುವಚನಶಾಸ್ತ್ರವನು ॥ ೬೭ ॥

ನಿತ್ಯಪ್ರವಚನರೂಪದಿಂದ । ತ್ಯುತ್ತಮದಿ ಭಕ್ತರಿಗೆಬೋಧಿಸ ।
ಹತ್ತಿರಲುಮಿಗೆರಾಜಿಪುತ್ತರದೇಶದಿಂದೋರ್ವ ॥ ಸ್ತುತ್ಯವಹವರಸಾ
ಧುಘನತರ । ವೆತ್ತಬ್ರಹ್ಮಜ್ಞಾನಿನಿರ್ಮಳ । ಚಿತ್ತನಿರುಪಮಶೀಲಜೀ
ವಾನಂದನಾಮಕನು ॥ ೬೮ ॥

ಮೆರೆವಪ್ರಭುಸ್ವಾಮಿಗಳಮಠದೊಳ । ಗುರುಮುದದೊಳಾಗಮಿ
ಸಿಘನಯತಿ । ವರರುಬೋಧಿಸುತಿರ್ದನಿರುಪಮವಚನಶಾಸ್ತ್ರವನು ॥
ಹರುಷದಿಂದಾಲಿಸುತಲತಿಶಯ । ಸ್ಥಿರತರದಚಿತ್ತದೊಳುಕುಳಿತಿರೆ ।
ಪರಮಯತಿವರರಂದುಮೆರೆವೀ ವಚನಶಾಸ್ತ್ರವಿದು ॥ ೬೯ ॥

ಕ್ಷಿತಿಯೊಳಗೆಮಿಗಿಲಾಗಿಶೋಭಿಪ । ಶೃತಿತತಿಗಳಿಂದಧಿಕಮೆನಿಸು
ತೆ । ಸತತರಾಜಿಸುತಿರ್ಪುದಿದಕೆಸಮಾನಶಾಸ್ತ್ರವದು ॥ ಕ್ಷಿತಿತಲದೊಳೆಲ್ಲೆ
ಲ್ಲಿದೊರೆಯದು । ವಿತತಮಾದಿದರುರುಮಹತ್ವವ । ಸ್ಥಿತಿಯಕಾರ್ಯ
ವಪೊತ್ತಹರಿಯಿಂ ಬಣ್ಣಿಸಲ್ಕರಿದು ॥ ೭೦ ॥

ಎಂದುಬಗೆಬಗೆಯಿಂದವಚನಗ । ಳಂದುಬಂಣಿಸುತಿರಲುಜೀ
ವಾ । ನಂದನಾಲಿಸಿಯತಿವರರೆ ನೀವೆಸೆವಶೃತಿತತಿಗಿಂ ॥ ಸಂದಶರಣರ
ವಚನಗಳಿಮೇ । ಲೆಂದುಪೇಳುವತಮ್ಮವಾಕ್ಯವು । ಚೆಂದಕಾಣ
ದುಮನಕೆಮಿಗೆಸಂದೇಹ ತೋರುವುದು ॥ ೭೧ ॥

ಆದಿಯಿಂ ಜಗದೊಳಗಪೌರುಷ । ವಾದವೇದಂಗಳಿಗೆಮನು
ಜರು । ಸಾದರದೊಳೊರೆದಿರ್ಪ ವಚನಗಳಿಂತುಸಮಬರ್ಕುಂ ॥ ಮೇ
ದಿನಿಯೊಳತ್ಯಂತವಿಸ್ಮಯ । ವಾದವಾತಿದು ನಿರುಪಮಿತವಹ ।ವೇದ
ಕಿಂ ಮಿಗಿಲಾದವಸ್ತುವು ತ್ರಿಭುವನದೊಳಿಲ್ಲಂ ॥ ೭೨ ॥

ಪರಮವೇದವನಂಬಿಯೇವರ । ಹರಿಯಜರುಗಂಧರ್ವವಿದ್ಯಾ।
ಧರರುಮೆರೆವನಿಮಿಷರು ಪರತರವಿಮಳರುಷಿವರರು ॥ ನಿರುತನಿತ್ಯಾ
ನಂದಸುಖಮಂ । ಹರುಷದಿಂದನುಭವಿಸುತಿಸೆವರು । ನರರವದನದಿ
ಪೊರಟ ವಚನದೊಳೇನುಪುರುಳಿರ್ಕುಂ ॥ ೭೩ ॥

ಎನುತೆವಚನಂಗಳನುತೆಗಳಲು । ವಿನುತಯತಿವರರಾಲಿಸುತ್ತಾ।
ಗನುನಯದೊಳುಸುರಲ್ಕೆ ತೊಡಗಿದರವನಕೂರ್ತ್ಗೆದೆ ॥ ಮಿನುಪಸಾಧು
ವರೇಣ್ಯ ಕೇಳೈ । ಜನರವದನದಿಪೊರಟವಚನಗ । ಳೆನುತೆಗಳುವು
ದಿದುವೆ ನೋಡಲಯೋಗ್ಯವಾಗಿಹುದು ॥ ೭೪ ॥

ರುಷಿಗಳಂತಃಸ್ಫೂರ್ತಿಯಿಂದಲಿ। ವಸುಧೆಯೊಳುಹೊರಹೊರಟು
ಘನತರ । ಮೆಸೆಯುತಿರುತಿರ್ಪುವುಗಳೇ ವೇದಗಳುಸಲೆನೋಡೆ ॥ ಅಸ
ಮಶರಣರಹೃದಯದಿಂ ಮನ । ಮೊಸೆದುಘನತರಸ್ಫೂರ್ತಿಯಿಂದಲಿ।
ರಸೆಯುಮಿಗೆಹಿಂತಕಾಗಿ ಪೊರಟವುಗಳೆಸುವಚನಗಳು ॥ ೭೫ ॥

ಜಗದೊಳಗೆವೇದೋಪನಿಷದಾ । ದಿಗಳನುಸುರಿರ್ಪುಜ್ಜ್ವರುಷಿಗ
ಳೊ । ಲಗಣಿತಪವಾಡಂಗಳನು ತಿರೆಯೊಳಗೆತೋರುತ್ತೆ ॥ ಅಗಹರನಿ
ಗಿಂ ಬಲ್ಲಿದರುಮಿಗೆ । ಸೊಗಸಿನಿಂ ಭಕ್ತರಿಗೆಭರದಿಂ । ದಗಜೆಯರಸನ
ತೋರಿಸುತ್ತಿರುವವರೆನುತೆಜಗದಿ ॥ ೭೬ ॥

ಪರಮನಿಖ್ಯಾತಿಯನುಪೊಂದಿದ । ಹರನಶರಣರವದನದಿಂ
ಮಿಗೆ। ಸರಸಮಾಗಿಯೆ ಪೊರಟವಚನಂಗಳನುತಿಳಿಯದಲೆ॥ ನರಕೊ
ರೆದವಚನಗಳೊಳೇಂಪುರು । ಳಿರುವುದೆನುತಲಿತೆಗಳುವುದುಮಿದು।
ಪರಮಪುರುಷರಮಾರ್ಗಮಲ್ಲವು ತಿಳಿದುಮುಸುರುವುದು ॥ ೭೭ ॥

ಚಾರುವೇದಗಳಾದಡೀವರ । ಧಾರಿಣಿಯನರರಿಂಗೆನಿಜಪಥ।
ತೋರದಲೆಘನಶಬ್ದಜಾಲದತೊಡಕಿನೊಳು ಪೊಗಿಸಿ ॥ ಘೋರಸಂಕಟ
ಪಡುವಸ್ಥಿತಿಯಂ। ಮೀರಿತರುತಿರ್ಪವುಗಳೊಳುಮಿಗೆ । ನೇರವಾಗಿ
ಹಮಾರ್ಗವಾವುದು ಕಠಿಣವಾವುದದು ॥ ೭೮ ॥

ಎನುವವಿಷಯಗಳೀ ಜನಂಗಳಿ । ಗನುನಯದಿ ತಿಳಿಯದಲೆಶ್ರು
ತಿಗಳ । ಘನತೊಗಟೆನಾರುಗಳಮಿಗೆ ಬಿಡಿಸುವುದರೊಳುಮತ್ತಂ ॥
ಮಿನುಪಕರಟವನೊಡೆಯುವುದರೊಳಿ। ವಿನುತವಾದಾಯುಷ್ಯವನು
ಕಳೆ। ದನಿಶಬೇಸರಪೊಂದಿತಿರುಳನುಕಾಣದಲೆಸತತಂ ॥ ೭೯ ॥

ವ್ಯಥೆಯಮಿಗೆಪಡುತಿರ್ಪುದಲ್ಲದೆ। ವಿತತವೇದಾದಿಗಳಬತ್ತವ।
ಸತತವಾಗಿಯೆ ಕುಟ್ಟಿಕುಟ್ಟಿನಿಡಾದತಂಡುಲವ ॥ ಒತದಿಕಾಣದೆ
ನೋವುನೆರೆತಿಂ। ದತಿಶಯದಿಬಳಲುವರು ನೋಡಲು । ಕ್ಷಿತಿಯೊಳಿದ
ರನಿಜಾರ್ಥಕಾಗಿಯೆಪರಮಪುರುಷರೊಳು ॥ ೮೦ ॥

ಪಿರಿದುಮತಭೇದಂಗಳುಂಟಾ। ಗರರೆತ್ತಮ್ಮಯಮನಕೆಬಂದೊ
ಲು। ಸರಸವೆನಿಸಿದಭಾಷ್ಯಗಳರಚಿಸಿರ್ಪರತಿನಲವಿಂ ॥ ಪರಿಕಿಸಲ್ಕೀ
ಭಾಷ್ಯಗಳನುಂ। ತಿರೆಯೊಳೊಂದಕ್ಕೊಂದುತಾಳಿಯು। ಮಿರದೆಭೂ
ಮ್ಯಾಕಾಶದಂತರಭೇದವದುತೋರ್ಕುಂ ॥ ೮೧ ॥

ಈತೆರದಿನಿಜಮಾರ್ಗವನುಮೀ। ಭೂತಳದಿಜನರಿಂಗೆತೋರದೆ।
ಸಾತಿಶಯವ್ಯಥೆಗೊಳಿಸುವೀ ಶ್ರುತಿಗಳನುನೆರೆನಂಬಿ ॥ ಪೂತಜನ್ಮವ
ವ್ಯರ್ಥಗೊಳಿಸದೆ। ಭೂತನಾಥನಶರಣನಿಕರವ। ದೋತುತಮ್ಮನುಭ
ವದಿಜನರಿಗೆಸುಲಭದಿಂ ತಿಳಿವ ॥ ೮೨ ॥

ಲಲಿತವಹಕನ್ನಡದನುಡಿಯೊಳೆ। ನಲವಿನಿಂ ರಚಿಸಿರ್ಪವಚನ
ಗ। ಳಲಘುತರದಿಂ ನಂಬಿನಿತ್ಯಾನಂದಸೌಖ್ಯವನು ॥ ನಿಲದೆಸಂತತ
ಮನುಭವಿಸುವುದು। ವೊಳಿತಿದಲ್ಲವೆಎನುತಲೊರೆಯಲು। ತೊಳಪ
ಜೀವಾನಂದನಿದನಾಲಿಸುತೆಮತ್ತಾಗಳ್ ॥ ೮೩ ॥

ಪರಮಶಿವಯೋಗೀಶ್ವರರೆತಾ। ವೊರೆದವಿಷಯವತಿಳಿದುನೋ
ಡಲು। ತಿರೆಯೊಳಗೆಕೆಲಬರಿಗೆ ನಿಜವೆನುತ್ತೈದೆತೋರುವುದು ॥ ಮೆರೆ
ಯುವೀ ವರಸೃಷ್ಟಿಯೊಳುನೆರೆ। ಪರಿಕಿಸಲ್ಕೆನಿತೋದಿನಗಳಿಂ। ಸರಸ
ಶೃತಿಗಳಮೇಲೆ ಪೂಜ್ಯತೆತೋರ್ಪಜನರುಗಳ ॥ ೮೪ ॥

ಮನಕೆಬಾರದುನೀವುವಚನಗ। ಳನುಪಮಿತವೇದಂಗಳಿಗೆ
ಮಿಗಿ। ಲೆನುವುದನುಪ್ರತ್ಯಕ್ಷ ನಯನಕೆಕಾಂಬುವೊಲುನನಗೆ ॥ ಅನು
ನಯದಿತವೆತೋರಿಸಿದಡಾಂ। ಸನುಮತದಿನಂಬುವೆನು ನೀವಿದ। ನೆನ
ಗೆನೆರೆಪ್ರತ್ಯಕ್ಷತೋರಿಸಿಕೊಡುವುದೀಗಳೆನೆ ॥ ೮೫ ॥

ಪರಮಋಶಿವರರಿದನುಮಾಲಿಸಿ। ಪರಿಕಿಸಲುನೀನೊರೆದವಾಕ್ಯ
ವು। ಧರೆಯೊಳತಿಶಯಕ್ಲಿಷ್ಟವಿಷಯವದಾಗಿತೋರುವುದು ॥ ಸರಸ
ವಚನಂಗಳನುಶೃತಿಗಿಂ। ಪರಮಶ್ರೇಷ್ಠವದೆನುವವಿಷಯವ। ಭರದಿ
ತವೆಪ್ರತ್ಯಕ್ಷಪ್ರಮಾಣದೊಳುತೋರಿಸುವ ॥ ೮೬ ॥

ಹದನವದುಮೆನಗೀಗತೋರದು। ಸದುಹೃದಯದಿಂ ನೀನೆಯಿ
ದರುರು। ಹದನವನುತವೆ ತೋರಿಸಿದಡದರಂತೆನಾನೈದೆ ॥ ಮುದದೊ
ಳಿಸಗುವೆನೆನುತಲುಸುರಲು। ಸದಯಸಾಧುವರೇಣ್ಯನಾಕ್ಷಣ। ಮಧಿ
ಕಮೋದವತಾಳ್ದು ಯತಿಗಳಕೂರ್ತುಮತ್ತಾಗಳ್ ॥ ೮೭ ॥

ಪದುಳದಿಂ ಪ್ರತ್ಯಕ್ಷಪ್ರಮಾ। ಣದೊಳುತವೆತೋರ್ಪೊಂದು
ಪರಿಯನು। ಸದಮಳಾತ್ಮರೆವೊರೆವೆನಾಲಿವುದೀ ಮಹಾಮತದೊಳ್ ॥
ಅಧಿಕಮಾದೊಂದಗ್ನಿಕುಂಡವ। ಚದುರತನದಿಂ ವಿರಚಿಸುತ್ತಂ। ವಿದಿ
ತಮಾದೀ ವಚನಶಾಸ್ತ್ರವಪಿಡಿದುಕೊಂಡಾಗಳ್ ॥ ೮೮ ॥

ಧರಣಿಯೊಳುಘನಮೆರೆವಶ್ರುತಿಗಿಂ । ಪರಮುತರತತ್ವಗಳನೊಳ
ಗೊಂ । ಡುರುಪವಿತ್ರವದೆನಿಸಿ ನರರಿಗೆಸುಲಭಮಾರ್ಗದೊಳು ॥ ಪರ
ಮಮೋಕ್ಷೋಪಾಯವನುಬಹು । ತ್ವರಿತದಿಂ ತವೆತಿಳುಪಿಕೊಡುತಿಹ ।
ಪಿರಿದುಶಕ್ತಿಯದಿದರೊಳಗೆ ಕರಮಿರ್ದುದಾದಡೆಯುಂ ॥ ೮೯ ॥

ಮೆರೆಯುತಿರ್ಪೀಅಗ್ನಿಕುಂಡದೊ । ಳಿರಿಸಲೇಶವುಸುಡದೆಮೊದ
ಲಿನ । ತೆರದಿಸುವಿರಾಜಿಸುತಲಿರಬೇಕೆನುತೆಸದುಮನದಿಂ ॥ ವರಪ್ರತಿ
ಜ್ಞಾರೂಪಮಾಗಿಹ । ಪರಮವಚನಂಗಳನುನುಡಿದುರು । ತರದಿಪ್ರಜ್ವಲಿ
ಪಗ್ನಿಯೊಳಗಿಡಲದಕೆನಸುಮಾತ್ರಂ ॥ ೯೦ ॥

ಝಳವುಸೋಂಕದೆಮೊದಲಿನೊಲೆಸಲೆ । ಪೊಳೆಯುತಿರ್ದೊಡೆ
ವೇದಗಳಿಗಿಂ । ತಲಘುಶರಣರವಚನಶಾಸ್ತ್ರವೆ ಘನಮಿಗಿಲೆನುತ್ತೆ ॥
ಸಲೆತಿಳಿವೆಸಂದೆಗವದಿಲ್ಲದೆ । ನಲವಿನಿಂದೀ ಪರಿಯೊಳೆಸಗ । ಲ್ಕಿಳೆ
ಯೊಳಿದುಪ್ರತ್ಯಕ್ಷಪ್ರಮಾಣವುಯೆನಿಸುತಿಹುದು ॥ ೯೧ ॥

ಎಂದುಸುರೆಯತಿವರರುಘನಮುದ । ದಿಂದನೀನೊರೆದಂತೆಯಾ
ಗಲಿ । ಯೆಂದುಮಠದೊಳಗಗ್ನಿಕುಂಡವರಚಿಸಲಾಕ್ಷಣದಿ ॥ ಸಂದಮಾ
ದೀ ವಾರ್ತೆನಗರದೊ । ಳಂದುವಿದ್ಯುದ್ವೇಗದಿಂ ಜನ । ವೃಂದದೊಳು
ಪಸರಿಸಲುಮತ್ಯದ್ಭುತವದಾಗಿರ್ಪ ॥ ೯೨ ॥

ವರವಚನಶಾಸ್ತ್ರದಪವಾಡವ । ಹರುಷದಿಂದೀಕ್ಷಿಸಲಿಕಿಚ್ಛಿಸಿ ।
ಭರದಿನೆರೆದುದಸಂಖ್ಯಜನ ಸಂದೋಹಮಠದೊಳಗೆ ॥ ಪರಮ
ಖಟ್ವಾಂಗೇಶಯತಿಗಳು । ಹರಮನುನಪಠಿಸುತ್ತಲಾಗಳ್ । ವರವಚ
ನಗಳಬರೆದತಾಳೆಯಗರಿಯಗ್ರಂಥವನು ॥ ೯೩ ॥

ಸಲೆವಿರಚಿಸಿರ್ಪಗ್ನಿಕುಂಡದ । ಬಳಿಗೆಕರದೊಳುತಂದುದೃಢ
ದಿಂ । ತೊಳಪಜೀವಾನಂದನುಸುರಿದತೆರದಿವಾಕ್ಯಗಳ ॥ ನಲವಿನಿಂದು
ಚ್ಚರಿಸುತತಿಪ್ರ । ಜ್ವಲಿಸುವಗ್ನಿಯೊಳಿಡಲಿಕಾಗಳ್ । ನಿಲದೆಭುಗಿಭುಗಿ
ಲೆನುತೆಮಿಗಿಲಾಗುರಿಯುತಿರುತಿರ್ದ ॥ ೯೪ ॥

ಅಲಘುತರವಾದಗ್ನಿಯದುಸಲೆ । ಮಳೆಯುಬಂದುರುತಣ್ಣಗಾದೊಲು । ಘಳಿಲನಗ್ನಿಯುಮೆಲ್ಲಶಾಂತವದಾಗಿ ಪೋಗುತ್ತೆ ॥ ಲಲಿತವಹವರವಚನಶಾಸ್ತ್ರಕೆ । ಝಳವುನಸುಸೋಂಕದಲೆನೊದಲೊಲು । ತೊಳಗಿಬೆಳಗುತಲಿರ್ದುದನು ಕಂಡಾಗಮಠದೊಳಗೆ ॥ ೯೫ ॥

ನೆರೆದಜನಸೋತ್ತಮವದುಭರದಿಂ । ದಿರದೆಪರಮಚ್ಚರಿಯದಳೆಯು । ತ್ತರರೆ! ಏನಿದುವಚನಶಾಸ್ತ್ರದಪರಮಮಾಹಾತ್ಮ್ಯ ॥ ತಿರೆಯೊಳೀತೆರದುರುಪವಾಡವ । ಪಿರಿದುಹರುಷದಿನೋಡಿದೆಮ್ಮಯ । ಮೆರೆವಜನ್ಮವೆಧನ್ಯಧನ್ಯವೆನುತ್ತೆ ಪೊಗಳಿದರು ॥ ೯೬ ॥

ಸಾಧುಜೀವಾನಂದನಾಗಳ । ಗಾಢವಾದಪವಾಡಮಂ ಕಂ । ಡಾದರದಿವರವಚನಶಾಸ್ತ್ರವನುತಿಸಿಪರಿಪರಿಯಿಂ ॥ ಮೇದಿನಿಯೊಳತ್ಯಂತಪೂಜ್ಯರು । ಮಾದಖಟ್ವಾಂಗೇಶಯತಿಗಳ । ಪಾದತಲದೊಳು ಪರಮಭಕ್ತಿಯೊಳೆರಗಿಕರಮುಗಿದು ॥ ೯೭ ॥

ದೇವನಿಮ್ಮಯಮಹಿಮೆಪೊಗಳಲ । ದಾವಬಲ್ಲಿದನಿಳೆಯೊಳಗೆತ । ದ್ಪೇವಗುರುವಿಂಗಾಗದೆನೆ ನಾವೊಗಳಲೆನಿತರವಂ ॥ ಸಾವಹುಟ್ಟಿವದಂದುಗಂಬಿಡ । ದಾವಗಂ ಸಲೆನಿಮ್ಮಪದರಾ । ಜೀವವಂಪಿಡಿಯುತ್ತಮುಕ್ತಿಯಪಥವನರಸುವೆನು ॥ ೯೮ ॥

ನಾನುಪೂರ್ವದೊಳೇಂ ಕೃತಾರ್ಥನೊ । ನಾನುಪೂರ್ವದೊಳೇನುಸುಕೃತಿಯೊ । ನಾನುಮೊದಲೇಂ ಧನ್ಯನೋಪುಣ್ಯಾತ್ಮನೋಮತ್ತೆ ॥ ನಾನುಮೊದಲೇನನಘನೊಮ । ತ್ತಾನುಮೊದಲೇಂ ಭಾಗ್ಯವಂತನೊ । ಹೀನನಾದೆನಗೀಗತಮ್ಮಯ ಪರಮದರ್ಶನದಿ ॥ ೯೯ ॥

ಎನ್ನಗುರುವೆಯೆನ್ನದೊರೆಯೆ । ಯೆನ್ನಸಿರಿಯೇಎನ್ನಪೊರೆಯುವೆ । ಯೆನ್ನಭಾವವೆಯೆನ್ನದೈವವೆಯೆನ್ನ ಹಿತಪಿತೃವೆ ॥ ಎನ್ನಘನಚಿಂತಾಮಣಿಯೆಮೇ । ಚೆನ್ನಪರುಷದಖಣಿಯೆಯೆನ್ನಗೆ । ನನ್ನಿಯಿಂ ಶ್ರೀ ವೀರಶೈವಸುದೀಕ್ಷೆಯನ್ನಿತ್ತು ॥ ೧೦೦ ॥

ಉದ್ಧರಿಸಬೇಕೆನುತೆ ಬೇಡೆಸು । ಸಿದ್ಧಖಟ್ವಾಂಗೇಶಯತಿವರ ।
ಶುದ್ಧಮಾನಸನಾದ ಜೀವಾನಂದಸಾಧುವನು ॥ ಹದ್ದುಮಿಲ್ಲದದಯದಿ
ಕಂಡುರು । ಶ್ರದ್ಧೆಯಿಂ ಶಿರಪಡನಿಪರಮಪ್ರ । ಸಿದ್ಧಮಾಗಿಹವೀರ
ಶೈವಸುದೀಕ್ಷೆಯಂ ಕೊಡಿಸಿ ॥ ೧೦೧ ॥

ಪರಮತರತತ್ವೋಪದೇಶವ । ಕರಮೆಸಗಿವರವಚನಶಾಸ್ತ್ರವ ।
ನಿರದೆಕರದೊಳಗಿತ್ತು ನೀನೀಶಾಸ್ತ್ರದೊಳಗೊರೆವ ॥ ಪರಿಯೊಳಾಚರಿಸು
ತ್ತನಿನ್ನಯ । ಪರಮಜನ್ಮದಸಾರ್ಥಕವನುರು । ತರದಿಗೊಳಿಸಿಕೊಳು
ತ್ತೆಪರಮೇಶ್ವರನ ಘನಕೃಪೆಗೆ ॥ ೧೦೨ ॥

ಸತತಪಾತ್ರನುಮಾಗುವುದುಮೆಂ । ದತಿಹಿತದಿವಿವರದೊಳುಪೇ
ಳಲು । ಶೃತಿವಿದನುಮಾಗೆಸದ ಜೀವಾನಂದಸಾಧುವರಂ ॥ ಯತಿಗಳಾ
ಜ್ಞಾಪಿಸಿದೊಲನಿಶಂ । ವಿತತಮಾದಾವಚನಶಾಸ್ತ್ರದೊ । ಳತಿಶಯದ
ಭಕ್ತಿಯನುತಳೆದದರಂತೆಯಾಚರಿಸಿ ॥ ೧೦೩ ॥

ಪರಮನಿತ್ಯಾನಂದಪದವಿಯ । ನಿರದೆಪಡೆದುರುರಾಜಿಪಂದ
ದಿ । ನೆರೆದನೀವುಗಳೆಲ್ಲಮೆರೆವೀ ವಚನಶಾಸ್ತ್ರದೊಳು ॥ ಪಿರಿಸುಭಕ್ತಿ
ಯನಿಟ್ಟುಮುದದೊಳ । ಗಿರುವತೆರದೊಳುನಡೆಮನಿಮ್ಮಗ । ಳುರುತರ
ದಜನ್ಮಗಳಸಾರ್ಥಕಪಡಿಸಿಕೊಳ್ಳುವುದು ॥ ೧೦೪ ॥

ಎಂದುಚರಬಸವೇಶ್ವರರುಮುದ । ದಿಂದಬೋಧಿಸಿದುದನುಭ
ಕ್ತ । ವೃಂದವಾಲಿಸಿಸಂತಸಾಂಬುಧಿಯಲ್ಲಿಲೋಲಾಡಿ ॥ ನಂದಿವಾಹನ
ರೂಪಕರುಣಾ । ಸಿಂಧುಭಕ್ತರಬಂಧುನಿನ್ನಯ । ಸಂದಬೋಧಾಮೃತ
ದಿಧನ್ಯತೆವಡೆದೆವಾವೀಗಳ್ ॥ ೧೦೫ ॥

ಮೂರುಕಣ್ಣೀಶ್ವರನನೆರೆನರ । ರಾರುಕಾಣರುಕಾಣದಲೆಮುದ ।
ವೇರಿಕೊಂಡಾಡುವರು ಶಿವಹರಭರ್ಗಭವನೆಂದು ॥ ಮೂರುಜಗದೊ
ಳಗಿರುವಜನರಿಗೆ । ಸಾರನಿಜಪಥತೋರಿಸಲಹಲು । ಧೀರಜಂಗಮ
ಮೂರ್ತಿಗದುಸಲ್ಲುವುದುಸಟೆಯಲ್ಲಂ ॥ ೧೦೬ ॥

ಎಂದುಭಕ್ತವೃಂದವದುಮುದ । ದಿಂದ ಶ್ರೀ ಚರಬಸವಯೋಗಿಗ ।
ಳಂದುಪರಿಪರಿನುತಿಸಿಸಲೆಸಾಷ್ಟಾಂಗವನ್ನೆಸಗಿ ॥ ತಂದೆಯೇನಾವ್
ಪೋಗಿಬರುವೆವು । ಯಿಂದುನಮಗಪ್ಪಣೆಯನೀವುದು । ಯೆಂದುಪರ
ಕೆಯುಪಡೆದುತಮತಮಗೃಹಕೆತೆರಳಿದರು ॥ ೧೦೭ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆ ಮೇಣ।
ಕ್ಷರಗಳಲಿಷಟ್ಟಕ್ಕರದಘನದಂತೆತಿರೆಯೊಳಗೆ ॥ ಮೆರೆಯುತಿಹುದೀವರ
ಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳು
ವುದು ಪದಿನೆಂಟನೆಯ ಸಂಧಿ ॥ ೧೦೮ ॥

ಯೋಗಿಜನವಂದಿತೆ ಕುಳಾಂಗನೆ ತಲೋದರಿ ಸುವರ್ಣನಿಭರೂಪಿಣಿ ಪ್ರತಿ
ಸ್ಮಿತೆ ಮಹೇಶಿ । ಆಗಮನುತಿಪ್ರಿಯೆ ಮನಸ್ವಿನಿ ವಿಶೃಂಖಲೆ ಗುರುಪ್ರಿಯೆ ಸರಸ್ವತಿ
ಯಶಸ್ವಿನಿ ಸುನೇತ್ರೆ ॥ ಯೋಗಿಣಿ ಮಹಾಸನೆ ಮಹಾತ್ರಿಪುರಸುಂದರಿ ಸಹಸ್ರ
ಮುಖಿ ನಿರ್ಭಯೆ ಸಹಸ್ರಪಡೆಹಂಸಿ । ಭೋಗಸುಖಸಂಪದ ವರಪ್ರದೆನಿರಂತರ
ಮೃಡಾಣಿ ಸಲಹೆನ್ನ ನೆಲೆಮಾತೆ ಮಹಾದೇವಿ ॥ ೧೦೯ ॥

ಸಂಧಿ ೧೮ ಕ್ಕಂ ಪದ ೧೧೬೦ ಕ್ಕಂ ಮಂಗಲಂ ಮಹಾ ಶ್ರೀ ಶ್ರೀ



॥ ಶ್ರೀ ಗುರುದಕ್ಷಿಣಾಮೂರ್ತಯೇ ನಮಃ ॥

# ಹತ್ತೊಂಬತ್ತನೆಯ ಸಂಧಿ.



ಸೂಚನೆ:— ಚರಬಸವಯೋಗಿಗಳುವರಗುರು ।
ಚರರಸೇವೆಯನೆಸಗುತನುದಿನ ।
ಪರಿಪರಿಯುಮಹಿಮೆಗಳತೋರ್ದೆಸೆದರುಧರಿತ್ರಿಯೊಳು ॥

ಪರಶಿವನಪರಮಾರ್ಥರೂಪನ । ಗಿರಿಜೆಯರಸನದುರಿತದೂರನ। ಪರಮಭಕುತರಕಾಮಿತಾರ್ಥವನೀವನೈನೊಗನ ॥ ಶಿರದಿಶಶಿಯಂಗ ಳದಿಗರಳವ । ಧರಿಸಿದನಶ್ರೀ ಕೃತ್ತಿವಾಸನ । ನಿರುಪಮನನಿರ್ಲೇಪ ನಿತ್ಯನಪದಕೆನಮಿಸುವೆನು ॥ ೧ ॥

ಶರಣಜನರಕ್ಷಣವಿಚಕ್ಷಣ । ಮರಣರಹಿತನುಮಾರಮಣನು ರು । ಚರಣಸಂಸ್ಮರಣಪ್ರವೀಣ ಗುಣಾರ್ಕಮಣಿಗರುಣ ॥ ಪರಿಭವ ಭ್ರಮಹೋತ್ತರಣನೀ । ಧರಣಿಗತಿಭೂಷಣನಿರೀಕ್ಷಣ । ಚರವರೇಣ್ಯ ನುತಾನುಸಂತಸದಿಂದಲಿರುತಿಹನು ॥ ೨ ॥

ಪರಶಿವನುಲೋಕದೊಳುತೋರದ । ಲಿರುವನಾಪರಶಿವನೆ ಶ್ರೀ ಚರ । ವರನೆನಿಸುತೆಲ್ಲರಿಗೆಕಾಣುತ ಭಕ್ತಜನರುಗಳ ॥ ಪಿರಿಯಮಲ ಮಾಯೆಗಳಕರ್ಮವ । ಪರಿಹರಿಸಿಸದ್ಬೋಧೆಯಿಂದು । ದ್ಧರಿಸುವನು ತಾನೆನಲು ಚರಬಸವೇಶಕಾರಣನು ॥ ೩ ॥

ಒಂದುದಿನಚರವರನುಘನಮುದ । ದಿಂದಶೀರೆಗಳನ್ನುಮಾರ ಲಿ । ಕೆಂದುರಾಜಿಪಿಜೇರಿಸಂತೆಗೆ ಗಮಿಸುತಿರುತಿರಲು ॥ ಅಂದುಚೋರ ರವ್ಯಂದತೀವ್ರದಿ । ಬಂದುಮುತ್ತಲುತಕ್ಷಣವೆಘನ । ಕಂದುಗೊರಳನ ರೂಪರವರಿಗೆಶೀರೆಗಳನೆಲ್ಲ ॥ ೪ ॥

ಅಂದೆದಾನವನೆಸಗೆಘನನಲ । ವಿಂದಚೋರರುತೆಗೆಡುಕೊಳು ತಂ । ಮುಂದಕಡಿಯಿಡಲಾಕ್ಷಣವೆ ನಯನಗಳುಕಾಣಿಸದೆ ॥ ಬಂದ ತಸ್ಕರರೆಲ್ಲವಿಸ್ಮಯ । ಪೊಂದಿಯಿವರಾರೋ ಮಹಾತ್ಮರು । ಯೆಂದರಿ ದುಮಿಗೆನೊಂದುಮನದೊಳುಭಕ್ತಿಯದುಪುಟ್ಟ ॥ ೫ ॥

ತರಹರಿಸಿಬರುಬರುತಲಾತನ । ಚರಣಸನ್ನಿಧಿಯಲ್ಲಿಬಿದ್ದಾ । ತುರದಿಸದ್ಗುರುದೇವಭಕ್ತರಜೀವ ವರಭಾವ ॥ ಮೆರೆವನಿಮ್ಮಯಮಹಿ ಮೆಯನುಮುಂ । ದರಿಯದಜ್ಞಾನಿಗಳುನಾವೆಂ । ದೊರೆದುಶಿರೆಗಳೆ ಲ್ಲವನು ಮುಂದಿಡುತಪೊರೆಯೆನಲು ॥ ೬ ॥

ನಸುನಗುತಲಾಬಸವದೇವನು । ಬೆಸಸಿದನೆಲೈತಸ್ಕರಿರನಿವ್ । ರಸೆಯೊಳಿನ್ನೆಂದೀಪರಿಯ ಕೃತ್ಯಗಳನೆಸಗದಲೆ ॥ ಅಸಮನಯನಸ್ಮರಿ ಸುತನುದಿನ । ಮೆಸೆವಕಾಯಕವೂವುದಾದಡು । ಸಸಿನೆಯಿಂ ಕೈಕೊ ಳುವುದೆನುತಲಿಪರಸಿಕಳುಹಿದನು ॥ ೭ ॥

ಘನಮಹಿಮಚರಬಸವಯತಿಗುಣ । ಮಣಿಯೆನಿಸಿಭಕ್ತರನು ಪಾಲಿಸು । ತಣಿಯುರದೊಳಿರುತೊಂದುದಿನ ಕಾರ್ಯಾರ್ಥವಾಗೈದೆ ॥ ಘನಮಿನುಪ ಯಾಳ್ವಾರಗ್ರಾಮಕೆ । ಬಿನದಿಸುತಗಮಿಸುತ್ತಿಸದ್ಗುಣ । ಖಣಿಶಿವಪ್ಪನಗೃಹದಿವಾಸಿಸುತೆಸೆವಸಮಯದೊಳು ॥ ೮ ॥

ಹರಿದುಬಿದ್ದಿಹಗೋಣಿತಟ್ಟನು । ಭರದಿತೆಗೆದುಕೊಳುತ್ತಲದ ನುಂ । ಹರುಷದಿಂದೊಲಿದಂಗಿಯನು ಗೈದದನುತೊಟ್ಟುಕೊಳೆ ॥ ವರ ಶಿವಪ್ಪನು ಗ್ರಾಮದೊಳಗಿಹ । ಪರಮಭಕ್ತರುನೋಡಿವಿಸ್ಮಯ । ವಿರದೆಪೊಂದುತಿದೇನು ಚರವರೀಗಳಿಂತಪ್ಪ ॥ ೯ ॥

ಉರುವಿಕಾರದತಟ್ಟನಂಗಿಯ । ನುರುಹರುಷದಿಂ ತೊಟ್ಟಿರುವಿರೆ ನೆ । ಚರವರನುನಸುನಕ್ಕು ಮೆರೆವೀತಿರೆಯೊಳಗೆಮುಂದೆ ॥ ನರರು ಬಟ್ಟೆಗಳನ್ನುಕೊಳುವುದೆ । ಕರಕಠಿಣವಾಗುವಕತದಿನಾ । ನರಿದುಮೀ ತೆರದಂಗಿಯನುಧರಿಸಿರುವೆನೆನಲಾಗ ॥ ೧೦ ॥

ವಿತತಭಕ್ತವೃಂದಮಹಿಮರ । ನುತವಚನಪುಸಿಯಾಗದೆಂದಿಗು । ಕ್ಷಿತಿಯೊಳಿದು ಸಿದ್ಧಾಂತವೆನುತರಿದುಸಿಕನಿರಲಾಗಿ ॥ ಯತಿಗಳೊರೆದೊಲು ಕೆಲವುದಿನದೊಳೊ । ಮಿತಿಯೆಮೀರಿದ ಬೆಲೆಯದೇಶ । ಲ್ಕತಿಶಯದಿಪೊಗಳಿದರುಯತಿಯಭವಿಷ್ಯಸೂಚನೆಯ ॥ ೧೧ ॥

ಕರಮೆಸೆವಕಾಕಜಿಗಿಯೆಂಬುವ । ಪುರದದಾರಿಯೊಳೊಂದುಗುಂಡದು । ನಿರುತಜನತಿರುಗಾಡುತಿರುತಿಹಸಮಯದೊಳುಕಾಲ್ಗೆ ॥ ಭರದಿತಾಕುತಲಿರುತಿರಲ್ಕದ । ನುರುಸಹಾಸದಿದಾರಿಪಕ್ಕಕೆ । ಸರಿಸಬೇಕೆನುತಾಪುರದ ಜನರೆಲ್ಲಬಹುದಿನದಿಂ ॥ ೧೨ ॥

ಪರಿಪರಿಯಯತ್ನವನುಗೈದಡು । ನೆರೆಮೆರೆವಶತಜೋಡುಯತ್ತುಗ । ಳಿರದೆಕಟ್ಟೆಳಸಿದಡು ನಸುಚಲಿಸದಲೆಬಂಧುರದಿ ॥ ಇರುವುದಂಕಂಡಖಿಲಜನಗಳು । ನೆರೆನಿರಾಶಾಮಯರುಮಾಗಿಸು । ಚರವರರಸನ್ನಿಧಿಗೆ ಗಮಿಸಿದರಿರದೆಬಿನ್ನೈಸೆ ॥ ೧೩ ॥

ಸಸಿನೆಯಿಂದಾಗಮಿಸಿಯತಿಗಳು । ಮಿಸುಪಗುಂಡನುಮೂರುಜನರಿಂ । ದೊಸೆದುಪಿಡಿಸುತಬಸವಬಸವಾ ಎನುತಲೆತ್ತಿರೆನೆ ॥ ಬಸವಎನುತಂದೆತ್ತಿಯಾಕ್ಷಣ । ಮೆಸೆವದಾರಿಯಪಕ್ಕಕಿಡಲವ । ರಸಮಯೋಗಿಯಮಹಿಮವನುಕೊಂಡಾಡಿಜನನಲಿದರ್ ॥ ೧೪ ॥

ನೆರೆಮಿರುಪಯಾಳ್ವಾರಗ್ರಾಮದೆ । ಚರವರರುಮಿರುತಿರ್ಪಸಮಯದಿ । ಮೆರೆವಶಹಪುರಮಠಕೆ ಬಾಡದಗುರುಗಳಾಗಮಿಸಿ ॥ ಪರಮತರಲಿಂಗಾರ್ಚನೆಯಘನ । ತರದಿತೀರ್ಚಿಸಿಕೊಂಡುಕರುಣವ । ನಿರದೆದಯಪಾಲಿಸುವಸಮಯದಿಚರವರರಪತ್ನಿ ॥ ೧೫ ॥

ಹದಿಬದೆಸುಸೂಗಮ್ಮನವರನು । ವಿದಿತನಮ್ಮಯಮಠಕೆ ನೀವ್ಗಳು । ಮುದದಿಖಂಡುಗ ಗೋದಿದಾನವನೆಸಗಬೇಕೆನಲು ॥ ಸದಯನಿಧಿ ಸೂಗಮ್ಮನವರಂ । ದಧಿಕಯೋಚಿಸಿಪತಿಗಳಿಲ್ಲದೆ । ಮುದದಿವಚನವನಿತ್ತಡೇನೆನುವರೊಸುಗುರುವಚನ ॥ ೧೬ ॥

ನಡೆಸದಿರೆಕಡುದೋಷಬಪ್ಪುದು । ಪೊಡವಿಯೊಳಗೇನಾದಡಾಗಲಿ । ಮಿಡುಕುವುದುಮೊಳಿತಲ್ಲವೆನುತಂ ಪತಿಯನೆರೆಸ್ಮರಿಸಿ ॥ ಒಡನೆ ವಚನವನೀಯೆಗುರುಗಳು । ಕಡುಹರುಷದಿಂ ಗಮಿಸೆಬಳಿಕಂ । ಮೃಡನರೂಪಂ ಬರಲುಸತಿಸೂಗಮ್ಮಭೀತಿಯಲಿ ॥ ೧೭ ॥

ಪತಿಗೆವಂದಿಸಿನಡೆದವಿಷಯವ । ನತಿವಿನಯದಿಂ ಪೇಳೆಮರುಳೇ । ವಿತತಗುರುವಿಗೆಗೋದಿಯಿತ್ತಾನಂತರದಿಗುಡವ ॥ ಹಿತದಿನೀನೇಕೀಯಲಿಲ್ಲವು । ಕ್ಷಿತಿಯೊಳತಿತಪ್ಪೆಸಗಿರುವಿಯೆನು । ತತಿಸುಭಕ್ತಿಯೊಳಾಕ್ಷಣವೆಮಿಗೆಗೋದಿಬೆಲ್ಲವನು ॥ ೧೮ ॥

ಗಾಡಿಗಳಮೇಲೇರಿಕೊಳುತಂ । ಗಾಢಶ್ರದ್ಧದಿಗಮಿಸಿಗುರುವಿಗೆ । ನಾಡೆವಂದಿಸುತರ್ಪಿಸಲ್ಕಾಚರನುದಾರವನು ॥ ನೋಡಿವಿಸ್ಮಯಗೂಡಿನಲವಿಂ । ರೂಢಿಯೊಳಗಿಂತಪ್ಪುದಾರನ । ನಾಡಿನೊಳಗೆಲ್ಲೆಲ್ಲಿಕಾಣೆನೆನುತ್ತಪೊಗಳಿದರು ॥ ೧೯ ॥

ಒಂದುವತ್ಸರಚರವರನುಮುದ । ದಿಂದತಮ್ಮಯಮಠವಮತದೊಳು । ಸಂದರೇವಣಸಿದ್ಧನುರು ಪೌರಾಣವನುಮಿಡಿಸಿ ॥ ಚಂದದಿಂದಲಿಮೂರುಮಾಸಗ । ಳಿಂದುಧರನುರುದಯದಿನಡೆಸಲು । ಬಂದುದದುಸಂಪೂರ್ಣಮಾಗುತಲಾಸಮಯದೊಳಗೆ ॥ ೨೦ ॥

ಮೆರೆವಶಹಪುರದೊಳಗೆಮೇಣಾ । ಪುರದಸುತ್ತಿರುವೆಲ್ಲಗ್ರಾಮದೊ । ಳಿರದೆಭಯಕರ ಪ್ಲೇಗುಮಾರಿಕರೋಗಗಳುಹರಡಿ ॥ ನರರುಬಹುದುಃಖದೊಳುಮುಳುಗಿರ । ಲುರುಪುರಾಣಸಮಾಪ್ತಿಕಾರ್ಯವ । ನುರುವಿಭವದಿಂದೆಸಗಲಿಕೆ ಸಾಹಿತ್ಯಗಳನೆಲ್ಲ ॥ ೨೧ ॥

ಒದಗಿಸುವುದಕತಂಕವಾಗಲು । ಸದಯಚರವರವ್ಯಸನಪೊಂದು । ತ್ತಿದನುಸೂಗೂರೇಶನೇ ಪರಿಹರಿಸಬೇಕೆನುತೆ ॥ ಮುದದಿಧ್ಯಾನಿಸಿಮಲಗೆಸ್ವಪ್ನದಿ । ವಿದಿತಸೂಗೂರೇಶಬಂದುರು । ಪದುಳದಿಂದುಸುರಿದನುಕಾರ್ಯವನಡೆಸುಚಿಂತಿಸದೆ ॥ ೨೨ ॥

ಭರದಿಸಾಹಿತ್ಯಗಳನೆಲ್ಲವ । ನಿರದೆನಾನೇ ಒದಗಿಸುವೆನೆನೆ । ಚರವರನುಮಿದನರಿದುಪರಮ ಸಮಾಪ್ತಿಕಾರ್ಯವನು ॥ ಹರುಷದಿಂ ಕೈಕೊಳಲುವೀರನು । ಚರನವೇಷವತಳೆದುತವಕದಿ । ಮೆರೆಯು ತಿರ್ಪಾಯೂಸಗಿರಿಗಾಗಮಿಸಿ ಶಹಪುರದ ॥ ೨೩ ॥

ಚರವರನುಪೌರಾಣಕಾರ್ಯಕೆ । ಸರುವಸಾಹಿತ್ಯಗಳಕೂಡಿಸಿ । ತರುವುದಕೆಕಳುಪಿರುವ ನಿಮ್ಮಯಬಳಿಗೆನೀವೆಲ್ಲ ॥ ಭರದೊಳೀಯುವು ದೆನಲುಭಕ್ತರು । ಹರುಷದಿಂ ಮಿತಿಮೀರಿಸಂಗ್ರಹ । ವಿರದೆಸಗಿಕೊಡ ಲದನು ವರಶಹಪುರಕೆಕಳುಪುತ್ತೆ ॥ ೨೪ ॥

ವೀರನಂತರ್ಧಾನವಾಗಲು । ಮೀರಿದಾಸಾಹಿತ್ಯವೆಲ್ಲವು । ಸಾರ ಚರವರರಿಂಗೆ ಸ್ವಪ್ನದೊಳಾದಪರಿಯಂತೆ ॥ ಆರಯುದಿತಲುಪಲಿಕೆಜನ ರಿಗೆ । ಚಾರುಯತಿಯಿದನರುಪಲಾಕ್ಷಣ । ವೀರನೊಲಿದೀ ಯತಿಯ ಮಹಿಮವಪೊಗಳಿನಲಿನಲಿದರ್ ॥ ೨೫ ॥

ಧನವದೀನಚಯಕ್ಕೆಸುಂದರ । ತನಯರನುಬಂಜೆಯರಿಗರಿ ಯದ । ಜನಕೆಸದ್ಬೋಧವನು ದುಃಖಿಗಳಿಂಗೆಸೌಖ್ಯವನು ॥ ತನು ವಿನಾರೋಗ್ಯವನುರೋಗಿಗೆ । ಮನದಬಯಕೆಯಭಕ್ತಗಡಣಕೆ । ಘನದಯದೊಳಿತ್ತವರ ಸಲಹಿದಯೋಗಿಗೆಣೆಯುಂಟೆ ॥ ೨೬ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆ ಮೇಣ ಕ್ಷರಗಳಲಿಷಟ್ಟಕ್ಕರದಘನದಂತೆತಿರಿಕೆಯೊಳಗೆ ॥ ಮೆರೆಯುತಿಹುದೀವರ ಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳ್ವು ದತ್ತೊಂಬತ್ತನೆಯ ಸಂಧಿ ॥ ೨೭ ॥

ಸಂಧಿ ೧೯ಕ್ಕಂ ಪದ ೧೧೮೭ಕ್ಕಂ ಮಂಗಲಂ ಮಹಾ ಶ್ರೀ ಶ್ರೀ



॥ ಶ್ರೀ ನೀಲಕಂಠಾಯ ನಮಃ ॥

# ಇಪ್ಪತ್ತನೆಯ ಸಂಧಿ.



ಸೂಚನೆ:— ಚರವರನುತನ್ನಿರವಸದ್ಭ ।
ಕ್ತರಿಗೆಸೂಚಿಸಿನಾಗರೀಕತೆ ।
ಪರಮಸಮತೆಯನರುಹಿಲಿಂಗದಿಬೆರೆದನೋಲವಿಂದೆ ॥

ಶ್ರೀ ಮದವಿರಳಸಕಲನಿಷ್ಕಲ । ಸೋಮಸೋಮಕಲಾವತಂ
ಸಸು । ಸಾಮಗಾನಪ್ರೇಮನಿಜಮನು ಧಾಮಸದ್ಭಕ್ತಿ ॥ ಕಾಮಕಾಮಿ
ತಫಲದವಿಧುಸು । ತ್ರಾಮವಿಧಿನತದೇವಭವದೀ । ಯ್ಯಾಮಳಾಂಘ್ರಿ
ಸರೋಜಗಳಿಗಳಿಯೆನಿಸುಮನ್ನನಮಂ ॥ ೧ ॥

ಚರಬಸವಶಿವಯೋಗಿಸಂತತ । ಪಿರಿದುದಾಸೋಹವನುಗೈಯು
ತ । ಪರಮಲಿಂಗವಪೂಜಿಸುತಲಾ ಚರಣತೀರ್ಥವನು ॥ ಇರದೆಸೇವಿ
ಸಿನೀಡಿದೆಡೆಯನು । ಹರಮನುವಪಠಿಸುತ್ತಪಾವನ । ತರಮೆನಿಸಿಸವಿ
ಯುತ್ತ ಶರಣರಸರಸವಚನಗಳ ॥ ೨ ॥

ಸಾರವಸುತಿಳಿಯುತ್ತಸದ್ಗುಣ । ಪೂರಿತರಮಾಡುತ್ತಭಕ್ತರ ।
ಚಾರುಪೂಜಾರ್ಪಿತವದನುಭವ ನಿತ್ಯವೆಸಗುತ್ತ ॥ ಭೂರಿನಿರ್ಮಲ
ಮಾದಮನದಿಂ । ಮಾರಹರಭಕ್ತಿಯನುಲೋಕಕೆ । ಧೀರತನದಿಂ
ಬೋಧಿಸುತಜನರಿಷ್ಟವನ್ನಿರದೆ ॥ ೩ ॥

ತ್ವರಿತದಿಂ ನಡೆಸುತ್ತಮಹಿಮದಿ । ನರರನಚ್ಚರಿಗೊಳಿಸಿರಾಜಿ
ಸು । ತಿರುವಚರಬಸವಾರ್ಯನನು ಬಣ್ಣಿಸಲಿಕಳವಲ್ಲ ॥ ಹರಸಮಾನ
ನುಹರನರೂಪನು । ಹರನಪೂಜೆಯೊಳಮಿತಪ್ರೇಮನು । ಹರನಧ್ಯಾನ
ದಿಶರಣಸಂಗದಿನಿರುತಮಿರುವವನು ॥ ೪ ॥

ಸತತಭಾವದೊಳೊಪ್ಪಿಪಕ್ವವ । ನತಿಮುದದೊಳೆಸಗುತ್ತಿ ಜಂಗಮ । ವಿತತಿಗತುಳಮನೋಹರಾನ್ನಗಳಿಚ್ಛೆಯರಿದರಿದು ॥ ನುತಸಮಾಹಿತಭಕ್ತಿಯಿಂವಿ । ಶೃತದಿನೀಡುತ್ತಿರುವವನುವರ । ಕ್ಷಿತಿಯೊಳಗೆ ಸಂಸಾರಯೋಗಿಯುಮೆನಿಸಿಮೆರೆವವನು ॥ ೫ ॥

ಹಾನಿಲಾಭಂಗಳನುಜಗದೊಳು । ಮಾನಮೇಣಪಮಾನಗಳನುಂ । ಸಾನುರಾಗದಿಸುಖವದುಃಖವನೊಂದೆವಿಧವಾಗಿ ॥ ಜ್ಞಾನದಿಂ ತಿಳಿಯುತ್ತತತ್ವವ । ನೀನೆಲದಿಬೋಧಿಸುತಲವಿರತ । ಭಾನುಕಿರಣದ ತೆರದಿಬೆಳಗಿದನೀ ಧರಿತ್ರಿಯೊಳು ॥ ೬ ॥

ಆವತಾಣದಿನೋಡಿದಡುಮಹ । ದೇವನೆಂದೇನುತಿಸುತಿರ್ದರು । ತೀವಿದೋತ್ಸವದಿಂದೆ ಪದಪಂಕಜದೊಳೆರಗುವರು ॥ ಈ ವಿಧದ ಘನತೆಯೊಳುಶೋಭಿಪ । ಪಾವನದಬಸವಾರ್ಯನನಿಶಂ । ಭಾವಜಾರಿಯಭಜನೆಯಿಂದೊಪ್ಪಿರ್ದಮಠದೊಳಗೆ ॥ ೭ ॥

ರೂಢಿಯೊಳಗಿರುತಿರ್ಪಜನಗಳು । ನಾಡೆಮಹಿಮವಕೇಳಿಬಂದುರು । ಬೇಡೆತಮ್ಮಯಭೀಷ್ಟಗಳನತ್ಯಂತಹರುಷದೊಳು ॥ ನೋಡಿ ಘನಕೃಪೆಯಿಂದಲವರುರು । ಬೇಡಿದಿಷ್ಟಾರ್ಥಗಳತ್ವರಿತದಿ । ನೀಡಿ ತೋಷವಗೊಳಿಪ ಚರಬಸವಾರ್ಯಗೆಣೆಯುಂಟೆ ॥ ೮ ॥

ಕೆಲವರೀತನನೋಡುವರುಸಲೆ । ಕೆಲವರೀತನಪೊಗಳುವರುಮಿಗೆ । ಕೆಲವರೀತನಭಕ್ತಿಯಿಂ ಶಿವನೆಂದುನಮಿಸುವರು ॥ ಕೆಲವರೀತನನಮ್ಮಭೀಷ್ಟವ । ಸಲಿಸಲಿಕೆಬಂದಿರುವಘನಸದ । ಮಳದಪರಮೇಶ್ವರನೆಯೆಂದುರುತರದಿನುಡಿಯುವರು ॥ ೯ ॥

ಎರಡನೆಯಪರಶಿವನೊಯೆಂಬೊಲು । ಮೆರೆವಬಸವಾರ್ಯನಸುಕೀರ್ತಿಯು । ದಿರದೆವಿದ್ಯುದ್ವೇಗದಿಂ ಪಸರಿಸುತೆತಿರೆಯೊಳಗೆ ॥ ಪರಮಚಂದ್ರನಕಿರಣಗಳಿಗಿಂ । ಪಿರಿದುತೋಷವಗೊಳಿಸೆಜನರಿಂ । ಗರರೆ ಬಣ್ಣಿಸಲಳವೆಮಹಿಮನ ಧವಳಕೀರ್ತಿಯನು ॥ ೧೦ ॥

ಈತೆರದಿಬಹುಪರಿವಿರಾಜಿಪ । ಪೂತಚರಬಸವಾರ್ಯರೊಂದಿ
ನ। ನೋತುಹರನಂ ಸ್ಮರಿಸಿನಿದ್ರೆಯಮಾಡುತಿರುತಿರಲು ॥ ಭೂತನಾಥ
ನುಕನಸಿನೊಳುಮಿಗೆ। ಪ್ರೀತಿಯಿಂತವೆಬಂದುಪುತ್ರನೆ। ಭೂತಳದಿಯ
ನ್ನಾಜ್ಞೆಯಂ ಧರಿಸುತ್ತೆನೀಬಂದು ॥ ೧೧ ॥

ನಾಗಪತಿವರ್ಣಿಸಲಿಕಸದಳ। ಮಾಗುವೊಲುಸಚ್ಚರಿತದಿಂದಲಿ।
ಭೂಗಗನದೊಳುಮೇಲೆನಿಸುತಿಹ ಕೀರ್ತಿಯನುಪಡದೆ ॥ ಈಗನೀನೀ
ಜಡಶರೀರವ । ಬೇಗದಿಂ ತವೆತ್ಯಜಿಸಿಯನ್ನೊಳು । ರಾಗದಿಂದಲಿ
ಕೂಡಿನಿಜಸೌಖ್ಯವನುಪಡೆಯುವುದು ॥ ೧೨ ॥

ಎಂದುಪರಶಿವಮುದದಿನುಡಿಯು । ತ್ತಂದುಬಯಲಾಗಲ್ಕೆತ
ಕ್ಷಣ। ಬಿಂದುಧರರೂಪರಿಗೆ ಯಚ್ಚರವಾಗಲಾಗಿರದೆ ॥ ನಂದಿವಾಹ
ನನೊರೆದವಾಕ್ಯವ। ದೆಂದುಸಟೆಯನಲಿಕ್ಕೆಬಾರದು । ಚಂದದಿಂದೀ
ಜಡಶರೀರವತ್ಯಜಿಸಿಶಿವಸುಖವ ॥ ೧೩ ॥

ಪಡೆಯುವುದೆಲೇಸೆಂದುತಿಳಿಯುತ। ನೃಪಡನಭಕ್ತರನೆಲ್ಲಕರೆಸ
ಲು। ಬಿಡದೆಸರ್ವರುಬಂದು ಸಾಷ್ಟಾಂಗವನುಗೈಯ್ಯಾಗ ॥ ಕಡುಮು
ದದಿಕೈಮುಗಿದುನಿಂದಿರ। ಲೊಡನೆಕುಳಿತುಕೊಳಲ್ಕೆಮಹಿಮರು। ಸಡ
ಗರದೊಳಪ್ಪಣೆಯನೀಯುತ ಭಕ್ತರಂಕೂರ್ತು ॥ ೧೪ ॥

ಪರಮಭಕ್ತಶ್ರೇಷ್ಠರಿರನೀವ್ । ಧರಣಿಯೊಳಗತಿಪೂರ್ವದಿಂ
ಮಿಗೆ। ಮೆರೆವಪರತರವೀರಶೈವರೊಳಿರದೆಜನ್ಮವನು ॥ ಧರಿಸಿರುವಿರೀ
ಜೀವವದುತಾ। ನಿರದೆಯಗಣಿತಜೀವರಾಸಿಗ । ಳುರುತರದಗರ್ಭದೊ
ಳುಚಕ್ರದತೆರದಿತಿರುಗುತ್ತೆ ॥ ೧೫ ॥

ಅಂತ್ಯಕೀಘನವುತದಜನ್ಮಕೆ। ಸಂತಸದಿಬಂದಿಹುದುಪರಿಕಿಸ।
ಲಂತ್ಯಜನ್ಮವಿದೆಂದುಶೃತಿತತಿ ಸತತವೊರೆಯುವವು ॥ ಸಂತತದೊಳೀ
ಜನ್ಮದಲ್ಲಿಯೆ। ಕಂತುಹರನುರುಕೃಪೆಯೊಳಿರದೆಸ । ಮಂತುಮೋಕ್ಷ
ವುಪ್ರಾಪ್ತವಾಗುವದಿದುಸುಸಿದ್ಧಾಂತಂ ॥ ೧೬ ॥

ಚಾರುಶೈವಾಗಮಗಳವುವರ । ವೀರಶೈವಮತಕ್ಕೆಪೋಲುವ । ಸಾರಮತಮದುತ್ರಿಭುವನಂಗಳೊಳಿಲ್ಲಿಯಿಲ್ಲೆನುತೆ ॥ ಧಾರುಣಿಯೊಳತ್ತಿ ಧೀರತನದಿಂ । ಭೂರಿಸಿದ್ಧಾಂತವನುಗೊಳಿಸುತೆ । ಸಾರಿಸಾರಿಯೆಪೇಳುತಿರ್ಪವು ಸಕಲಜಗವರಿಯೆ ॥ ೧೭ ॥

ಆದಕತದಿಂ ನೀವುಘನತರ । ಮೋದದಿಂ ಗುರುಲಿಂಗಜಂಗಮ । ಪಾದಪೂಜಾನಿರತರಾಗಿ ಸುಶೀಲವಂಪಡೆದು ॥ ಆದಿಮೂರುತಿಯಾದಶಿವನೊಳು । ಸಾದರದಿಮನವಿರಿಸಿನಿರುತದೊ । ಳಾದಯಾನಿಧಿ ಕೃಪೆಯಪಡೆಯಿರಿ ಗುರುಹಿರಿಯರಲ್ಲಿ ॥ ೧೮ ॥

ಜ್ಞಾನದಿಂ ಭಕ್ತಿಯೊಳುನಡೆಯಿರಿ । ದಾನಧರ್ಮಪರೋಪಕಾರಗ । ಳೇನುಕಷ್ಟಗಳೊದಗಿದಡು ಬಿಡದಂತೆನಡೆಯಿಸಿರಿ ॥ ಸಾನುರಾಗದಿಸತತಕ್ಷಮೆಯನ । ನೂನವಾಗದತೆರದಿತಾಳಿರಿ । ಹೀನವಾಗಿರುತಿರ್ಪಕ್ರಿಯೆಗಳ ನೆಸಗದಿರಿನಿರುತಂ ॥ ೧೯ ॥

ಪರವಧೂಪರಧನವಮುಟ್ಟದೆ । ದುರಿತಕರಪರಹಿಂಸೆಗೈಯದೆ । ಪರರನಿಂದಾದಿಗಳದೂರೀಕರಿಸಲದರಿಂದ ॥ ಪುರಹರನುನಿಮಗೊಲಿದು ಹರುಷದಿ । ಪರಮಸುಖವೀಯುವನುನಿಜದಿಂ । ಧರೆಯೊಳಿಹಸರಸುಖಗಳಿಗೆ ಸದ್ವರ್ತನೆಯೆಮುಖ್ಯಂ ॥ ೨೦ ॥

ಮುಂದೆಯೀಕಲಿಕಾಲಮಹಿಮದಿ । ಮುಂದಿಬಹುವಿಧಪಾಪಕೃತ್ಯದೆ । ಪೊಂದಿಕಾಲವಕಳೆವರೀ ಪಾಪಾತಿಶಯದಿಂದೆ ॥ ಸಂದಮಳೆಬೆಳೆಯಿಲ್ಲದನಿಶಂ । ಬಂದುದುರ್ಭಿಕ್ಷವದುಬಾಧಿಸಿ । ಬೆಂದುಪೋಗುವುದಲ್ಲದೆಯು ಮೇಣೀಧರಿತ್ರಿಯೊಳು ॥ ೨೧ ॥

ಪ್ಲೇಗುಮಾರಿಕರೋಗಗಳುಬಹು । ವೇಗದಿಂ ಪ್ರಸರಿಸುತಪ್ರಜೆಗಳ । ಸಾಗುಗೊಳಿಸುವನಿರದೆ ಯಮಪುರಿಗಾದರದಿಸತತಂ ॥ ಭೋಗಕಾಶಿಸಿ ದೇಹವನುಮನು । ರಾಗದಿಂ ವಿಕ್ರಯವಮಾಡುವ । ಸೋಗೆಗಂಗಳೆಯರ ಪ್ರಬಲ್ಯವುಪೆರ್ಚುವುದುಭರದಿಂ ॥ ೨೨ ॥

ವಿತತಪಿತಸುತರೊಳಗೆಕಲಹವ । ದತಿಶಯದಿಪುಟ್ಟುವುದುಪತ್ನಿ ಯು । ಪತಿಗೆಮೋಸಕೃತ್ಯಗಳನೆಸಗುವಳು ಧೃತಿಯಿಂದೆ ॥ ಸತತಪ್ರತಿ ಗ್ರಾಮಮಂಗಳೊಳುದು । ರ್ಮತಿಯುತರಕಲಹಂಗಳಿಂದಿರ । ದತುಲ ತರಪಂಗಡಗಳುಂಟಾಗುವವುದಿನದಿನಕೆ ॥ ೨೩ ॥

ಪರಮಸತ್ಕಾರ್ಯಂಗಳಿಗೆಘನ । ತರದವಿಘ್ನಗಳೊಡ್ಡಿಕೆಡಿಸುವ । ದುರುಳರೇಬಹುಪ್ರಬಲರಾಗುತ ಪೋಗುವರುತಿರೆಯೊಳ್ ॥ ಗುರುಹಿರಿ ಯರುಗಳಿರವನರಿಯದೆ । ಕಿರಿಯರೇ ಮನೆಮನೆಗೆ ನೋಡಲು । ಹಿರಿ ಯರಾಗುತ ಮೆರೆಯುವರುಬಹು ಸಡಗರದಿಬಿಡದೆ ॥ ೨೪ ॥

ಪರರನಿಂದೆಯುಪರಂಹಿಂಸೆಯು । ಪರರಧನದಪಹರಣಪರ ಸ್ತ್ರೀ । ಯರಸವೂಗವುವಾತ್ಮಸ್ತುತಿ ಘನಮೋಸಚೋರತನ ॥ ದುರಿತ ಕರವಹಲಂಚವಂಚನೆ । ಪಿರಿದುಶಿಶುಗೋ ಭ್ರೂಣಹತ್ಯಗ । ಳುರುತ ರದಿಪೆರ್ಚುತ್ತ ತಲೆದೋರುವುದು ನಾಸ್ತಿಕತೆ ॥ ೨೫ ॥

ಯಂತ್ರಮಂತ್ರಾದಿಗಳಕಳೆಗಳು । ಕಾಂತಿಮಯಗುರುದೈವಕಳೆ ಗಳ । ವಂತ್ಯವಾಗುವಸಮಯ ಬಂದಿಹುದೀಗಳದರಿಂದಂ ॥ ಭ್ರಾಂತಿ ಯಿಂ ಕಲಿಪುರುಷನಸ್ಸ್ತು । ತಂತ್ರ್ಯದೊಳು ಬೀಳಧಲೆನೀವುನಿ । ತಾಂತ ಜಾಣ್ಮೆಯೊಳ್ ಜಾಗರೂಕರದಾಗಿವರ್ತಿಸುತೆ ॥ ೨೬ ॥

ಪರರನಿಂದಿಸಿಜರಿದುತನ್ನನು । ಹಿರಿದುಹೊಗಳಲುಹಿಗ್ಗಿಗುರುಹಿ ರಿ । ಯರನುದೂಷಿಸಿಕುಲಛಲಂಗಳಗಾಢಗರ್ವದಲಿ ॥ ಅರಿಗಳಾರರ ಬಲೆಗೆಸಿಲ್ಕಿಹ । ಪರಮಪಾತಕಿಯಾದಶಿಶ್ನೋ । ದರಪರಾಯಣನೊಡ ನೆಸಹವಾಸವನು ಗೈಯದೊಲು ॥ ೨೭ ॥

ನಿಮ್ಮಪುತ್ರರುಗಳಿಗೆನಿರುತದೊ । ಳೊಮ್ಮನದಿಸನ್ಮಾರ್ಗಬೋಧಿ ಸಿ । ಸಮ್ಮುದವಪಡೆವಂತೆ ಗೈಯುತೆ ಪರಮಗುರುವರನ ॥ ಬೊಮ್ಮ ಗಿಂ ಮಿಗಿಲೆಂದುತಿಳಿಯುತೆ । ನೆಮ್ಮಿರವನಸುವಾಕ್ಯಗಳನುಂ । ನೆಮ್ಮಿ ದವರಿಗೆಸಾಂಬನೊಲಿಯುತ ಲಿಂಬುಕೊಡುತಿಹನು ॥ ೨೮ ॥

ಕೆಲವರೀಕಲಿಕಾಲಚಕ್ರದಿ । ಕುಲದಧರ್ಮವನೆಲ್ಲತ್ಯಜಿಸುತ। ಹಲವುಪರಿಯಿಂದೆಲ್ಲಧರ್ಮವ ಹಾಳುಮಾಡುತಲಿ ॥ ಹಲವುಚಟಗಳ ನೆಲ್ಲಕಲಿಯುತ । ಸಲಹಿದಾತಾಯಿಯನುಮರೆಯುತ । ನಿಲದೆತಮ್ಮ ಯಮನಕೆಬಂದೊಲು ಚರಿಸುತಿರುತಿಹರು ॥ ೨೯ ॥

ಸರಸಕನ್ನಡಭಾಷೆಮರೆತರು । ಪರರಭಾಷೆಗಳನ್ನುನುಡಿವರು । ಅರಿಕೆಯಮ್ಮಯನಾಡನುಡಿಗಳನೆಲ್ಲಮರೆತಿಹರು ॥ ಪರಮಖಾದಿಯ ವಸ್ತ್ರಜರಿಯುತ । ಲಕೆರೆಮೋಹದವಸ್ತ್ರಧರಿಸುತ । ಕರದಿವಾಚನು ಕಟ್ಟಿ ಹ್ಯಾಂಡಕರ್ಚೀಫಬೀಸುವರು ॥ ೩೦ ॥

ಸಾಲೆಯೋದುಗರೆಲ್ಲರೀಗಳೆ । ಹಾಲುಕುಡಿಯುವುದನ್ನೆತ್ಯಜಿಸುತ । ಹಾಲುಬೆರಸಿದಕೆಟ್ಟ ಚಹವನುಕುಡಿಯುತಿರುತಿಹರು ॥ ಹಾಳು ಮಾಡಿದರೆಲ್ಲದೇಹವ । ಹಾಳುಮಾಡಿದರೆಲ್ಲಹಣವಂ । ಹೇಳಿದವರಿಗೆ ಬುದ್ಧಿಯನೆ ತಾವ್‌ತಿರುಗಿಪೇಳುವರು ॥ ೩೧ ॥

ಕೆಟ್ಟಮದ್ಯವಪಾನಮಾಡುತ । ಚುಟ್ಟಸಿಗರೇಟುಗಳಸೇದುತ । ಕೆಟ್ಟರೀಚಟಗಳಲಿಬೀಳುತ ಹೇಡಿಯಾಗಿಹರು ॥ ಶ್ರೇಷ್ಠದೇಹವಿ ದೆಂದುತಿಳಿಯದೆ । ಕೆಟ್ಟಚಟದಲಿದೇಹಸುಡುತಲಿ । ಕಷ್ಟದಿಂದೇಹ ವನೆಸವೆಸುತಹಂದೆಯಾಗಿಹರು ॥ ೩೨ ॥

ಪರಮಸತ್ಯತೆಯನ್ನುಮರೆತರು । ಅರಿಕೆಶಾಂತಿಯನೆಲ್ಲಬಿಟ್ಟರು। ಸರಸಮಾತುಗಳನ್ನುನುಡಿಯರು ವಿನಯತ್ಯಜಿಸಿಹರು ॥ ಪರಮನೀತಿ ಯನರಿದುಚರಿಸರು । ಪಿರಿದುವಿದ್ಯೆಯಸಾರವರಿಯರು । ದುರಿತಕರವ ಹಗರ್ವದಿಂ ಮಿಗೆಮೀರಿನಡೆಯುವರು ॥ ೩೩ ॥

ಹರನಸ್ಮರಣೆಯನೆಲ್ಲಮರೆತರು । ತರುಣಿಯರಸ್ಮರಣೆಯನು ಮಾಳ್ಪರು । ತರುಣಿಯರೆಹರನಾಗಿ ಯಿವರಿಗೆತೋರುತಿರುತಿಹರು ॥ ಹಿರಿಯರೆಂದರೆಜರಿಯುತಿರುವರು । ತರುಣಿಯೆಂದರೆಹಿಂಗ್ಗುತಿರುವರು । ಕರುಣವಿಲ್ಲದೆನಡೆವರೀಪರಿಕಲಿಯುಗದಜನರು ॥ ೩೪ ॥

ವೇದಶಾಸ್ತ್ರಗಳನ್ನುಹಳಿವರು । ವಾದಿಪರುಸಲೆಮುಗ್ಧ ಜನರೊಳು । ಸಾದರವದಿಲ್ಲದಲೆವೃದ್ಧಾಚಾರಮರೆತಿಹರು ॥ ಸಾಧುಸಜ್ಜನರನ್ನು ನಿಂದಿಸಿ । ಭೇದವಿಲ್ಲದೆನಡೆಯುತೆಲ್ಲರು । ಬೀದಿಬೀದಿಗಳಲ್ಲಿಮಿಗೆನಲಿದಾಡುತಿರುತಿಹರು ॥ ೩೫ ॥

ಹೆಣ್ಣುಮಕ್ಕಳದೇನುಪೇಳಲಿ । ಕಣ್ಣುಕಾಣಿಸಲೆಂದುಪ್ರೇಮದಿ । ಚೆನ್ನೆಯರುಕನ್ನಡಕಹಾಕುತಪುಸ್ತಕೋದುವರು ॥ ಬಣ್ಣಬಣ್ಣದಸೀರೆಯುಡುತಲಿ । ಚೆನ್ನೆಯರುಚಂದಾದಬ್ಲೋಜಸು । ನನ್ನಿಯಿಂತವೆತೊಡುತ ಬೀದಿಯಲೆಲ್ಲತಿರುಗುವರು ॥ ೩೬ ॥

ತರುಣರಂದದಿಕೋಟುಹಾಕುತ । ತರುಣಿಯರುಕಿರಿಬೂಟಮೆಟ್ಟುತ । ತರುಣಿಯರುತವೆತರುಣರಂದದಿ ದಿಟ್ಟರಾಗಿಹರು ॥ ಮಿರುಗುತಿರುತಿಹವಜ್ರದೋಲೆಗ । ಳಿರಡುಕಿವಿಯಲಿವಲೆಯುತಿರುವವು । ತರುಣಿಯರುಸಿರಿವಟ್ಟಹಾಸದಿ ಕಾಲಕಳೆಯುವರು ॥ ೩೭ ॥

ತರುಣಿತರುಣರುಭೇದವಿಲ್ಲದೆ । ಕರದಿಕರವಂ ಜೋಡಿಸುತ್ತಲಿ । ಸರಸಗೈಯುತನಾಟಕವನೋಡಲ್ಕೆ ಪೋಗುವರು ॥ ಪರಮಪಾತಿವ್ರತ್ಯಧರ್ಮವು । ಪರಮಪಾವನಪತ್ನಿಧರ್ಮವು । ಅರೆರೆಯಡಗುತಕಲಿಯಕಾಲದಿಮಾಯವಾಗಿಹವು ॥ ೩೮ ॥

ಕ್ಷಿತಿಯೊಳೀವಿಧಮಾದಕಡುದು । ಶ್ಚರಿತದಿಂ ನೆರೆನಡೆಯುವುದೆಬಹು । ವಿತತನಾಗರಿಕತೆಯಚಿನ್ಹವದೆಂದು ಕಥಿಸುತ್ತೆ ॥ ಸತತಮನಬಂದಂತೆಚರಿಸುವ । ಮತಿವಿಹೀನರನಡತೆಗಳಿಗಿರ । ದತಿಶಯದಧಿಕಾರಧಿಃಕಾರವನಿಯೊಳುಸತತಂ ॥ ೩೯ ॥

ನಾಗರೀಕತೆಯೆಂಬಶಬ್ದಕೆ । ಯೋಗಸಂಕುಚಿತಾರ್ಥಕಲ್ಪಿಸಿ । ಭೋಗಪುರುಷರುಮನಕೆಬಂದೊಲು ನಡೆಯುವುದುಹೇಯಂ ॥ ನಾಗರೀಕತೆಯರ್ಥವದುಸಲ್ಗೆ । ಸಾಗರದಪರಿಘನವಿಶಾಲವ । ದಾಗಿರುವಕತದಿಂದೆವಿವರದೊಳೊರೆವೆನಾಲಿಪುದು ॥ ೪೦ ॥

ನಾಗರೀಕತೆಯೆನುವವರಪದ । ಕಾಗಮುಜ್ಞರುತಮ್ಮಕ್ಷೇಸತರ ।
ತ್ಯಾಗಬುದ್ಧಿಯಬಲದಿಥರ್ಮವದೆಂದು ಕಥಿಸಿರ್ಪರ್ ॥ ಈಗಳಿಲ್ಲಿಸು
ಧರ್ಮವೆನೆಯದು । ರಾಗದಿಂದೀಭುವಿಯಜನಗಳು । ಬೇಗವಾಗಿ
ಯೆತಮ್ಮ ತಮ್ಮಯಮನಕೆಬಂದಂತೆ ॥ ೪೧ ॥

ಸೊಗಸಿನಿಂ ಪರಿಪರಿಯತೆರದಿಂ । ಮಿಗಿಲೆನಿಪಮತಗಳನುದೃಢ
ದಿಂ । ಜಗದಿಕಲ್ಪಿಸಿಕೊಂಡಿರುವ ಮತಧರ್ಮಗಳವಲ್ಲಂ ॥ ಜಗದ
ಮಾನವಧರ್ಮವದುಮೀ । ಜಗದೊಳಾವನುವರವಿವೇಕದಿ । ಪೊಗು
ಮಿಗೆಯಬುದ್ಧಿಯೊಳು ಮಾನವಧರ್ಮದೋಲ್ ನಡೆದು ॥ ೪೨ ॥

ಪರಮಮನುಜತ್ವವನುದೊರೆಕಿಸಿ । ಮೆರೆಯುತಿರುತಿಹನವನೆ
ಲೋಕದಿ । ಪರಮನಾಗರಿಕತೆಯ ಪುರುಷನುಮೆಂದುಪೇಳುವುದು ॥
ಧರೆಯೊಳೀತೆರದಧಿಕಮಾನವ । ಪರಿಕರದಿಕೂಡಿರ್ದರಾಜಿಪ । ವರ
ಸಮಾಜವೆ ನಾಗರೀಕಸಮಾಜವದುಮತ್ತಂ ॥ ೪೩ ॥

ಕ್ಷಿತಿಯೊಳೀವಿಧದಧಿಕನಾಗರಿ । ಕತೆಯವಿಪುಲಸಮಾಜನಿಕರ
ದಿ । ಸತತಭರಿತವದಾದರಾಷ್ಟ್ರವೆ ನಾಗರಿಕರಾಷ್ಟ್ರಂ ॥ ವಿತತಧರ್ಮ
ವದಿರದನಾಗರಿ । ಕತೆಯೆಕಾಡುಸ್ಥಿತಿಯು ಮೆನಿಪುದು । ಮತಿವಡೆದು
ಧೃತಿಯಿಂದಕಾಡು ಸ್ಥಿತಿಗಳೆಲ್ಲವನು ॥ ೪೪ ॥

ಪೊಡವಿಯಿಂ ಭರದಿಂದಪೋಡಿಸಿ । ಸಡಗರದಿಪರಮೋಚ್ಚನಡ
ತೆಗ । ಳೊಡನೆಕೈಕೊಂಡದರಪರಿ ನಡೆಯುತ್ತ ಸಂತತದಿ ॥ ಕಡು
ಸುಸಂಸ್ಕೃತನಾಗಿಭರದಿಂ । ಬಿಡದೆನಾಗರಿಕತೆಯಶಿಖರಕೆ । ದೃಢದಿ
ಮುಟ್ಟಿದೇಮಹತ್ವದ ನಾಗರೀಕತೆಯು ॥ ೪೫ ॥

ಕೆಲರುದ್ರವ್ಯವಸಂಗ್ರಹಿಸುವುದು । ಲಲಿತವಿಜ್ಞಾನದೊಳುತುದಿ
ಮೆ । ಟ್ಟಿಲನುಮುಟ್ಟುವುದಪರಿಮಿತ ಸೌಕರ್ಯಪೊಂದುವದು ॥ ವಿಳಸಿ
ತಾಲಂಕಾರದಿಂ ಮಿಗೆ । ಬೆಳಗುತಂ ಸಡಗರದೊಳಿರ್ಪುದು । ತೊಳಪ
ನಾಗರಿಕತೆಯ ಚಿನ್ಹವದೆಂದುಪೇಳುವರು ॥ ೪೬ ॥

ವಸುಧೆಯೊಳುಧನಪತಿಗೆ ಮಿಗಿಲಾ। ಗೆಸೆವದ್ರವ್ಯವನಾರ್ಜಿಸಿದೊಡಂ । ಮಿಸುಪಬ್ರಹ್ಮನ ಸೃಷ್ಟಿಗುರುಪ್ರತಿ ಸೃಷ್ಟಿಸೃಷ್ಟಿಸುವ ॥ ಅಸಮುತರವೈಜ್ಞಾನದೊಳುಘನ । ಯಶವನುರು ಪಡೆದಿರ್ದೊಡಂಸಲೆ । ಪೆಸರುವಡೆದಿಂದ್ರನೊಲು ಸೌಕರ್ಯಗಳತತಿಯಿಂದೆ ॥ ೪೭ ॥

ನಿರುತಮೆರೆಯುತಲಿರ್ದೊಡಂ ಘನ। ತರದನಾಗರಿಕತೆಯದಲ್ಲವು। ಪರರತನ್ನೊಲುಬಗೆದು ತನ್ನಯಸುಖವನಿತರರಿಗೆ ॥ ಪಿರಿದುಹರುಷದಿಹಂಚಿಯವರಿಗೆ। ಪರಮಹಿತವನುಸಾಧಿಸುವವರ । ಒರಿಯಗುಣವೇ ನಾಗರೀ ಕತೆಪೂರ್ಣಲಕ್ಷಣವು ॥ ೪೮ ॥

ತನ್ನೊಲೆಲ್ಲರಿಗಾಶಿತೋಷಗ । ಉನ್ನತದಮರ್ಯಾದೆತೃಪ್ತಿಗ। ಳಿನ್ನುವಾಜೀವನದಸುಖಗಳು ನ್ಯಾಯದಿಂದಿರದೆ ॥ ನನ್ನಿಯಿಂ ಸಲ್ಲುವವುಯೆಸುವ। ತ್ಯುನ್ನತದತಿಳಿವೇ ಧರಿತ್ರಿಯೊ । ಳನ್ನುವರುಸಂಸ್ಕೃತಿಯಸಾರವದೆಂದುಬಲ್ಲವರು ॥ ೪೯ ॥

ಧರೆಯೊಳಗೆಪರಿಕಿಸಲಹಿಂಸೆಯೆ। ಪರಮಧರ್ಮವದೆಂದುಪೇಳುವ। ವರಶೃತಿಗಳುಕ್ತಿಯೊಲು ಪರರನುನೋಯಿಸದೆಮತ್ತಂ ॥ ಪರರಜೀವನಕೆಡರುತಾರದೆ। ಸರುವರಿಗುತಿರೆಯೊಳಗೆಬದುಕುವ । ಪರಮಸುಖವನುಪಡುವ ಬಾಧ್ಯತೆಯಿರ್ಪುದೆಂದೆನುತೆ ॥ ೫೦ ॥

ನೆರೆತಿಳಿದುಹೊಣೆಗಾರಿಕೆಯನುಂ । ಹರುಷದಿಂ ಪೊತ್ತಿರುವಸಜ್ಜನ। ಪುರುಷನೇ ಸಂಸ್ಕೃತಿಯ ಬಲದಿಂ ನಾಗರಿಕನೆನಿಪಂ ॥ ಪಿರಿದುಸ್ವಾರ್ಥದಿದುರುಳತನದೊಳು। ಪರಿಪರಿಯದುಷ್ಕಾರ್ಯವೆಸಗುತ। ತಿರುಗುತಿಹಕಡುಧೂರ್ತನವ ಪಶುವರ್ಗದೊಳ್ಗಣ್ಯಂ ॥ ೫೧ ॥

ಒಂದುರಾಷ್ಟ್ರವನಾವುಭುವಿಯೊಳು । ಚಂದದಿಂ ನಾಗರಿಕರಾಷ್ಟ್ರವ। ದೆಂದುಪೇಳಲಿಕದರ ಮಿಗೆವುಪ್ಪನ್ನಮೇಣೆಸೆವ ॥ ಬಂಧುರದವಿಧವಿಧದಯಂತ್ರಗ। ಳಂದವಾಗಿಹನಗರತತಿಗಳು। ಸಂದಘನವಿಜ್ಞಾನದಾಧಿಕ್ಯತೆಯೆಮೊದಲಾದ ॥ ೫೨ ॥

ವಿಷಯುಗಳುಕಾರಣಮವಲ್ಲವು । ಮಿಸುಪಸತ್ಯವಹಿಂಸೆಯಿಂ
ದಲಿ । ಸಸಿನೆಯಿಂ ಬದುಕನ್ನುನೀತಿಯಹೊಲದೊಳಗೆಬಿತ್ತಿ ॥ ಅಸಮ
ನ್ಯಾಯದಬೆಳೆಯಕೊಯ್ಯುತೆ, ವೊಸೆದು ಸರ್ವರ ಹಿತವಬಯಸುತ।
ಜಸವಪಡೆಯುವರಾಷ್ಟ್ರವೇನಾಗರಿಕರಾಷ್ಟ್ರವದು ॥ ೫೩ ॥

ತಿರೆಯೊಳಗೆಕಡುಹೇಯಹಿಂಸೆಯು । ಪಿರಿದನಾಗರಿಕತೆಯ
ಸಂಸ್ಕೃತಿ । ಕರಮೆಸೆವಸಂಸ್ಕೃತಿಯನಿದರೊಳು ಕಾಣುವುದದೆಂತು ॥
ಪರಮಸತ್ಯವಹಿಂಸೆಯಿಲ್ಲದ । ದುರುಳರಾಜ್ಯವದಿರದೆಸಂತತ । ಪಿರಿ
ದನಾಗರಿಕತೆಯಕತದಿಂ ರಾಕ್ಷಸೀರಾಜ್ಯ ॥ ೫೪ ॥

ದೊಳಗೆಗಣ್ಯವದಾಗುವದುನಿಜ । ಮಿಳೆಯೊಳಗೆಸರ್ವರುಗಳಿ
ದನುರು । ತಿಳಿದುಸತ್ಯವಹಿಂಸೆಗಳು ಪರಕಾಷ್ಠದೆಶೆಗೇರಿ ॥ ಬೆಳಗುವೊ
ಲು ಘನತರಪ್ರಯತ್ನವ । ನಿಲದೆಗೈಯುವರಾಷ್ಟ್ರವೇಸಲೆ । ವಿಳಸಿ
ತದಘನರಾಮರಾಜ್ಯವದಾಗಿಶೋಭಿಪುದು ॥ ೫೫ ॥

ಕ್ಷಿತಿಯೊಳಗೆರಾಜಿಸುವನಾಗರಿ । ಕತೆಯಮೊದಲನೆಮೆಟ್ಟಲೆನೆ
ಯದು । ವಿತತಧರ್ಮವನಾಶ್ರಯಿಸುವುದು ಪರಮಸಾಹಸದಿ ॥ ಸತತ
ಧರ್ಮವಬಿಡದೆನಡೆಯುವ । ಚತುರನೇವರನಾಗರೀಕನು । ಮತಿಯು
ತರುತಿಳಿದಿದನುಮವಿರತಧರ್ಮವನುನಂಬಿ ॥ ೫೬ ॥

ಬರಿದೆಡಂಭಾಚಾರದರ್ಪಗ । ಳುರುದುರಿತದುಷ್ಟಟಗಳನುನೆರೆ ।
ಪರಿತ್ಯಜಿಸಿಸದ್ಗುಣಗಳಾಕರಮಾಗಿ ನೀತಿಯೊಳು ॥ ನಿರುತದಲಿನಡೆ
ಯುತ್ತವರಪುರ । ಹರನಕೃಪೆಗುರುಪಾತ್ರರಾಗೀ । ಧರಣಿಯೊಳುಜೀ
ವಿಪುದು ಮೇಣುಸುರುವೆನುಸಮತೆಯನುಂ ॥ ೫೭ ॥

ಧರಣಿಯೊಳುಹರಶರಣರೆಲ್ಲರು । ಪರಮಸತ್ಯವಹಿಂಸೆಮೇಣು
ರು । ತರವಿಮಳದಾಸ್ತೇಯ ತತ್ವತ್ರಯದಬಲದಿಂದೆ ॥ ನಿರುತಸರ್ವ
ರಸಮತೆಯಿಂಕಂ । ಡರರೆ ! ಜಗದೊಳಗಮರರಾಗುತೆ । ನೆರೆಮೆರೆವ
ರಾಸ್ತೇಯಮೆಂದಡೆ ಕದಿಯದಿರುತಿಹುದು ॥ ೫೮ ॥

ತನಗವಶ್ಯಕವಾದುದಕ್ಕಿಂ । ಮನುಜಮಿಗೆಯಾರ್ಜಿಪುದೆಸ್ತೇ
ಯವು । ಘನಮತಿಯೊಳಿಂತೆಸಗದಿಹುದಾಸ್ತೇಯಮೆನಿಸುವುದು ॥
ವಿನುತಮಾದೀತತ್ವದೊಳಗಾ । ಅನುಪಮಿತವಹಸಾಮ್ಯವಾದವ ।
ದನವರತಮಿರದಡಕನಾಗಿಪುದಖಿಲರರಿಯುವುದು ॥ ೫೯ ॥

ಕ್ಷಿತಿಯೊಳಗೆಬಂಡ್ವಾಲಶಾಹಿಯು । ವಿತತಮಾದೀತತ್ವವನು
ಘನ । ಹಿತದೊಳನುಸರಿಸುವುದರಿಂಬಹುತವಕದಿಂದಿರದೆ ॥ ಅತಿಶಯ
ದೊಳದುನಾಶಪೊಂದುತ । ಸತತಸರ್ವರು ಸಲೆಸಮತೆಯಿಂ । ದತುಳ
ಸುಖಶಾಂತಿಗಳನಾಂತತಿನಲಿವರೇನೆಂಬೆ ॥ ೬೦ ॥

ಶರಣರೀವಿಧಮಾದಕರ್ಮಕೆ । ಪರಮಕಾಯಕವೆಂದುಕರೆದ
ರು । ಧರೆಯೊಳಗೆವರಸಾಮ್ಯವಾದದ ತತ್ವಬೀಜವನು ॥ ಪಿರಿದುಹರು
ಷದಿಬಿತ್ತಿದವರಾ । ಹರಶರಣರರಿಯುವುದು ಪರಿಕಿಸೆ । ತಿರೆಯೊಳಿದು
ಪೊಸದಲ್ಲಪೂರ್ವದಿ ರಾಜಿಸುತಲಿರ್ದ ॥ ೬೧ ॥

ಪರಮತರದಾಯ್ದಕ್ಕಿಮಾರ । ಯ್ಯರುನುಲಿಯಚಂದಯ್ಯ
ಮೇಣಾ । ಗುರುಭಕುತಮೋಳಿಗೆಯ ಮಾರಯ್ಯಗಳೆಮೊದಲಾದ ॥
ಹರಶರಣರಾಚರಿಸಿಜಗದೊಳು । ಪಿರಿದುಬೆಳ್ಗಸವಾಂತುಸಂತತ । ನೆರೆ
ವಿರಾಜಿಸುತಿರಲು ಪರದೇಶೀಯರೀವಿಧದ ॥ ೬೨ ॥

ಅಸಮತತ್ವವಶೋಧಿಸಿದರೆನು । ತುಸುರುವುದು ಪುಸಿಯಿಹುದು
ಮೇಣೀ । ಮಿಸುಪತತ್ವವ ಪ್ರತಿನರನುಪಾಲಿಸಿದಡೀ ಮೆರೆವ ॥ ವಸು
ಧೆಸ್ವರ್ಗವದಾಗಿಪರಿಣಮಿ । ಸೆಸೆಯುವುದು ನಿಜಮಾದಕತದಿಂ । ಸಸಿ
ನೆಯಿಂದಿದನಾಚರಣೆಯೊಳು ತರುವುದಲ್ಲದಲೆ ॥ ೬೩ ॥

ತಿರೆಯೊಳಖಿಲಜನಾಂಗದೊಳಗಿರು । ತಿರುವಜಾತಿವಿಶಿಷ್ಟಮಾ
ದಾ । ಕಿರುಕುಳದಭಾವನೆಯ ತವಕದಿತರಿದುಹಾಕುತ್ತೆ ॥ ಮೆರೆಪಖಿಲ
ಮಾನವರುಮೆಲ್ಲರು । ಪರಮವಿಶ್ವಾತ್ಮನಸುಪುತ್ರರು । ಪರಿಕಿಸಲ್ಕಿದು
ನಿಜಮೆನುವ ಘನವಿಶ್ವಭಾವನೆಯಿಂ ॥ ೬೪ ॥

ತಳೆದುವಿಶ್ವಕುಟುಂಬಿಯಾಗುತೆ । ತೊಳಪನಮ್ಮಯ ಜೀವನದ ರಥ । ವಲಘುತರವಿಜ್ಞಾನಮಾತ್ಮಜ್ಞಾನ ಚಕ್ರಗಳಿಂ ॥ ಇಳೆಯೊಳಗೆಮುಂದರಿಸಿಜಸದಿಂ । ಬೆಳಗುವುದೆನಿಜನಾಗರೀಕತೆ । ಲಲಿತಸಮತಾವಾದದಸುಲಕ್ಷಣಗಳಿವುಸಿದ್ಧಂ ॥ ೬೫ ॥

ಎಂದುನಾನಾವಿಧದಿಭಕ್ತರಿ । ಗಂದುಬೋಧವನೆಸಗಿಪರಮಾ । ನಂದದಿಂ ಮತ್ತೊಂದುಮಾತನು ಪೇಳಲನುವಾದಂ ॥ ಸಂದಭಕ್ತರೆ ನಾನುನಿಮಗಿ । ನ್ನೊಂದುಪೇಳುವೆ ಕೇಳಿನೀವುಗ । ಳಿಂದುಬೆದರಲಿಬೇಡಿರೈ ಧೃತಿಯಿಂದಲಿರುತಿಹುದು ॥ ೬೬ ॥

ಪುರಹರನುಮುದದಿಂದೆತನ್ನಯ । ಪುರಿಗೆಯಾಗಮಿಸುವುದೆನುತ್ತಲಿ । ತ್ವರಿತದಿಂದಪ್ಪಣೆಯನಿತ್ತಿಹನಿರದೆಯನಗೀಗಳ್ ॥ ಧರಣಿಯೊಳಗಿನ್ನಿರುವುದೇನಿದೆ । ಹರನೊಡನೆಬೆರಸುವೆನು ಹರುಷದಿ । ಕರುಣದಿಂದಪ್ಪಣೆಯನೀವುದುಸರ್ವಭಕ್ತರುಗಳ್ ॥ ೬೭ ॥

ಎನಲುಕೂಡಿದಸಕಲಭಕ್ತರು । ವಿನಯದಿಂ ಕರಮುಗಿದುಗುರುವೇ । ಜನಕನೊಲುಯಮ್ಮಗಳನೀವಿದುವರೆಗೆಸಲಹುತ್ತ ॥ ಅನಘನೊಳು ಬೆರಸುವೆನು ತವಕದೊ । ಳೆನುತೆಪ್ರಕಟವ ಪಡಿಸಿದಿರಿನೀ । ವನುಪಮಿತರಾಗಿರ್ದತಮ್ಮಯ ನಗಲಿನಾವೀಗ ॥ ೬೮ ॥

ಎಂತುಜೀವಿಪುದೆನುತೆಮನದೊಳು । ಚಿಂತೆಯನುತಾಳುತ್ತದುಃಖದಿ । ಕಂತುಹರನಂಥ್ಯಾನಿಸುತ ಕಣ್ಣೀರಸುರಿಸಲ್ಕೆ ॥ ಶಾಂತಮಯರಾಗಿರ್ದಮಹಿಮರು । ಸಂತಸದಿಕರಮುಗಿದುಭಕ್ತರೆ । ಯಿಂತುದುಃಖಿಸ ಬೇಡಿರೈಇದರಿಂದ ಫಲವೇನು ॥ ೬೯ ॥

ದೃಷ್ಟವಾಗಿಹವಸ್ತುವದುತಾ । ನೆಷ್ಟುದಿನಬದುಕಿರ್ದೊಡೊಂದಿನ । ನಷ್ಟವಾಗಲೆಬೇಕುಜಡದೇಹಕ್ಕೆ ಶೋಕಿಪರೆ ॥ ಅಷ್ಟಮೂರುತಿಮೇಲೆ ಸಲೆಯು । ತ್ಕೃಷ್ಟಭಕ್ತಿಯನಿಡಿರಿನಿಮ್ಮಯ ॥ ಭೀಷ್ಟವನು ಸಲಿಸುವನು ಹರುಷದಿ ದೃಢದಿನಂಬುವದು ॥ ೭೦ ॥

ಒಂದುವೃಕ್ಷದಮೇಲೆಪಕ್ಷಿಗ । ಳೊಂದುನಿಮಿಷದಿಗಜಿಬಜಿನುತ
ಲಿ । ಹೊಂದಿಕೊಂಡವು ಮಗುಳಿಕಂಡೆಡೆ ಗೈದುವಂದದಲಿ ॥ ತಂದೆ
ತಾಯ್ಮೊದಲಾದಜನರುಗ । ಳೊಂದುನಿಮಿಷದಿತೋರಿ ತಮತಮ ।
ಬಂದಮಾರ್ಗವಪಿಡಿದು ತೆರಳುವರಿದಕೆ ಚಿಂತಿಸರೆ ॥ ೭೧ ॥

ನೀರುಗುಳ್ಳೆಗಳಂತೆಸಕಲವು । ತೋರಿಯಡಗುವದಾಗಿಯದ
ರೊಲು । ಧಾರುಣಿಯೊಳಿರ್ಪಖಿಲವಸ್ತುಗಳೆಲ್ಲ ತೀವ್ರದೊಳು ॥ ತೋರಿ
ಯಡಗುವುದದಕೆ ಚಿಂತಿಸಿ । ಘೋರದುಃಖವಪಡುವದುಚಿತವೆ ।
ಚಾರುತರದಿಂ ತೋರ್ಪಮಿಥ್ಯಾವಸ್ತುಗಳುದಿಟವೆ ॥ ೭೨ ॥

ಸುರನರೋರಗಯಕ್ಷಕಿನ್ನರ । ಗರುಡಗಂಧರ್ವಾದಿಸಿದ್ಧಾ । ಸುರ
ರುಪಸುರುದ್ರಾಶ್ವಿನಿಗಳಾದಿತ್ಯರಪ್ಸರರು ॥ ಹರಿಹರ ಬ್ರಹ್ಮಾದಿ ಲೋ
ಕಾಂ । ತರವನೈದಿದಸುಕೃತಿಗಳುಧರೆ । ಗಿರಿಗಳವುಮೊದಲಾಗಿ ನಾಶವ
ಪೊಂದುವವೆಸುತ್ತೆ ॥ ೭೩ ॥

ಪೇಳೆಭಕ್ತರುತಮ್ಮವಚನವ । ಶೂಲಿವಚನವದೆಂದುನಂಬಿಹೆ ।
ನಾಲಿಪುದುಮತ್ತೊಂದು ಬಿನ್ನೈಸುವೆವುಮುದದಿಂದೆ ॥ ಲೀಲೆಯಿಂ
ತವೆತಾವುಯೀಗಳ್ । ವ್ಯಾಲಭೂಷಣನೊಳಗೆಬೆರೆದಡು । ಕಾಲವರಿ
ಯುತ ವರಸಮಾಧಿಯೊಳಿರ್ದುನಮ್ಮಗಳ ॥ ೭೪ ॥

ಮನದಭಯ್ಕೆಯನಿರದೆಸಲಿಸುವು । ದೆನುತೆಬೇಡಲುಮಹಿಮ
ರಾಗಳ್ । ಮನದೊಳಗೆವಿಶ್ವಾಸಮಿರ್ದೊಡಲು ಫಲವದಾಗುವದು ॥
ಚಿನುಮಯನುನಿಮ್ಮಗಳಬಯ್ಕೆಯ । ನನುನಯದೊಳೀಡೇರಿಪನು
ನಿಜ । ವೆನುತಲಪ್ಪಣೆಯಿೀಯೆ ಭಕ್ತರುಹರುಷವಂ ತಾಳೆ ॥ ೭೫ ॥

ಭಕ್ತನಿಕರಾಭೀಷ್ಟದಾಯಕ । ಭಕ್ತವತ್ಸಲದೀನಬಾಂಧವ ।
ಭಕ್ತಜನಸಂತಾನವರ್ಧನ ಪುಣ್ಯಫಲದಾತಾ ॥ ಭಕ್ತಲಾಲಿತನಿತ್ಯಸ
ದ್ಭುಗರು । ಭಕ್ತಸೇವಿತಪಾದಪದ್ಮನಿ । ರಕ್ತನತಪದಸಲಹು ಚರಬಸ
ವಾರ್ಯ ಸಂತತದಿ ॥ ೭೬ ॥

ಎಂದುವಿಧವಿಧವನೂಗಿತಮ್ಮಯ । ಸಂದಕೋರಿಕೆಫಲಿಸಿತೆನುತ ಲಿ। ಮಂದಹಾಸದಿನುತಿಸಲಾಗಳ್ ಪರಮಯತಿವರನು ॥ ಇಂದುಮಾಹೇಶ್ವರರತೃಪ್ತಿಯ । ಚಂದದಿಂ ನಡೆಸಲ್ಕೆದ್ರವ್ಯ । ವೃಂದವೆಲ್ಲವಭರದಿಸಿದ್ಧವಪಡಿಸಬೇಕೆಂದು ॥ ೭೭ ॥

ಅರುಪಲಾಗಳ್ ಭಕ್ತನಿಕರವು। ತ್ವರಿತಪರವೋತ್ಸಾಹದೊಡನುರೆ । ಪರಿಪರಿಯ ಪಕ್ವಾನ್ನಗಳವಿರಚಿಸುತಲತಿಮುದದಿ ॥ ಚರಸಮೂಹವಕರೆಸಿ ಕೂಡಿಸಿ । ಹರುಷದಿಂದೆಡೆಮಾಡಲಾಗಳ್ । ಪರಮತೋಷದೊಳುಂಡು ದಣಿದುದುಚರನಿಕರವೆಲ್ಲ ॥ ೭೮ ॥

ಆಗಚರಬಸವಾರ್ಯ ಸ್ನಾನವ । ಬೇಗದಿಂ ತವೆಗೈಯ್ದುಮಡಿಯೊಳು । ರಾಗದಿಂ ಶಿವಪೂಜೆಗೃಹದೊಳು ಪೋಗಿಗದ್ದುಗೆಯೋಳ್॥ ನಾಗಭೂಷಣನನ್ನು ಸ್ಮರಿಸು। ತ್ತಾಗಮಂಡಿಸಿ ಪರಮಮೌನದಿ। ಶ್ರೀಗುರುವಿನಡಿಗಳನು ಭಜಿಸುತೆ ಪರಮಲಿಂಗಕ್ಕೆ ॥ ೭೯ ॥

ವಿರಚಿಸುತೆಸ್ನಾನವನುಭಸಿತವ । ಪರಮರುದ್ರಾಕ್ಷಿಗಳನಂಗಕೆ । ಧರಿಸಿಕೊಂಡಿರದಾಗ ಪ್ರಾಣಾಯಾಮನ್ಯಾಸವನು ॥ ಪಿರಿದುವಿಧ್ಯುಕ್ತದೊಳುಗೈಯುತೆ। ಹರುಷದಿಂ ಶ್ರೀ ಲಿಂಗದೇವಗೆ । ಪುರುಷಸೂಕ್ತಾದಿಗಳ ಮಂತ್ರದೊಳೆಸೆಯುತಂ ಜಲವ ॥ ೮೦ ॥

ಮಿಸುಪಗಂಧಾಕ್ಷತೆಗಳಿಂ ಮೇಣ್ । ಕುಸುಮಧೂಪಸುದೀಪವ್ರಜದಿಂ। ಶಶಿಧರನನರ್ಚಿಸುತ ಕರ್ಪೂರವರ್ತಿ ಪಾಡುತ್ತೆ ॥ ಅಸಮತೋಷವ ವಹಿಸುತಲಿಮೇ । ಣೆಸೆಯುತಿಹನಾಸಾಗ್ರನೋಟದಿ। ಪಶುಪತಿಯವಿಧವಿಧದಪರಿಯೊಳು ಸುತಿಸತೊಡಗಿದನು ॥ ೮೧ ॥

ಸರ್ವಜಗದಾಧಾರಮೂರ್ತಿಯೆ। ಸರ್ವಗತ ಸರ್ವಜ್ಞಶರ್ವನೆ। ಪೂರ್ವಿಯೊಳು ನಿನ್ನೆಸೆವಚರಣಗಳನ್ನು ನೆರೆನಂಬಿ ॥ ಸರ್ವದಾಭಜಿಪರ್ಗೆಕೂರ್ಮೆಯೊ। ಳ್ಸರ್ವಕಷ್ಟಗಳನ್ನುಹರಿಸುವ । ಪಾರ್ವತೀ ಪತೆಹರಹರಮಹಾದೇವ ಜಯಜಯತು ॥ ೮೨ ॥

ಈತೆರದಿಪುರಹರನಸ್ಮರಿಸುತ । ಪೂತನಿಶ್ಚಲಮನದೊಳೊಳಹೊ
ರ । ಗೋತುಶಿವಮಯನಾಗಿ ಸರ್ವಭ್ರಾಂತಿಯಂ ತೊರೆದು ॥ ಭೂತ
ಪತಿಯೊಳು ಬೆರೆದುಸಂತತ । ಸಾತಿಶಯಸುಖಶಾಂತಿಪಡೆಯಲಿ ॥
ಕಾತುರವ ಪಡುತಿರಲು ಭಕ್ತಸಮೂಹವೆಲ್ಲಾಗಳ್ ॥ ೮೩ ॥

ಕೆಲರುಭಜನೆಯಮಾಡುತಿರ್ದರು । ಕೆಲರುನಿಗಮವಪಠಿಸುತಿ
ರ್ದರು । ಕೆಲರು ರುದ್ರಾಧ್ಯಯನ ಹರುಷದೊಳೆಸಗುತಿರುತಿರ್ದರ್ ॥
ಕೆಲರುಶಿವಸಾಹಸ್ರನಾಮವ । ಸಲವಿನಿಂ ಪಠಿಸುತ್ತಲಿರ್ದರು । ಕೆಲ
ವರಾನಂದಾಶ್ರುಗಳ ಸುರಿಸುತ್ತಲಿರುತಿರ್ದರ್ ॥ ೮೪ ॥

ಸರುವಜನಗಳಮುಖದಿ ಶಿವಶಿವ । ಹರಹರ ಮಹಾದೇವ
ನೆಂಬುವ । ಪರಮಶಿವ ಘೋಷಣೆಯದಾಕಾಶವನು ವ್ಯಾಪಿಸಿತು ॥
ಚರಬಸವಯೋಗಿಗಳುಹರನನು । ಸ್ಮರಿಸುತಂ ನಿಜಭಕ್ತಿಯಿಂದಲಿ ।
ಪರಮ ಶಕಪದಿನೆಂಟುನೂರ್ಗಳವತ್ತುನಾಲ್ಕನೆಯ ॥ ೮೫ ॥

ವಿತತಫಾಲ್ಗುಣ ಕೃಷ್ಣಪಕ್ಷಸು । ತಿಥಿಯದಮವಾಸ್ಯೆಯೊಳು
ತಮ್ಮಂ । ಶಿತಿಗಳನತನುವಿನೊಲು ಪೂಜ್ಯತೆವಡೆದದೇಹವನು ॥
ಅತಿಶ್ವರಿತದಿಂದಾಗತ್ಯಜಿಪಿಸು । ಘೃತದೊಳಗೆಘೃತಬೆರೆದವೊಲುಮೇ ।
ಣತಿಶಯದಿ ಜ್ವಲಿಪಗ್ನಿಯೊಳು ಕರ್ಪೂರವುಬೆರೆದಂತೆ ॥ ೮೬ ॥

ಭೂರಿಗುಣಯುತಬಸವಯೋಗಿಗ । ಳಾರಮಾಕರಲಿಂಗದೊಳು
ಸುವಿ । ಚಾರದಿಂ ನೆರೆಬೆರೆದುಮೆರೆದರು ಶಿವನಸಭೆಯೊಳಗೆ ॥ ಚಾರು
ಸುರರುಘೆ ಯೆನಲುಪ್ರಮಥರ । ಪಾರತೆರದಿಂ ನುತಿಸೆಪರಿಪರಿ । ಸಾರ
ದುಂದುಭಿಮೊಳಗಿ ಸುರಕುಜಪುಷ್ಪಗಳುಸುರಿಯೆ ॥ ೮೭ ॥

ಪಶುಪತಿಯುಘನತೋಷದಿಂ ಮಿಗೆ । ಮಿಸುಪತನ್ನಯಚರಣ
ಕೆರಗಿದ । ಬಸವಯೋಗಿಗಳನ್ನು ಸಂತಸದಿಂದೆಮೈದಡವಿ ॥ ವಿಷಮ
ಸಂಸಾರದೊಳಗಿರ್ದುಂ । ವಸುಧೆಯೊಳು ನಸುಶಿಲ್ಕದಂದದಿ । ಜಸವ
ಪಡೆದೈ ಎನುತಪರಿಪರಿಶ್ಲಾಘಿಸಿದನರಿದು ॥ ೮೮ ॥

ಜಯಪರಾತ್ಪರಶಂಭುಶಂಕರ । ಜಯಮನೋಜಕೃತಾಂತ ಸಂಹರ । ಜಯಜನಾರ್ದನಬಂಧು ನಿಗಮಾತೀತನಗಚಾಪ ॥ ಜಯ ಮಹೇಶ್ವರನೀಲಕಂಧರ । ಜಯಸದಾಶಿವಸೋಮಶೇಖರ । ಜಯ ನಮೋ ಶ್ರೀ ಪಾವಕಾಂಬಕಶರ್ವಸರ್ವೇಶ ॥ ೮೯ ॥

ಪರಮತಾರಾಗಣದಮಧ್ಯದಿ। ಮೆರೆವಚಂದ್ರಮನಂತೆ ಮೋಕ್ಷ। ಕ್ಷರಗಳಲಿಷಟ್ಕಕ್ಕರದಘನದಂತೆತಿರೆಯೊಳಗೆ ॥ ಮೆರೆಯುತಿಹುದೀವರ ಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನಭಕ್ತರು ಕೇಳು ವುದು ಯಿಪ್ಪತ್ತನೆಯ ಸಂಧಿ ॥ ೯೦ ॥

ಪಾಶುಪತಧಾರಿಣಿ ನಿರತ್ಯಯೆ ತಮೋಪಹೆ ಪ್ರಭಾವತಿ ಚಿದೀಶರಸರೂಪಿಣಿ ಪ್ರಸಿದ್ಧೆ । ದಾಶರಥಿ ಚಿತ್ತಸರಸೀರುಹನಿವಾಸೆ ತರುಣೀಮಣಿ ಸಮಸ್ತಶಿವಭಕ್ತ ಸುಖ ದಾತೆ ॥ ದೇಶಿಕೆ ಜಿತೇಂದ್ರಿಯಮನೋಜ್ಞೆ ಶಿವಸಂತತಿವಿವರ್ಧನಿ ರಸಜ್ಞೆ ಶಿವದೀಕ್ಷಿತೆ ಸುವಿದ್ಯೆ । ಕೌಶಲೆ ಸುವಾಕ್ಪ್ರದೆ ರುಜಾಪಹೆ ನಿರಂತರ ಮೃಡಾಣಿ ಸಲಹೆನ್ನನೆಲೆ ಮಾತೆಮಹಾದೇವಿ ॥ ೯೧ ॥

ಸಂಧಿ ೨೦ ಕ್ಕಂ ಪದ ೧೨೭೮ ಕ್ಕಂ ಮಂಗಲಂ ಮಹಾ ಶ್ರೀ ಶ್ರೀ



॥ ಶ್ರೀ ಸರ್ವೇಶ್ವರಾಯ ನಮಃ ॥

# ಇಪ್ಪತ್ತೊಂದನೆಯ ಸಂಧಿ.



ಸೂಚನೆ:— ಭುವನನಿಭಚರಬಸವದೇವನು ।
ಶಿವನೊಳೈಕ್ಯವಪೊಂದಿಗೋಪಿಯೊ ।
ಳವಿರತಂ ಮಹಿಮೆಗಳತೋರುವನಿರದೆಜಗದೊಳಗೆ ॥

ಶ್ರೀಮದಾಶ್ರಿತಭಕ್ತಜನಸು । ಪ್ರೇಮಸುರಮುನಿವಂದಿತಾಂಘ್ರಿ ಮ । ಹಾಮಹಿಮಮಧುಮರ್ದನಪ್ರಿಯಮಾರಸಂಹಾರ ॥ ತಾಮರಸ ಸಖಕೋಟಿಸನ್ನಿಭ । ರೋಮಕೂಪ ನಿಮಗ್ನಭುವನ । ಸ್ತೋಮ ಶ್ರೀ ಸರ್ವೇಶ್ವರನ ಚರಣಗಳಭಜಿಸುವೆನು ॥ ೧ ॥

ಮೃಡನಸಮಚರಬಸವದೇವನ । ಜಡಶರೀರವುತೊಲಗಿದಡು ಮೀ । ಪೊಡವಿಯೊಳಗವರಮಳಕೀರ್ತಿಯ ಕಾಯವದುಸತತಂ ॥ ಸಡಗರದಿಮಿಗೆಮೆರೆಯುತಿರ್ಪುದು । ಬಿಡದೆಭಾವಿಸೆಭಕ್ತನಿಕರಕೆ । ಕಡುತರದಹಾನಿಯದುಮೊದಗಿದುದೊಂದೆ ವ್ಯಸನಕರಂ ॥ ೨ ॥

ಈಮಹಾತ್ಮದ ದುಃಖವಾರ್ತೆಯು । ಗ್ರಾಮಗ್ರಾಮಗಳಿಂಗೆಹರ ಡಲು । ಸೋಮಧರಭಕ್ತರುಗಳೆಲ್ಲರು ಪುಷ್ಪಫಲಗಳನು ॥ ಪ್ರೇಮದಿಂ ತವೆತೆಗೆದುಕೊಳುತಂ । ರಾಮಣೀಯಕವಾದವಾದ್ಯ । ಸ್ತೋಮಗಳ ಘೋರ್ಗರಿಸುತಾಗಮಿಸುತ್ತಲಿರುತಿರಲು ॥ ೩ ॥

ಬಂದಜನಗಳುಪುಷ್ಪಫಲಗಳ । ಚಂದದಿಂದರ್ಪಿಸುತಭಕುತಿ ಯೊ । ಳಿಂದುವಾಳಿಯು ಭಜನೆಕಡುಸಂಭ್ರಮದೊಳೆಸಗುತ್ತೆ ॥ಅಂದು ಪುಷ್ಪವಿಮಾನದೊಳುಘನ । ಸಂದಲಿಂಗಶರೀರವನುಮಿಗೆ । ಯಂದದಿಂ ಕುಳ್ಳಿರಿಸಿ ತಳಿರುಸುತೋರಣಗಳಿಂದ ॥ ೪ ॥

ಪಿರಿದಲಂಕೃತವಾಗಿರಾಜಿಪ । ಪುರದವೀಧಿಗಳಲ್ಲಿಯುರುತರ ।
ಮೆರೆವಲಿಂಗಶರೀರದೋತ್ಸವಪೊರಡಲಾಗಿರದೆ ॥ ಪರಮಮುತ್ತೈದೆ
ಯರುಮಿನುಗು । ತ್ತಿರುವಕರ್ಪೂರಾರತಿಗಳನು । ತ್ವರಿತದಿಂದಿರದೆತ್ತಿ
ಫಲಪುಷ್ಪಗಳನರ್ಪಿಸಿದರ್ ॥ ೫ ॥

ಕೆಲವರತಿಭಕ್ತಿಯೊಳುಕದಳೀ । ಫಲವಮೇಣ್ ಖರ್ಜೂರಫಲ
ಗಳ । ನಿಲದೆಮೆರೆವ ವಿಮಾನದಗ್ರದಿಹಾರಿಸುತಲಿರ್ದರ್ ॥ ತೊಳಪ
ತಮ್ಮಟಿಕಹಳೆಭೇರಿಗ । ಳಲಘುತರರೀತಿಯೊಳುಸಂಭ್ರಮ । ದೊಳಗೆ
ಭೋರ್ಗರೆಯುತ್ತಲಿರ್ದುದನೇನಬಣ್ಣಿಸಲಿ ॥ ೬ ॥

ಎಸೆವಭಜನೆಯಸಂಘದವರುರು । ಮಿಸುಪತಾಳಮೃದಂಗಗಳ
ನತಿ । ಸಸಿನೆಯಿಂಬಾರಿಸುತಕರ್ಣಾನಂದವಾಗುವವೊಲ್ ॥ ಅಸಮ
ನಯನನಭಜನೆಯನುಮನ । ಮೊಸೆದು ಮಾಡುತ್ತಿರಲು ಸರ್ವರು ।
ಪಶುಪತಿಯರೂಪರಿಗೆ ಕರಗಳಜೋಡಿಸುತ್ತಾಗಳ್ ॥ ೭ ॥

ಶಿರವಬಾಗಿಸಿಪಾರ್ವತೀಪತೆ । ಹರಹರಮಹಾದೇವನೆನುತಲಿ ।
ಹರುಷದಿಂ ಜಯಘೋಷವನು ಮಾಡುತ್ತಲಿರುತಿರ್ದರ್ ॥ ಪರಮ
ತರಶ್ರೀ ಶೀಲವಂತೇ। ಶ್ವರನದೇವಾಲಯದಬಳಿಯಲಿ। ತ್ವರಿತಸಿದ್ಧವ
ದಾದಪರಮಸಮಾಧಿತಾಣದೊಳು ॥ ೮ ॥

ಎಸೆಯುತಿರ್ಪೋತ್ಸವವು ತಲುಪುತೆ। ಸಸಿನೆಯಿಂದಂತ್ಯೇಷ್ಟಿಕ
ದವಿಧಿ । ನಸುಸಮಯದೊಳೆಪೂರ್ಣವಾಗಲು ಲಿಂಗದೇಹವನು ॥
ಅಸಮಭಕುತಿಯೊಳೊಸೆದುಪೂಜಿಸಿ । ಮಿಸುಪಫಲಕರ್ಪೂರಗಳನ ।
ರ್ಪಿಸುತೆ ಜಯಘೋಷವನು ಗೈಯ್ದಾಲಿಂಗದೇಹವನು ॥ ೯ ॥

ಪೊಳೆಯುತಿರ್ಪಸಮಾಧಿಯೊಳಗುರು । ಮಲಹರನಸ್ಮರಿಸುತ್ತ
ಸರ್ವರು । ಘಳಿಲನೇ ನಿಕ್ಷೇಪಿಸಿದರನುಪಮದಭಕ್ತಿಯೊಳು ॥ ಬಳಿಕ
ಭಕ್ತರು ದಾನಧರ್ಮಗ । ಳೊಲವಿನಿಂದೆಸಗುತ್ತತಮ್ಮಯ । ನಿಲಯ
ಗಳಿಗತಿತ್ವರಿತದಿಂದಲಿ ಪಯಣವೆಸಗಿದರು ॥ ೧೦ ॥

ಗೌರಿಪತಿಯಾಜ್ಞೆಯಲಿಹರುಷದಿ । ಚಾರುತರಭಕ್ತೌಘವನ್ನು। ದ್ಧಾರಮಾಡಲು ರಾಜಿಪೀಧರಣಿಯೊಳಗವತರಿಸಿ । ಸಾರಯುತ ಕಾರ್ಯಗಳನೆಸಗುತ । ಪಾರತೇಜೋನಿಧಿಯುಜ್ಞಾನದ । ಮೂರುತಿ ಯು ಸಂಸಾರಯೋಗಿಯೆನುತ್ತೆ ಜಸವಡೆದ ॥ ೧೧ ॥

ಬಸವದೇವನಕಳೆದುಕೊಂಡಿ । ರ್ಪಸಮುಭಕ್ತರುವಮೌನತಾಳ ದೆ । ಯಸೆವಗಣಸಂತರ್ಪಣೆಯಸೈದನೆಯದಿನದೊಳಗೆ ॥ ಸಸಿನೆಯಿಂ ದೆಸಗುತ್ತಲವರತಿ ।ಮಿಸುಪ ಪರಮುಸಮಾಧಿಯನು ಪೂ ।ಜಿಸಲಸದ್ಗು ಣದೋರ್ವಜಂಗಮುನನ್ನು ನೇಮಿಸಿದರ್ ॥ ೧೨ ॥

ಪ್ರತಿದಿನದಿಭಕ್ತರಸಮೂಹವ । ದತುಲಫಲಪುಷ್ಪಗಳನರ್ಪಿಸಿ। ಸತತಮನಸಿನಬಯ್ಕೆಯನು ನೆರವೇರಿಸುವುದೆಂದು ॥ ಅತಿಶಯದಹರು ಷದೊಳುಬೇಡುತೆ । ನುತಿಸಿನಮಿಸುತೆ ಬರುತಲಿರ್ಪರು । ಹಿತದಿಪರಿ ಕಿಸಿನೋಡೆ ವಿಶ್ವಾಸದೊಳುಫಲವಿಹುದು ॥ ೧೩ ॥

ಎನುವಶಾಸ್ತ್ರದವಾಕ್ಯದಂತೆಯೆ । ವಿನುತಚರಬಸವಾರ್ಯ ಸಂತತ । ಘನತೆತಾಳ್ದಸಮಾಧಿತಾಣದೊಳಿರ್ದು ಮುದದಿಂದ ॥ ಗಣಿ ಸಲಸದಳಮಾದಭಕ್ತರ । ಮನದೊಳಿರ್ಪಿಷ್ಟಗಳನೆಲ್ಲವ। ನನುನಯ ದಿನೆರವೇರಿಸುತಲಿರ್ಪಸಮುಲೋಚನನೋಲ್ ॥ ೧೪ ॥

ಪರಮುಭಕ್ತರೊಳಿರ್ಪಮುನಸಿನ । ಪಿರಿದುಬಯ್ಕೆಯುಪೂರ್ಣ ವಾಗ । ಲ್ಕುರುತರದಿರಾಜಿಪಸಮಾಧಿಗು ಕಟ್ಟಡವನಾಗಳ್ ॥ ಹರು ಷದಿಂ ಘನಭವ್ಯಮಾಗುವ। ತೆರದಿಕಟ್ಟಿಸಲೈದೆನಿರ್ಧರಿ । ಸಿರದೆಪ್ರಾ ರಂಭಿಸಿದರದರುರುರಚನೆಯೆಂಪೇಳ್ವೆ ॥ ೧೫ ॥

ಯಮಿಗಳಸುಮನವನ್ನುಸೆಳೆಯುವ । ವಿಮಲವಾಗಿರುತಿರ್ಪ ತಾಣದೊ । ಳಮಿತದ್ರವ್ಯವವೆಚ್ಚಗೊಳಿಸುತ ನೋಡಿದವರಿಂಗೆ ॥ ಭ್ರಮೆಗಳೆಲ್ಲವು ದೂರವಾಗುತೆ। ಸುಮತಿಶಾಂತಿಗಳೊದಗಿಮನದೊಳ್। ಪ್ರಮಥ ಶ್ರೀಗಳೊಳಮಿತಭಕ್ತಿಯು ಪುಟ್ಟುತಿರುವಂತೆ ॥ ೧೬ ॥

ಸಿರಿದುಸುಂದರವಾಗಿಸಂತತ । ಮುರುತರದಿಶೋಭಿಸುವತೆರ ದೊಳು । ತ್ವರಿತಸಿದ್ಧವದಾಗಲದರೊಳಗನಿಶಘನತರದಿ ॥ ಮೆರೆವ ನಂದಾದೀವಿಗೆಗಳವು। ವುರಿಯುತಿರಲುರುತರಪ್ರಕಾಶದಿ। ಹರುಷದಿಂ ಬಹುದೂರದಿಂ ವರಭಕ್ತರಾಗಮಿಸಿ ॥ ೧೭ ॥

ಎಸೆಯುತಿರ್ಪ ಸಮಾಧಿಗುರುತರ । ಸಸಿಸೆಯಿಂದಭಿಷೇಕಗೈ ಯ್ಯು । ತ್ತಸಮಭಕ್ತಿಯೊಳ್ಪ್ರಮಥಗಣಸಂತರ್ಪಣೆಯನೆಸಗಿ ॥ ಬಸವ ದೇವನಘನಮಹತ್ವವ । ನೊಸೆದುಪೊಗಳುತತಮ್ಮಭೀಷ್ಟವ । ಕುಶಲ ದಿಂ ಪೂರೈಸಿಕೊಳುತಲಿ ತೆರಳುವರುಮತ್ತಂ ॥ ೧೮ ॥

ವಿತತವಾದಸಮಾಧಿಬಳಿಯಲಿ । ಪ್ರತಿಯಮಾವಾಸ್ಯದೊಳು ನೋಡ। ಲ್ಕತುಳಜನಗಳುಶೇರುತಿರುತಲಿತಮ್ಮಭೀಷ್ಟಗಳ ॥ ಹಿತದಿನೆರ ವೇರಿಸಿಕೊಳುತ್ತಂ । ನುತಿಸಿಪೂಜಿಸಿಬೇಡಿಕೊಳ್ಳುತ । ಕ್ಷಿತಿಯೊಳಿಂತಹ ತಾಣವಿರಳವದೆಂದುತೆರಳುವರು ॥ ೧೯ ॥

ಭೂತಗ್ರಸ್ತರುಬಂದುಜಗದೊಳು । ಖ್ಯಾತವಾದಸಮಾಧಿದರ್ಶ ನ। ವೋತುಗೈಯ್ಯಾಕ್ಷಣವೆಚೀರುತ ಕುಣಿಯುತಲಿಮತ್ತಂ ॥ ಆತುರದಿ ನಾವೀಗಪೋಪೆವು। ಭೀತಿಬರ್ಪುದುಕರುಣಿಸೈಗುರು । ತಾತನೆಯೆಂದೆ ನುತ ನಮಿಸುತಲೈದೆ ತೆರಳುವರು ॥ ೨೦ ॥

ರೋಗಪೀಡಿತರಾದಜನಗಳು । ಬೇಗದಿಂದಾಗಮಿಸುತಲ್ಲಿಯೆ । ರಾಗದಿಂ ತವೆವಾಸಗೈಯ್ಯು ಸಮಾಧಿಪೂಜೆಯನು ॥ ಸಾಗಿಸುತ್ತಿರನಸು ದಿನಗಳೊಳಿ । ರೋಗದಿಂದವಿಮುಕ್ತರಾಗುತೆ ನಾಗಭೂಷಣರೂಪರನು ಪೊಗಳುತ್ತ ತೆರಳುವರು ॥ ೨೧

ಬಡತನದೊಳಿರುತಿರ್ಪಜನಗಳು । ಬಡತನದಭೀತಿಯನುಸಹಿ ಸದೆ। ಮೃಡನರೂಪನತಾಣಕಾಗಮಿಸುತ್ತೆಜವದಿಂದ ॥ ದೃಢಮನದಿ ಪೂಜಿಸುತಪೋಗಲು । ಬಿಡದೆಕೆಲವುದಿನಂಗಳಲ್ಲಿಯೆ । ಕಡುಸುಖವು ದೊರೆಯುತ್ತ ಘನಸಡಗರದೊಳಿರುತಿರ್ಪರ್ ॥ ೨೨ ॥

ದೆಶೆದೆಶೆಯೊಳ್ಪೈತಂದಜನರತಿ । ಮಿಸುಪಗದ್ದುಗೆ ಮಹಿಮೆಪೊಗ
ಳುತ । ಸಸಿನೆಯಿಂ ಕೀರ್ತಿಸುತಸಾಷ್ಟಾಂಗದೊಳೆನಮಿಸುತ್ತ ॥ ರಸೆಯೊ
ಳೀಬಸವಾರ್ಯರನುಪಮ । ಜಸವಡೆದಮಹಿಮೆಗಳಪೊಗಳಲು ।
ಪಶುಪತಿಗೆಸಾಧ್ಯವದೆನುತ್ತಲಿಕರಗಳಂ ಮುಗಿದು ॥ ೨೩ ॥

ತ್ರಾಹಿಮಂಗಳಕೀರ್ತಿಗುರುವರ । ತ್ರಾಹಿಜಂಗಮಮೂರ್ತಿಶಿವ
ಕರ । ತ್ರಾಹಿಭಕ್ತಮನೋರಥಪ್ರದ ಪಾಹಿಸಿದ್ಧಿಕರ ॥ ತ್ರಾಹಿಲೋಕಾ
ರಾಧ್ಯಶಂಕರ । ತ್ರಾಹಿಭಕ್ತಾಘೌಘಸಂಹರ । ತ್ರಾಹಿಚರಬಸವಾ
ರ್ಯನಮ್ಮನು ಸಲಹುಸಂತತದಿ ॥ ೨೪ ॥

ಪಾಹಿಮಾಂ ಶರಣಾಗತಪ್ರಿಯ । ಪಾಹಿಮಾಂ ದುರ್ಮೋಹ
ಭಂಜನ । ಪಾಹಿಮಾಂ ಕಲ್ಯಾಣಸುಂದರಮೂರ್ತಿ ಶುಭಕೀರ್ತಿ ॥
ಪಾಹಿಮಾಂ ಸುಗುಣಾಬ್ಧಿಶಶಧರ । ಪಾಹಿಮಾಂ ಸರ್ವಾರ್ಥಸಿದ್ಧಿದ ।
ಪಾಹಿಮಾಂ ಗುರುದೇವ ಚರಬಸವಾರ್ಯಪಾಲಿಪುದು ॥ ೨೫ ॥

ಮಾರಿಮಸಣಿಬ್ರಹ್ಮರಾಕ್ಷಸ । ಘೋರಭೂತಪಿಶಾಚಢಾಕಿನಿ ।
ವೀರಶಾಕಿನಿಮೃತ್ಯುದುಷ್ಟಮೃಗಾದಿಭೇತಾಳ ॥ ಕ್ರೂರಭಯವಿಧ್ವಂಸ
ಭಕ್ತೋ । ದ್ಧಾರಘನಸಂಜೀವನಪ್ರದ । ಧೀರಗುರುವರ ಪರಮಚರಬಸ
ವಾರ್ಯಸಲಹುವದು ॥ ೨೬ ॥

ಎಂದುಬಹುಭಕ್ತಿಯೊಳುದೃಢದಿಂ । ಯಿಂದುಧರರೂಪರನುಮ
ನಕಾ । ನಂದಮಾಗುವತೆರದಿಪರಿಪರಿ ನುತಿಸಿತಮ್ಮಗಳ ॥ ಸಂದಮನ
ದಿಷ್ಟಾರ್ಥಗಳಮುದ । ದಿಂದಪಡೆದುಕೊಳುತ್ತಜವದಿಂ । ಚಂದ್ರಮೌ
ಳಿಯಸ್ಮರಿಸುತಂ ತೆರಳುವರುಪ್ರತಿನಿತ್ಯಂ ॥ ೨೭ ॥

ಪರಮಚರಬಸವಾರ್ಯಲಿಂಗದಿ । ಬೆರೆದುಜನರಿಗೆಕಾಣದಿರ್ದ
ಡು । ಮೆರೆಯುತಿರ್ಪ ಸಮಾಧಿಸ್ಥಾನದೊಳಿರ್ದುಮುದದಿಂದ ॥ ಪರ
ಮಭಕ್ತರುಬೇಡಿದಿಷ್ಟವ । ನಿರದೆನೆರವೇರಿಸುವನೀತನ । ಹಿರಿದುಮಹಿ
ಮೆಯಪೊಗಳುವಡೆನಾಗೇಂದ್ರಗಳವಲ್ಲ ॥ ೨೮ ॥

ದೇವಜಯಜಯಭಕ್ತನಿಕರವ । ಕಾವ ಜಯಜಯ ಸಕಲ ನಿರ್ಜರ । ದೇವಜಯಜಯಜಯ ಜನಾರ್ದನಬಂಧುಜಯಜಯ ತು ॥ ಪಾವಕಾಂಬಕಫಣಿವಿಭೂಷಣ । ಕಾಮಮರ್ಧನಸಕಲಲೋಕ ರ । ಜೀವರಂತರ್ಯಾಮಿಪಾಲಿಸು ಜಗವನನವರತ ॥ ೨೯ ॥

ಇಂತೆಸೆವಚರಬಸವದೇವನ । ಕಾಂತಿಮಯಪೌರಾಣವನು ಮಿಗೆ । ಸಂತಸದಿಬರದೋದಿಕೇಳಿದವೂನವರಿಗಿರದೆ ॥ ಕಂತುಹರಸಿರಿ ಸೌಖ್ಯವಾಯುನಿ । ತಾಂತಮನದೀಪ್ಸಿತವಘನತರ । ಸಂತಸದೊಳೀ ಯುವನು ನಿಜವಿದುಸತತನಂಬುವದು ॥ ೩೦ ॥

ತಿರೆಯೊಳಗೆಮಿಗಿಲಾಗಿತೋರುವ । ಪರಮಜೋತೀಪುರದೆವಾಸಿ ಸಿ । ಮೆರೆವಕವಿವರಚಂದ್ರಶೇಖರಶಾಸ್ತ್ರಿಹರುಷದೊಳು ॥ ಚರಬಸವ ಯೋಗಿಯಪುರಾಣವ । ವಿರಚಿಸಿದ ಸುಮನೋಜ್ಞಮೆನಿಸಲು । ಧರೆ ಯೊಳಾಚಂದ್ರರ್ಕವಾಗಿಯೆ ಮೆರೆಯಲೀಕೃತಿಯು ॥ ೩೧ ॥

ಶಿವಪುರಾಣಗಳನ್ನುಬರೆಯುವ । ಪ್ರವಿಮಳದಕಾರ್ಯದೊಳೆ ಮುದದಿಂ । ತವೆನಿಜಾಯುಷ್ಯವನು ಕಳೆಯಲಿಕನಿಶವೂಸಿಸುವ ॥ ಭವನಭಕ್ತಸುಚಂದ್ರಶೇಖರ । ಕವಿಯೆನಿಸಿಮೆರೆವೆನ್ನನೋಲ್ಪಿಂ । ಭುವನದೊಳುಪಡೆದಡವಿಬಸವಾರ್ಯಸೆದಸುಚರಿತ್ರೆ ॥ ೩೨ ॥

ಚೆನ್ನವೀರಮ್ಮಾಂಬೆಯಂಬುವ । ಚೆನ್ನೆಸೆವನಾಮದೊಳುಮೆರೆ ದಾ । ಸನ್ನುತದಪಿತಮಾತೆಯರ ವಿಮಲಾತ್ಮಗಳಿಗೈದೆ ॥ ನನ್ನಿಯಿಂ ಶಾಂತಿಯನು ಕುಡುಗೆಂ । ದುನ್ನತದಭಯಭಕ್ತಿಯಿಂ ಶ್ರೀ । ಚೆನ್ನಶಶಿ ಶೇಖರಗೆವಂದಿಸಿ ಬೇಡಿಕೊಳ್ಳುವೆನು ॥ ೩೩ ॥

ಸುರಭಿಕರೆಯಲಿನಿರುತತಿರೆಯೊಳು । ನೆರೆಸುಭಿಕ್ಷಗಳಾಗಲಿರದ ಲೆ । ಪರಮತರಶಿವಧರ್ಮವದು ಭರದಿಂದಪಸರಿಸಲಿ ॥ ಸಿರಿಯುಸೌ ಭಾಗ್ಯಗಳುಪೆರ್ಚಲಿ । ಧರಣಿಯುಳ್ಳನಕೀಪುರಾಣವು । ನೆರೆವಿರಾಜಿಸು ತಿರಲಿಪರಮೇಶ್ವರನಕೃಪೆಯಿರಲಿ ॥ ೩೪ ॥

ಶ್ರೀಮಹಾದೇವನಿಗೆ ಗಿರಿಜೆಗೆ। ಶ್ರೀಮಹಾಗಣಪತಿಗೆ ಸ್ಕಂದಗೆ। ಶ್ರೀಮದನುಪಮವೀರಭದ್ರಗೆ ನಂದಿಕೇಶ್ವರಗೆ ॥ ಆ ಮಹಾಬಸವಾದಿ ಪ್ರಮಥ। ಸ್ತೋಮಕೆ ಸುಕವಿಗಳಿಗೆಬುಧರಿಗೆ। ರಾಮಣೀಯಕವಾಗಿ ಮಣಿದೀಕೃತಿಯ ಮುಗಿಸುವೆನು ॥ ೩೫ ॥

ಸ್ತುತ್ಯಶಕಪದಿನೆಂಟು ನೂರರ । ವತ್ತುಮೇಲೇಳನೆಯ ಪಾರ್ಥಿವ। ವತ್ಸರದ ವರಮಾಘಶುದ್ಧಸುಪ್ರತಿಪದದೊಳಿರದೆ॥ ಚಿತ್ತಜಾರಿಯ ಕೃಪೆಯೊಳೀಘನ। ವೆತ್ತ ಚರಬಸವಾರ್ಯಕಾವ್ಯವ। ದುತ್ತಮದಿಪೊಸತೆನಿಸಿ ಸಲೆಪರಿಪೂರ್ಣವಾಗಿಹುದು ॥ ೩೬ ॥

ಮಂಗಲಂ ಚರಪುಂಗವಗೆಜಯ। ಮಂಗಲಂ ಶಿವಲಿಂಗರೂಪಗೆ। ಮಂಗಲಂ ವರಭಕ್ತಪೋಷಗೆ ಯುಕ್ತಿಕೋಶನಿಗೆ ॥ ಮಂಗಲಂ ಕರುಣಾಲವಾಲಗೆ । ಮಂಗಲಂ ಭವಭಯವಿದಾರಗೆ। ಮಂಗಲಂ ಮಹನೀಯ ಶ್ರೀ ಚರಬಸವದೇವಂಗೆ ॥ ೩೭ ॥

ಪರಮತಾರಾಗಣದಮಧ್ಯದಿ । ಮೆರೆವಚಂದ್ರಮನಂತೆಮೇಣಕ್ಷರಗಳಲಿ ಷಟ್ಟಕ್ಕರದ ಘನದಂತೆ ತಿರೆಯೊಳಗೆ ॥ ಮೆರೆಯುತಿಹುದೀ ವರಪುರಾಣವು । ನಿರುತನಿಖಿಲಪುರಾಣಮಧ್ಯದಿ । ಹರನ ಭಕ್ತರು ಕೇಳ್ವುದಿಪ್ಪತ್ತೊಂದನೆಯ ಸಂಧಿ ॥ ೩೮ ॥

ಮಂಗಳವು ಶಾಂಕರಿಗೆ ಶೈಲಜೆಗೆ ಶಾರದೆಗೆ ಮಂಗಳವು ಚಂಡಿಕೆಗೆ ಭೈರವಿಗೆ ನಿತ್ಯಂ। ಮಂಗಳವು ಮಾತೃಕೆಗೆ ಪಾವನೆಗೆ ವೈಷ್ಣವಿಗೆ ಮಂಗಳವು ಚಿತ್ಕಳೆಗೆ ಚಿನ್ಮಯೆಗೆ ನಿತ್ಯಂ ॥ ಮಂಗಳವು ಶಾಮಲೆಗೆ ಶಾಂತಳಿಗೆ ನಿರ್ಮಲೆಗೆ ಮಂಗಳವು ಕಾಳಿಕೆಗೆ ಸತ್ಯಳಿಗೆ ನಿತ್ಯಂ। ಮಂಗಳವು ಕಾಶಿಯ ಪುರೀಶ್ವರಿಗೆ ಶಾಂಭವಿಗೆ ಮಂಗಳವು ತತ್ಪರಮದೇವತೆಗೆ ನಿತ್ಯಂ ॥ ೩೯ ॥

ಸಂಧಿ ೨೧ ಕ್ಕಂ ಪದ ೧೩೧೭ ಕ್ಕಂ ಮಂಗಲಂ ಮಹಾ ಶ್ರೀ ಶ್ರೀ

ಸಮಾಪ್ತಂ

# ಶುದ್ಧಾಶುದ್ಧ ಪತ್ರಿಕೆ

| ಪುಟ | | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| ೧೬ | - | ೧೬ | ಇದರಿಂದು | ಇದನರಿಂದು |
| ೪೭ | - | ೩ | ಯುವ್ಮ್ಮಯ | ನಮ್ಮಯ |
| ೫೧ | - | ೧೦ | ತರಿಸೀರೆ | ತರಿಸೀವೆ |
| ೧೦೩ | - | ೬ | ವಸುಧೆಯೊಳು | ವಸುಧೆಯೊಳಗೀ |
| ೧೦೯ | - | ೨೪ | ಕೆಂತಿರಲಿ | ಕಂತಿರಲಿ |
| ೧೧೭ | - | ೨೧ | ಶ್ರೀ ವೀಶೈವವೆ | ಶ್ರೀ ವೀರಶೈವವೆ |
| ೧೩೫ | - | ೨ | ಸುಮ್ಮತಿ | ಸಮ್ಮತಿ |
| ೧೩೬ | - | ೧೦ | ದುರ್ಲಬರ | ದುರ್ಬಲರ |
| ೧೪೪ | - | ೩ | ಹೇಯುವವರಾದ | ಹೇಯವದಾದ |
| ೧೪೭ | - | ೧೧ | ಸ್ನೇಹದದೊ | ಸ್ನೇಹದೊ |
| ೧೫೪ | - | ೧೨ | ಮಾಗಿಹದು | ಪೂಗಿಹುದು |
| ೧೬೩ | - | ೧೭ | ರಾದ್ರಾಕ್ಷಿ | ರುದ್ರಾಕ್ಷಿ |
| ೧೬೪ | - | ೧೬ | ಗರ್ವೋದ್ಯೂತ | ಗರ್ವೋದ್ಧೂತ |
| ೧೬೫ | - | ೯ | ಪರವೊಂದಾರ | ಪರಮೋದಾರ |
| ೧೬೬ | - | ೧ | ಲರಿವಿಂ | ಲರಿವಿಂ |
| ೧೬೬ | - | ೬ | ಸರವಿಯೊಲಿದಾ | ಸರವಿಯೊಲದಾ |
| ೧೬೬ | - | ೧೨ | ಕುಂದಿಲಿ | ಕುಂದಲಿ |
| ೧೭೩ | - | ೧೧ | ಲುರುತನರದ | ಲುರುತರದ |
| ೧೯೭ | - | ೧೨ | ಗೈದರು | ಗೈದವರು |
| ೨೦೧ | - | ೨೨ | ನಾಲಿವುದೀ | ನಾಲಿಪುದೀ |
| ೨೦೭ | - | ೧೦ | ಅಸಮನಯನ | ಅಸಮನಯನನ |
| ೨೦೭ | - | ೨೦ | ಚರವರೀಗ | ಚರವರರೀಗ |
| ೨೦೫ | - | ೧೨ | ಗವಿುಸಿದರಿರವೆ | ಗವಿುಸಿದನಿರದೆ |
| ೨೧೮ | - | ೨೦ | ಮುವುಟ್ಟುವದೇ | ಪುಟ್ಟುವದೇ |
| ೨೨೪ | - | ೧೬ | ಕೆಸೆಯುತಂ | ಕೆರೆಯುತಂ |
| ೨೨೯ | - | ೭ | ಪೂಜಿಶಲ | ಪೂಜಿಶಲು |
| ೨೩೦ | - | ೧೫ | ತಾತನೆ | ತಾತನೇ |

